# "ಪ್ರೌಢಶಾಲೆಗಳಲ್ಲಿ ಕನ್ನಡ ಭಾಷಾ ಕಲಿಕೆ–ಒಂದು ಅಧ್ಯಯನ"

ಕನ್ನಡ ಸಾಹಿತ್ಯದಲ್ಲಿ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ)

ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ

ಸಂಶೋಧನಾ ಮಹಾಪ್ರಬಂಧ.

* * * * * * * * * * * * * *

ಅಧ್ಯಯನ ಕೇಂದ್ರ

ರಾಷ್ಟ್ರಕವಿ ಎಂ.ಗೋವಿಂದ ಪೈ ಸಂಶೋಧನಾ ಕೇಂದ್ರ,

ಎಂ.ಜಿ.ಎಂ ಕಾಲೇಜು ಆವರಣ, ಕುಂಜಿಬೆಟ್ಟು, ಉಡುಪಿ.



೨೦೧೪

* * * * * * * * * * * * * * *

# "ಪ್ರೌಢಶಾಲೆಗಳಲ್ಲಿ ಕನ್ನಡ ಭಾಷಾ ಕಲಿಕೆ–ಒಂದು ಅಧ್ಯಯನ"

ಕನ್ನಡ ಸಾಹಿತ್ಯದಲ್ಲಿ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ)

ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ

ಸಂಶೋಧನಾ ಮಹಾಪ್ರಬಂಧ.

* * * * * * * * * * * * * *

* * * * * * * * * * * * * *

ಅಧ್ಯಯನ ಕೇಂದ್ರ,

ರಾಷ್ಟ್ರಕವಿ ಎಂ.ಗೋವಿಂದ ಪೈ ಸಂಶೋಧನಾ ಕೇಂದ್ರ,

ಎಂ.ಜಿ.ಎಂ ಕಾಲೇಜು ಆವರಣ, ಕುಂಜಿಬೆಟ್ಟು, ಉಡುಪಿ,

೨೦೧೪

* * * * * * * * * * * * * *

# ಪರಿವಿಡಿ

## ೭. ಅನುಬಂಧಗಳು ೨೨೫ - ೨೬೨

೭.೧. ಕನ್ನಡ ಭಾಷಾ ಕಲಿಕೆಗೆ ಸಂಬಂಧಿಸಿದಂತೆ ಇದುವರೆಗಿನ ಕೆಲವು ಅಧ್ಯಯನಗಳು

೭.೨. ಸಂದರ್ಶಿಸಿದ ಶಾಲೆಗಳ ಜಿಲ್ಲಾವಾರು ವಿವರ

೭.೩. ಮಾಹಿತಿದಾರರ ವಿವರ

೭.೪. ಕ್ಷೇತ್ರಕಾರ್ಯದ ಪ್ರಶ್ನಾವಳಿಗಳು

೭.೫. ಕ್ಷೇತ್ರಕಾರ್ಯದ ಚಟುವಟಿಕೆಗಳ ವಿವರ

ಅ) ಆಶುಭಾಷಣ ವಿಷಯಗಳು

ಆ) ಅಭಿನಯ ವಿಷಯಗಳು

ಇ) ಉಕ್ತಲೇಖನದ ವಾಕ್ಯಗಳು

ಈ) ಓದುವಿಕೆಯ ವಾಕ್ಯಗಳು

೭.೬. ಮೌಲ್ಯಮಾಪನ ತಖ್ತೆಗಳು

೭.೭. ಆಕರ ಗ್ರಂಥಗಳು

# ಅಧ್ಯಾಯ – ೧

## ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ಸ್ವರೂಪ, ವಿಧಾನ ಮತ್ತು ಸೈದ್ಧಾಂತಿಕ ಹಿನ್ನೆಲೆ

೧.೩. ಕ್ಷೇತ್ರಕಾರ್ಯ

೧.೪. ಅಧ್ಯಯನದ ಮಿತಿ

೧.೫. ಅಧ್ಯಯನದ ಮಹತ್ವ

೧.

## ಪ್ರಸ್ತಾವನೆ

ಯಾವುದೇ ಒಂದು ರಾಷ್ಟ್ರದ ಅಭ್ಯುದಯಕ್ಕೆ ಅಲ್ಲಿನ ಶೈಕ್ಷಣಿಕ ವ್ಯವಸ್ಥೆಯು ಭದ್ರ ಬುನಾದಿಯಾಗಿರುತ್ತದೆ. ಶಿಕ್ಷಣಕ್ಷೇತ್ರದ ಪ್ರಗತಿಯು ಅಲ್ಲಿನ ಮಾನವ ಸಂಪನ್ಮೂಲದ ಸದ್ಬಳಕೆಗೆ ಕಾರಣವಾಗುವುದರೊಂದಿಗೆ, ಅಲ್ಲಿನ ಆರ್ಥಿಕ, ಸಾಮಾಜಿಕ, ರಾಜಕೀಯ, ನೈತಿಕ ಗುಣಮಟ್ಟವು ಸುಧಾರಣೆಯಾಗಿ ರಾಷ್ಟ್ರದ ಸರ್ವಾಂಗೀಣ ಅಭಿವೃದ್ಧಿಗೂ ನಾಂದಿಯಾಗುತ್ತದೆ ಎಂಬ ಪರಿಕಲ್ಪನೆ ಎಲ್ಲಾ ದೇಶಗಳ ಶೈಕ್ಷಣಿಕ ವ್ಯವಸ್ಥೆ ಹೊಂದಿದೆ. ಈ ನಿಟ್ಟಿನಲ್ಲಿ ಭಾರತ ದಿಟ್ಟ ಹೆಜ್ಜೆಯನ್ನೇ ಇಟ್ಟಿದೆ. ಶಿಕ್ಷಣಕ್ಕಾಗಿ 'ಎಜುಸ್ಯಾಟ್' ಎಂಬ ಉಪಗ್ರಹವೊಂದನ್ನೇ ಹಾರಿಸಿದ ಪ್ರಪಂಚದ ಮೊದಲ ದೇಶ ನಮ್ಮದು. ಕೋಟಿಗಟ್ಟಲೆ ಹಣವನ್ನು ಶಿಕ್ಷಣಕ್ಕಾಗಿ, ಶಿಕ್ಷಣದ ಗುಣಮಟ್ಟವನ್ನು ಕಾಯ್ದುಕೊಳ್ಳಲಿಕ್ಕಾಗಿ ಇಂದು ವ್ಯಯಿಸಲಾಗುತ್ತಿದೆ. ಮೊದಲಿಯಾರ್ ಆಯೋಗದಿಂದ ಹಿಡಿದು ಸರ್ವಶಿಕ್ಷಣ ಆಭಿಯಾನದವರೆಗೂ ಬಂದ ಶಿಕ್ಷಣ ತಜ್ಞರ ಆಯೋಗಗಳು, ಯೋಚನೆ-ಯೋಜನೆಗಳು, ಕಾರ್ಯಕ್ರಮಗಳು, ಕಾರ್ಯಾಗಾರಗಳು ಅಸಂಖ್ಯ. ಈ ಎಲ್ಲಾ ಶ್ರಮದ, ಕಾರ್ಯಯೋಜನೆಗಳ ಹಿಂದೆ ಅತ್ಯುತ್ತಮವಾದ ಹಾಗೂ ಗುಣಾತ್ಮಕವಾದ ಶಿಕ್ಷಣ ನೀಡುವುದರ ಮೂಲಕ ವಿದ್ಯಾರ್ಥಿಗಳನ್ನು ಉತ್ತಮ ಪ್ರಜೆಗಳನ್ನಾಗಿ ರೂಪಿಸುವ ಉದ್ದೇಶವಿದೆ.

ಶಿಕ್ಷಣದ ಎಲ್ಲಾ ಬಗೆಯ ಜ್ಞಾನಶಾಖೆಗಳ ಬೋಧನೆಗೆ ಹಾಗೂ ಕಲಿಕೆಗೆ ಭಾಷಾ ಮಾಧ್ಯಮ ಅತ್ಯಂತ ಆವಶ್ಯಕ. ಹೊಸ ವಿಚಾರಗಳನ್ನು ಕಲಿಯಲು, ಕಲಿತ ವಿಚಾರಗಳನ್ನು ಸ್ಪಷ್ಟವಾಗಿ ಗ್ರಹಿಸಲು, ಗ್ರಹಿಸಿದ ವಿಚಾರಗಳನ್ನು ಮನನಮಾಡಿಕೊಳ್ಳಲು ಮತ್ತು ಮನನ ಮಾಡಿಕೊಂಡ ವಿಚಾರಗಳನ್ನು ಸಾಂದರ್ಭಿಕವಾಗಿ ಹಾಗೂ ಸಮರ್ಥವಾಗಿ ಅಭಿವ್ಯಕ್ತಿಗೊಳಿಸಲು ಭಾಷೆಯೇ ಅಂತಿಮ ಹಾಗೂ ಸಮರ್ಥ ಸಾಧನ. ಭಾಷೆಯಿಲ್ಲದೆ ಯಾವ ಜ್ಞಾನವೂ ಸಂವಹನವಾಗದು. ಜ್ಞಾನಶಾಖೆಯನ್ನು ವಿದ್ಯಾರ್ಥಿ ಯಾವ ಭಾಷೆಯಲ್ಲಿ ಗ್ರಹಿಸುತ್ತಾನೋ ಆ ಭಾಷೆಯಲ್ಲಿ ಆತನಿಗಿರುವ ಪ್ರಭುತ್ವದ ಮಟ್ಟವು ಆತನ ಜ್ಞಾನಶಾಖೆಯ ಪ್ರಭುತ್ವದ ಮಟ್ಟವನ್ನೂ ನಿರ್ಧರಿಸುತ್ತದೆ. ಆದುದರಿಂದ ಶೈಕ್ಷಣಿಕ ಕ್ಷೇತ್ರದಲ್ಲಿ, ಭಾಷಾ ಕಲಿಕೆ ಹಾಗೂ ಭಾಷೆಯ ಮೂಲಕ ಕಲಿಕೆ ಎಂಬ ವಿಚಾರಗಳು ಅತ್ಯಂತ ಮುಖ್ಯವಾಗುತ್ತವೆ.

ಭಾರತದಲ್ಲಿ ಭಾಷಾವಾರು ಪ್ರಾಂತ್ಯಗಳ ವಿಂಗಡಣೆಯಾದ ಮೇಲೆ, ಕನ್ನಡವನ್ನು ಕರ್ನಾಟಕದಲ್ಲಿ ಸಂವಿಧಾನಾತ್ಮಕ ನೆಲೆಯಲ್ಲಿ ಮಾತೃಭಾಷೆಯೆಂದು ಅಂಗೀಕರಿಸಲಾಗಿದೆ. ಕರ್ನಾಟಕದ ಬಹುತೇಕ ವಿದ್ಯಾರ್ಥಿಗಳು ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯುತ್ತಿದ್ದಾರೆ ಹಾಗೂ ಕನ್ನಡ ಮಾಧ್ಯಮದ ಮೂಲಕ ಇತರ ಜ್ಞಾನಶಾಖೆಗಳನ್ನೂ ಅಭ್ಯಾಸಮಾಡುತ್ತಿದ್ದಾರೆ. ಪ್ರಾಥಮಿಕ ಶಾಲಾ ಶಿಕ್ಷಣದಿಂದ ಪದವಿಪೂರ್ವ ಶಿಕ್ಷಣದವರೆಗೆ ಪಠ್ಯಪುಸ್ತಕಗಳು ಕರ್ನಾಟಕದ

ವ್ಯಾಪ್ತಿಯಲ್ಲಿ ಏಕರೂಪಿಯಾಗಿವೆ. ಈ ನೆಲೆಗಟ್ಟಿನಲ್ಲಿ ಕನ್ನಡ ಭಾಷೆಯ ಕಲಿಕೆ, ಕನ್ನಡ ಭಾಷೆಯ ಕುರಿತಾದ ಕಲಿಕೆ ಹಾಗೂ ಕನ್ನಡ ಭಾಷೆಯ ಮೂಲಕ ಕಲಿಕೆ ಎಂಬ ವಿಚಾರಗಳ ಅಧ್ಯಯನವು ಮಹತ್ವದ್ದೆನಿಸುತ್ತದೆ. ಈ ಹಿನ್ನೆಲೆಯಲ್ಲಿ ನಡೆದ ಅಧ್ಯಯನಗಳನ್ನು ಗಮನಿಸಿದರೆ ಪ್ರೌಢಶಾಲಾ ಶಿಕ್ಷಣ, ಪದವಿ ಪೂರ್ವ ತರಗತಿ, ಪದವಿ ತರಗತಿ ಹಾಗೂ ಸ್ನಾತಕೋತ್ತರ ತರಗತಿಗಳಲ್ಲಿನ ಕನ್ನಡ ಭಾಷಾ ಕಲಿಕೆಯ ಕುರಿತಾದ ಅಧ್ಯಯನಗಳು ತೀರಾ ಕಡಿಮೆ. ಪ್ರಾಥಮಿಕ ಶಾಲಾ ಶಿಕ್ಷಣದಲ್ಲಿನ ಕನ್ನಡ ಭಾಷಾ ಕಲಿಕೆಯ ಕುರಿತು ಜಾತಿ, ಜನಾಂಗ, ಗಡಿನಾಡು ಹಾಗೂ ಜಿಲ್ಲೆಗಳ ವ್ಯಾಪ್ತಿಯ ಮಿತಿಯಲ್ಲಿ ಬೆರಳೆಣಿಕೆಯಷ್ಟು ಅಧ್ಯಯನಗಳು ನಡೆದಿವೆ. ಪ್ರೌಢಶಾಲಾ ಕನ್ನಡ ಭಾಷಾ ಕಲಿಕೆಯ ಕುರಿತು ಕರ್ನಾಟಕ ರಾಜ್ಯದ ವ್ಯಾಪ್ತಿಯಲ್ಲಿ ಅಧ್ಯಯನಗಳು ನಡೆದಿಲ್ಲ. ಪ್ರೌಢಶಾಲಾ ಶಿಕ್ಷಣದಲ್ಲಿ ಕನ್ನಡ ಭಾಷಾ ಪಠ್ಯಪುಸ್ತಕಗಳು ರಾಜ್ಯದ ವ್ಯಾಪ್ತಿಯಲ್ಲಿ ಏಕರೂಪಿಯಾಗಿರುವುದರಿಂದ ಪ್ರಸ್ತುತ ಅಧ್ಯಯನವು ಸಕಾಲಿಕವಾಗಿದೆ.

ಪ್ರಾಥಮಿಕದಿಂದ ಪ್ರೌಢಶಾಲಾ ಶಿಕ್ಷಣದವರೆಗಿನ ಹಂತಗಳಲ್ಲಿ ಇಂದು ಲಕ್ಷಾಂತರ ವಿದ್ಯಾರ್ಥಿಗಳು ಕನ್ನಡವನ್ನು ಒಂದು ಭಾಷೆಯಾಗಿ ಅಥವಾ ಕಲಿಕೆಯ ಮಾಧ್ಯಮವಾಗಿ ಅನುಸರಿಸುತ್ತಿದ್ದಾರೆ. ೨೦೧೨-೧೩ರ ಸರ್ವ ಶಿಕ್ಷಣ ಅಭಿಯಾನದ ವರದಿಯ ಪ್ರಕಾರ ಕರ್ನಾಟಕದಲ್ಲಿ ೬೦೦೩೬ ಪ್ರಾಥಮಿಕ ಶಾಲೆಗಳು ಹಾಗೂ ೧೪೮೧೪ ಪ್ರೌಢಶಾಲೆಗಳಿವೆ.[೧] ಆಡಳಿತವಾರು ಈ ಶಾಲೆಗಳು ಈ ಕೆಳಗಿನಂತೆ ಹಂಚಲ್ಪಟ್ಟಿವೆ.

| | ಕಿರಿಯ ಪ್ರಾಥಮಿಕ ಶಾಲೆಗಳು | ಹಿರಿಯ ಪ್ರಾಥಮಿಕ ಶಾಲೆಗಳು | ಪ್ರೌಢಶಾಲೆಗಳು | ಒಟ್ಟು |
|---|---|---|---|---|
| ಸಾರ್ವಜನಿಕ ಶಿಕ್ಷಣ ಇಲಾಖೆ | ೨೨೧೦೫ | ೨೨೫೬೭ | ೪೪೪೨ | ೪೯೧೧೪ |
| ಸಮಾಜ ಕಲ್ಯಾಣ ಇಲಾಖೆ | ೧೩೫ | ೫೭೬ | ೫೪೬ | ೧೨೫೭ |
| ಅನುದಾನಿತ | ೨೨೨ | ೨೫೮೬ | ೩೫೪೭ | ೬೩೫೫ |
| ಅನುದಾನ ರಹಿತ | ೩೪೮೬ | ೮೨೫೯ | ೫೫೭೦ | ೧೭೩೧೫ |
| ಕೇಂದ್ರೀಯ ಆಡಳಿತ | ೨ | ೯೮ | ೮೯ | ೧೮೯ |
| ಒಟ್ಟು | ೨೫೯೫೦ | ೩೪೦೮೬ | ೧೪೮೧೪ | ೭೪೨೩೦ |

ಒಟ್ಟು ೭೪೨೩೦ ಶಾಲೆಗಳಲ್ಲಿ ವಿದ್ಯಾರ್ಥಿಗಳು ಕನ್ನಡವನ್ನು ಪ್ರಥಮ ಭಾಷೆಯಾಗಿ, ದ್ವಿತೀಯ ಭಾಷೆಯಾಗಿ, ತೃತೀಯ ಭಾಷೆಯಾಗಿ ಕಲಿಯುತ್ತಿದ್ದಾರೆ ಹಾಗೂ ೫೦೦೦ಕ್ಕೂ ಹೆಚ್ಚು ಶಾಲೆಗಳಲ್ಲಿ ಕನ್ನಡವು ಕಲಿಕಾ ಮಾಧ್ಯಮದ ಭಾಷೆಯಾಗಿದೆ.

ಕರ್ನಾಟಕದಲ್ಲಿ ಕನ್ನಡವನ್ನು ಮಾತೃಭಾಷೆಯ ನೆಲೆಯಲ್ಲಿ ಒಪ್ಪಿಕೊಂಡಿದ್ದು, ಸಂವಿಧಾನಾತ್ಮಕವಾಗಿ ಕಲಿಕಾ ಮಾಧ್ಯಮವನ್ನಾಗಿಯೂ ಒಪ್ಪಿಕೊಳ್ಳಲಾಗಿದೆ. ಕನ್ನಡ ಮಾಧ್ಯಮದಲ್ಲೇ ಏಳು ವರ್ಷಗಳ ಪರ್ಯಂತ ಕನ್ನಡವನ್ನು ಕಲಿತರೂ ಕೂಡ ಪ್ರೌಢಶಾಲೆಯ ಅನೇಕ ವಿದ್ಯಾರ್ಥಿಗಳು ಕನ್ನಡ ಭಾಷಾ ಕೌಶಲದ ಕಲಿಕೆಯಲ್ಲಿಯೇ ಹಿಂದುಳಿದಿದ್ದಾರೆ, ಭಾಷಾಕಲಿಕೆಯಿಂದ ಆಗಬಹುದಾದ ಸೃಷ್ಟಿಶೀಲತೆ ಸಾಧ್ಯವಾಗುತ್ತಿಲ್ಲ, ಭಾಷಿಕ ಕನಿಷ್ಠ ಸಾಮರ್ಥ್ಯಗಳೂ ಸಿದ್ಧಿಸುತ್ತಿಲ್ಲ ಎಂಬ ಅಭಿಪ್ರಾಯ ಸಾರ್ವಜನಿಕ ವಲಯದಲ್ಲಿ ದಟ್ಟವಾಗಿದೆ. ಹಲವು ಸಮೀಕ್ಷೆಗಳ ವರದಿಗಳೂ ಇದನ್ನು ಪುಷ್ಟೀಕರಿಸುತ್ತವೆ.

೨೦೦೯ರಲ್ಲಿ Annual status of education report (ASER) ನಡೆಸಿದ ಸಮೀಕ್ಷೆಯ ಪ್ರಕಾರ ಕರ್ನಾಟಕದ ಶೈಕ್ಷಣಿಕ ಸ್ಥಿತಿ ಬಿಹಾರ ಮತ್ತು ಮಧ್ಯ ಪ್ರದೇಶಗಳಿಗಿಂತ ಅತ್ಯಂತ ಕಳಪೆ ಮಟ್ಟದಲ್ಲಿದೆ. ರಾಜ್ಯದಲ್ಲಿ ನಾಲ್ಕನೆಯ ತರಗತಿಯಿಂದ ಏಳನೆಯ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ಶೇಕಡಾ ೬೭ರಷ್ಟು ಮಕ್ಕಳು ಮಾತ್ರ ಎರಡನೆಯ ತರಗತಿಯ ಕನ್ನಡ ಪಠ್ಯಪುಸ್ತಕವನ್ನು ಸ್ಪಷ್ಟವಾಗಿ ಓದಬಲ್ಲರು. ಮಧ್ಯಪ್ರದೇಶದಲ್ಲಿ ಶೇಕಡಾ ೯೨ ಹಾಗೂ ಬಿಹಾರದಲ್ಲಿ ಶೇಕಡಾ ೮೩ರಷ್ಟು ಮಕ್ಕಳು ಮಾತೃಭಾಷೆಯಲ್ಲಿ ಸ್ಪಷ್ಟವಾಗಿ ಓದುತ್ತಾರೆ[೨]. ಎಂದು ಈ ವರದಿ ತಿಳಿಸುತ್ತದೆ. ೨೦೧೦ರಲ್ಲಿ ನಡೆದ ರಾಜ್ಯ ಮಟ್ಟದ ಶಿಕ್ಷಣ ಇಲಾಖಾ ಅಧಿಕಾರಿಗಳ ಸಮಾವೇಶದಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು, 'ಹಿಂದುಳಿದ ರಾಜ್ಯ ಎಂಬ ಹಣೆಪಟ್ಟಿ ಹೊಂದಿದ್ದ ಬಿಹಾರಕ್ಕಿಂತಲೂ ಕರ್ನಾಟಕದ ಶೈಕ್ಷಣಿಕ ಸ್ಥಿತಿ ಕೆಟ್ಟದ್ದಾಗಿದೆ' ಎಂಬುದನ್ನು ಬಹಿರಂಗಗೊಳಿಸಿದ್ದಾರೆ ಎಂಬಂತಹ ವಿಚಾರಗಳು ಪ್ರಸ್ತುತ ಅಧ್ಯಯನಕ್ಕೆ ಪ್ರೇರಣೆಯಾಗಿವೆ.

ಈ ನಿಟ್ಟಿನಲ್ಲಿ ಕನ್ನಡವನ್ನು ಪ್ರಥಮಭಾಷೆಯನ್ನಾಗಿ ಕಲಿಯುತ್ತಿರುವ ಪ್ರೌಢಶಾಲಾ ವಿದ್ಯಾರ್ಥಿಗಳು ಕನ್ನಡ ಭಾಷಾ ಕೌಶಲಗಳ ಕಲಿಕೆಯಲ್ಲಿ ಎದುರಿಸುತ್ತಿರುವ ಸಮಸ್ಯೆಗಳು, ಆಧುನಿಕ ಸಮಾಜದ ನಿರೀಕ್ಷೆಗಳಿಗೆ ಬೋಧನಾ ವಿಧಾನಗಳು ಎಷ್ಟರಮಟ್ಟಿಗೆ ಪೂರಕವಾಗಿವೆ, ಗುಣಾತ್ಮಕ ಶಿಕ್ಷಣದ ಹಿನ್ನೆಲೆಗಾಗಿ ಆಧುನಿಕ ತಂತ್ರಜ್ಞಾನಗಳನ್ನು ಕನ್ನಡ ಭಾಷಾ ಬೋಧನೆಯಲ್ಲಿ ಎಷ್ಟರಮಟ್ಟಿಗೆ ಉಪಯೋಗಿಸಲಾಗುತ್ತಿದೆ ಮತ್ತು ಭಾಷಾಕಲಿಕೆಯ ಹಾಗೂ ಬೋಧನೆಯ ಸನ್ನಿವೇಶದಲ್ಲಿ ಕನ್ನಡ ಭಾಷಾ ಬೋಧನೆಯ ಉದ್ದೇಶಗಳು ಎಷ್ಟರಮಟ್ಟಿಗೆ ಸಾಧಿತವಾಗುತ್ತಿವೆ ಎಂಬುದನ್ನು ಶೋಧಿಸುವುದು, ಬೋಧನಾ ಹಾಗೂ ಕಲಿಕಾ ಸಂಬಂಧಿತವಾದ ಸಮಸ್ಯೆಗಳಿಗೆ ಸೂಕ್ತ ಪರಿಹಾರಗಳು ಯಾವುವು ಎಂಬುದನ್ನು ತಿಳಿಯುವುದು ಈ ನಿಟ್ಟಿನಲ್ಲಿ ಮುಖ್ಯವಾಗುತ್ತದೆ.

## ೧.೧ ಅಧ್ಯಯನದ ಉದ್ದೇಶ.

ಕನ್ನಡ ಬಹುತ್ವದ ಭಾಷೆ. ಕನ್ನಡ ಎಂದರೆ ಒಂದಲ್ಲ. ಇದರೊಳಗೆ ಹಲವು ಕನ್ನಡಗಳಿವೆ. ಕರ್ನಾಟಕದ ಪ್ರಾದೇಶಿಕ ಭಿನ್ನತೆಯಿಂದಾಗಿ ಇಲ್ಲಿನ ಪ್ರೌಢಶಾಲಾ ವಿದ್ಯಾರ್ಥಿಗಳೆಲ್ಲಾ ಬಹುತ್ವದ ಹಿನ್ನೆಲೆಯ ವಿದ್ಯಾರ್ಥಿಗಳಾಗಿದ್ದಾರೆ. ಶಾಲಾ ಶಿಕ್ಷಣದಲ್ಲಿ ಇವರಿಗೆಲ್ಲಾ ಏಕರೂಪೀ ಪಠ್ಯವಿದೆ. ಗ್ರಂಥಸ್ಥ ಕನ್ನಡದ ಪ್ರಮಾಣಬದ್ಧ ಭಾಷೆಯನ್ನು ಅಳವಡಿಸಲಾಗಿದೆ. ಬಹುತ್ವದ ಹಿನ್ನೆಲೆಯ ವಿದ್ಯಾರ್ಥಿಗಳಿಗೆ ಗ್ರಂಥಸ್ಥ ಕನ್ನಡದ ಕೌಶಲವನ್ನು ಕಲಿಸುವ ನಿಟ್ಟಿನಲ್ಲಿ ವಿದ್ಯಾರ್ಥಿ ಕೇಂದ್ರಿತವಾದ ಕಲಿಕಾ ನಿಯಮಗಳನ್ನು ಕಂಡುಕೊಳ್ಳುವುದು ಈ ಅಧ್ಯಯನದ ಉದ್ದೇಶ.

"......ನಾಲ್ಕೈದು ವರ್ಷ ಹೋದರೂ ಕನ್ನಡ ಮನೆ ಮಾತಾದ ಮಕ್ಕಳಿಗೆ ಕನ್ನಡ ಬರೆಯಲು ಬಾರದು, ಓದಲು ಬಾರದು ಎಂದರೆ ಅವರಲ್ಲಿರುವ ಶಕ್ತಿಯನ್ನು ನಾವು ಕೊಂದು ಅಂಥ ಅವಸ್ಥೆಗೆ ತಂದಿದ್ದೇವೆ ಎಂದೇ ಅರ್ಥ. ಶಿಕ್ಷಣ ಸಿದ್ಧಾಂತಗಳ ನಿಕಟ ಪರಿಚಯವಿದ್ದರೆ ಓದು ಬರೆಹಕ್ಕೆ ಒಂದೆರಡು ವರ್ಷಗಳ ಅವಧಿ ಧಾರಾಳ ಸಾಕು...."[೩] ಕೇವಲ ಓದು ಹಾಗೂ ಬರಹಕ್ಕೆ ಯಾಂತ್ರಿಕವಾದ ಮಹತ್ವವನ್ನು ನೀಡಿ, ಮಾತನಾಡುವುದನ್ನು ಮತ್ತು ಆಲಿಸುವುದನ್ನು ನಿರ್ಲಕ್ಷಿಸಿರುವುದು, ನಮ್ಮ ಭಾಷಾ ಕಲಿಕೆಯ ಮಹತ್ವದ ದೋಷಗಳಲ್ಲಿ ಒಂದಾಗಿದೆ. ಇದನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಭಾಷೆಯೊಂದನ್ನು ಕಣ್ಣಿಗೆ ಕಾಣುವಂತೆ ಹಿಡಿದಿಡುವ ಕಾರ್ಯವನ್ನು ಲಿಪಿಯು ಮಾಡುತ್ತದೆ. ಶ್ರವಣರೂಪೀ ಭಾಷೆಯನ್ನು ಚಾಕ್ಷುಷ ರೂಪದಲ್ಲಿ ನೋಡಲು ಲಿಪಿಯೇ ಮಾಧ್ಯಮ. ಕನ್ನಡವು ಶಾಸ್ತ್ರಬದ್ಧ ಹಾಗೂ ವೈಜ್ಞಾನಿಕ ಲಿಪಿಯನ್ನು ಹೊಂದಿದ ಭಾಷೆ. ಆಡುವ ಮಾತನ್ನು ಯಥಾವತ್ತಾಗಿ ಲಿಪಿಗೆ ಇಳಿಸಬಹುದಾದ ವ್ಯವಸ್ಥೆಯನ್ನು ಹೊಂದಿರುವ ಭಾಷೆ. ವಿದ್ಯಾರ್ಥಿಗಳಿಗೆ ಔಪಚಾರಿಕ ಶಾಲಾ ಪರಿಸರದಲ್ಲಿ ಲಿಪಿಯನ್ನು ಪ್ರಥಮವಾಗಿ ನಿಯಮಬದ್ಧವಾಗಿ ಪರಿಚಯಿಸಿ ಕಲಿಸಲಾಗುತ್ತದೆ. ಪಾಠ, ಪದ್ಯಗಳಲ್ಲಿರುವ ಪ್ರತಿಯೊಂದು ಅಂಶಗಳನ್ನೂ ಲಿಪಿಯ ಮೂಲಕ ವಿದ್ಯಾರ್ಥಿಗಳು ಅರ್ಥವಿಸಿಕೊಳ್ಳುತ್ತಾರೆ. ವಿದ್ಯಾರ್ಥಿಗಳು ಸ್ವಾಧ್ಯಾಯವನ್ನು ಮಾಡಬೇಕಾದರೆ ಲಿಪಿಯ ಗ್ರಹಿಕೆ ಸಿದ್ಧಿಸಿರಬೇಕು. ಲಿಪಿಸಂಕೇತಗಳ ಮೂಲಕವೇ ಶಿಕ್ಷಣದ ಹೆಚ್ಚಿನ ಗುರಿಗಳು ಸಾಧಿತವಾಗುತ್ತವೆ. ಆದರೆ ಈಗಾಗಲೇ ತಾವು ಕಲಿತ ಶ್ರವಣ ರೂಪದ ಭಾಷೆಯನ್ನು ಲಿಪಿಯ ಲಿಖಿತ ಸಂಕೇತಗಳಾಗಿ ಗ್ರಹಿಸುವಲ್ಲಿ ವಿದ್ಯಾರ್ಥಿಗಳಿಗೆ ಏಳು ಎಂಟು ವರ್ಷಗಳ ನಿರಂತರ ಕಲಿಕೆಯಿಂದಲೂ ಸಾಧ್ಯವಾಗದ ಸನ್ನಿವೇಶ ಪ್ರಸ್ತುತ ಕನ್ನಡ ಭಾಷಾ ಕಲಿಕಾ ವಾತಾವರಣದಲ್ಲಿದೆ. ಭಾಷಿಕ ಕೌಶಲದ ಕಲಿಕೆಯಲ್ಲಿರುವ ಈ ಮೂಲಭೂತ ಸಮಸ್ಯೆಗೆ ಕಾರಣ ಮತ್ತು ಪರಿಹಾರಗಳನ್ನು ಕಂಡುಕೊಳ್ಳುವುದು ಈ ಅಧ್ಯಯನದ ಮೂಲ ಉದ್ದೇಶಗಳಲ್ಲಿ ಒಂದಾಗಿದೆ.

ಇತ್ತೀಚಿನ ದಿನಗಳಲ್ಲಿ ಕನ್ನಡ ಶಾಲೆಗಳು ಮುಚ್ಚುತ್ತಿರುವ ಬಗ್ಗೆ ವ್ಯಾಪಕ ಚರ್ಚೆಯಾಗುತ್ತಿದೆ. ಮಧ್ಯಮ ವರ್ಗದ ಜನರಿಗಿರುವ ಆಂಗ್ಲ ಭಾಷಾಪ್ರೇಮವು ಕನ್ನಡ ಶಾಲೆಗಳ ಅವನತಿಯ ಕಾರಣಗಳಲ್ಲಿ ಒಂದು. ಜಾಗತೀಕರಣದ ವ್ಯಾಪಾರೀ ಮನೋಭಾವವು ಇಲ್ಲಿ ಕಾರ್ಯ ನಿರ್ವಹಿಸಿದೆ ಎಂಬುದನ್ನು ಒಪ್ಪಿಕೊಳ್ಳಬಹುದು. ಆದರೆ, ಕನ್ನಡದ ಬಗ್ಗೆ ಆಸಕ್ತಿ ಹುಟ್ಟಿಸುವಲ್ಲಿ ಭಾಷಾ ಪಠ್ಯಗಳು, ಬೋಧನಾ ವಿಧಾನಗಳು, ಭಾಷಾ ಕಲಿಕಾ ಸಲಕರಣೆಗಳು, ಬೋಧನೆಯಲ್ಲಿ ಬಳಸುತ್ತಿರುವ ಆಧುನಿಕ ತಂತ್ರಜ್ಞಾನ, ಶಾಲಾ ಸೌಲಭ್ಯಗಳು ಎಷ್ಟು ಪರಿಣಾಮಕಾರಿಯಾಗಿವೆ ಎಂಬುದು ಎಲ್ಲೂ ಚರ್ಚಿತವಾಗಿರುವುದು ಕಂಡುಬರುವುದಿಲ್ಲ. ಇಂತಹ ಮೂಲ ಸಮಸ್ಯೆಗಳನ್ನು ಚರ್ಚಿಸಬೇಕಾದರೆ, ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಣದಲ್ಲಿ ಕನ್ನಡ ಬಳಕೆಯ ಸ್ವರೂಪವನ್ನು ಅಧ್ಯಯನ ಮಾಡುವುದು ಅತೀ ಅಗತ್ಯವಾಗಿದೆ. ಈ ದೃಷ್ಟಿಯಿಂದ ಈ ಅಧ್ಯಯನವು ಸಕಾಲಿಕವಾಗಿದೆ.

ಭಾಷಾ ಕಲಿಕೆಯ ಆಧುನಿಕ ವಿಚಾರಗಳು, ಸಿದ್ಧಾಂತಗಳು, ಭಾಷಾಕಲಿಕೆಯ ತತ್ವಗಳು, ಭಾಷಾ ಅಧ್ಯಯನ ವಿಚಾರಗಳು, ಆಧುನಿಕ ಭಾಷಾವಿಜ್ಞಾನ, ಮಾಹಿತಿ ತಂತ್ರಜ್ಞಾನದ ಬಳಕೆ, ವಿದ್ಯಾರ್ಥಿ, ಶಿಕ್ಷಕ, ಪಾಲಕರಿಂದ ಪಡೆದ ದತ್ತ ಮಾಹಿತಿಗಳು ಈ ಮೊದಲಾದ ವಿಚಾರಗಳನ್ನು ವಿಶ್ಲೇಷಣಾತ್ಮಕ ಮಾದರಿಯನ್ನು ಬಳಸಿಕೊಂಡು ವಿದ್ಯಾರ್ಥಿ ಕೇಂದ್ರಿತ ತತ್ವದ ಹಿನ್ನೆಲೆಯಲ್ಲಿ ಈ ಅಧ್ಯಯನ ನಡೆದಿದೆ.

ಪ್ರೌಢಶಾಲಾ ಶಿಕ್ಷಣದ ಭಾಷಾ ಕಲಿಕೆಯ ಸ್ವರೂಪದಲ್ಲಿ ಅನೇಕ ರೀತಿಯ ಸ್ಥಿತ್ಯಂತರಗಳು ಸಂಭವಿಸಿವೆ. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯೋತ್ತರದ ದಶಕಗಳು ಹಾಗೂ ಆಧುನಿಕ ಸನ್ನಿವೇಶಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವುದು ಮತ್ತು ಅದರ ಮಿತಿ–ಶಕ್ತಿಗಳ ಕುರಿತು ಚರ್ಚಿಸಲಾಗಿದೆ. ಈ ಅಧ್ಯಯನದ ವ್ಯಾಪ್ತಿಯನ್ನು ನಿರ್ಧರಿಸುವುದಕ್ಕಾಗಿ ಇದುವರೆಗೆ ನಡೆದ ಅಧ್ಯಯನವನ್ನು ಸಮೀಕ್ಷಿಸಲಾಗಿದೆ.

ಕನ್ನಡ ಭಾಷಾ ಕಲಿಕೆಯಲ್ಲಿ ಕಾವ್ಯ ಕಲಿಕೆ, ಗದ್ಯ ಕಲಿಕೆ, ವ್ಯಾಕರಣ ಕಲಿಕೆ ಹಾಗೂ ಲೇಖನ ಸ್ವರೂಪಗಳ ಕಲಿಕೆಗಳಿಗೆ ಅವುಗಳದ್ದೇ ಆದ ನಿಯಮಗಳಿವೆ, ಉದ್ದೇಶಗಳಿವೆ. ಈ ಉದ್ದೇಶಗಳು ಅನುಷ್ಠಾನಗೊಳ್ಳುತ್ತಿರುವ ಬಗೆಯನ್ನು ಅಧ್ಯಯನದ ಸಂದರ್ಭಗಳಲ್ಲಿ ಕಂಡುಕೊಳ್ಳಲಾಗಿದೆ. ಅಂತೆಯೇ ಪ್ರಸ್ತುತ ಭಾಷಾಕಲಿಕೆಯಲ್ಲಿ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ನಿಗದಿಪಡಿಸಿರುವ ವ್ಯಾಕರಣ, ಛಂದಸ್ಸುಗಳ ಇತಿ–ಮಿತಿ, ಪ್ರಸ್ತುತತೆಯ ಕುರಿತು ಅಧ್ಯಯನ ನಡೆಸುವುದೂ ಮುಖ್ಯವಾಗುತ್ತದೆ. ಅದನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಪ್ರೌಢಶಾಲಾ ಶಿಕ್ಷಣದಲ್ಲಿ ಇಂದು ಭಾಷಾಕಲಿಕೆಯ ನಿರ್ಧಾರಕ ಅಂಶವಾಗಿ ತ್ರಿಭಾಷಾ ಸೂತ್ರ ಜಾರಿಯಲ್ಲಿದೆ. ತ್ರಿಭಾಷಾ ಸೂತ್ರದ ಸಾಧಕ ಬಾಧಕಗಳು, ಇತಿಮಿತಿಗಳು, ಹೊಸಭಾಷೆ, ಅನ್ಯ ಭಾಷೆಗಳನ್ನು ಕಲಿಸುವ ಸಂದರ್ಭಗಳು, ಯಾವಾಗ? ಎಷ್ಟು? ಹೇಗೆ?

ಕಲಿಸಬೇಕೆಂಬುದರ ಕುರಿತ ಹೊಸ ನೋಟಗಳನ್ನು ಮತ್ತು ತ್ರಿಭಾಷಾ ಸೂತ್ರದ ಅಳವಡಿಕೆಯ ಹಿಂದಿನ ಉದ್ದೇಶಗಳು ಅನುಷ್ಠಾನಗೊಳ್ಳುತ್ತಿರುವ ಬಗೆಯನ್ನು ದರ್ಶಿಸುವುದು ಮುಖ್ಯವಾಗುತ್ತದೆ. ಶಿಕ್ಷಣ ಆಯೋಗಗಳು, ಶಿಕ್ಷಣತಜ್ಞರು, ವಿಚಾರವೇತ್ತರು ಮಾತೃಭಾಷೆಯ ಮೂಲಕ ಬೋಧನೆ ಮತ್ತು ಕಲಿಕೆಯನ್ನು ಸಮರ್ಥಿಸಿದ್ದಾರೆ. ಪ್ರಪಂಚದಾದ್ಯಂತ ಶಿಕ್ಷಣಕ್ರಮದಲ್ಲಿ ಈಗ ಮಾತೃಭಾಷೆಗೇ ಅಗ್ರಸ್ಥಾನವಿದೆ. ಕರ್ನಾಟಕದ ಬಹುತೇಕ ಶಾಲೆಗಳಲ್ಲಿ ಕನ್ನಡ ಮಾಧ್ಯಮವಿದೆ. ಕನ್ನಡದ ಲಿಪಿಯ ಮೂಲಕ, ಕನ್ನಡ ಭಾಷೆಯ ಮೂಲಕ ಇತರ ಜ್ಞಾನ ಶಾಖೆಗಳನ್ನು ವಿದ್ಯಾರ್ಥಿಗಳು ಕಲಿಯುತ್ತಾರೆ. ಕನ್ನಡ ಭಾಷೆಯ ಮೇಲಿನ ಪ್ರಭುತ್ವದ ಮಟ್ಟವು ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳ ಕಲಿಕಾಮಟ್ಟವನ್ನು ನಿರ್ಧರಿಸುತ್ತದೆ. ಈ ಕಾರಣದಿಂದಾಗಿ ಕನ್ನಡ ಭಾಷಾ ಕೌಶಲಗಳ ಕಲಿಕೆ ಮತ್ತು ಬೋಧನೆಯನ್ನು ಹೇಗೆ ಪರಿಣಾಮಕಾರಿಗೊಳಿಸಬಹುದೆಂಬ ಶೋಧನೆಯ ಉದ್ದೇಶವೂ ಈ ಅಧ್ಯಯನಕ್ಕಿದೆ.

ಪ್ರಾಚೀನ ಕನ್ನಡ, ಕವಿ ಕಾವ್ಯಗಳ ಓದು ಮತ್ತು ಗ್ರಹಿಕೆಗಳ ಕುರಿತು ವಿದ್ಯಾರ್ಥಿಗಳಲ್ಲಿ ಅಪಾರ ಹಿಂಜರಿಕೆಯಿದೆ. ಈ ಹಿಂಜರಿಕೆಗೆ ಕಾರಣಗಳನ್ನು ತಿಳಿದುಕೊಳ್ಳುವುದೂ ಕೂಡ ಈ ಅಧ್ಯಯನದ ಉದ್ದೇಶಗಳಲ್ಲಿ ಒಂದು.

ಕಲಿಕೆಯಲ್ಲಿ ವಿದ್ಯಾರ್ಥಿಯೇ ಕೇಂದ್ರಬಿಂದು. ಶಿಕ್ಷಣತಜ್ಞರ, ಯೋಜನೆಗಳ, ಆಯೋಗಗಳ, ಪಠ್ಯದ, ಅಧ್ಯಾಪಕರ ಹಾಗೂ ಸಮಾಜದ ನಿರೀಕ್ಷೆಗಳು ಫಲಪ್ರದವಾಗಬೇಕಾಗಿರುವುದು ವಿದ್ಯಾರ್ಥಿಗಳಲ್ಲಿ. ಸರಕಾರವು ಕೋಟಿಗಟ್ಟಲೆ ಹಣವನ್ನು ವಿದ್ಯಾರ್ಥಿಗಳ ಗುಣಾತ್ಮಕ ಶಿಕ್ಷಣಕ್ಕಾಗಿ ವ್ಯಯಿಸುತ್ತಿದೆ. ಸಾಹಿತ್ಯ ಮತ್ತು ಭಾಷಾಕಲಿಕೆಯಲ್ಲಿ ವಿದ್ಯಾರ್ಥಿಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿ, ಅಲ್ಲಿ ಸಿಗುವ ದತ್ತಾಂಶಗಳನ್ನು ವಿಶ್ಲೇಷಣಾತ್ಮಕವಾಗಿ ಮಂಡಿಸುವುದು ಈ ನಿಟ್ಟಿನಲ್ಲಿ ಮೌಲಿಕವಾದುದು. ಇದಕ್ಕೆ ಪೂರಕವಾಗಿ ಪ್ರೌಢಶಾಲೆಗಳಲ್ಲಿ ಕನ್ನಡವನ್ನು ಬೋಧಿಸುತ್ತಿರುವ ಶಿಕ್ಷಕರ ದೃಷ್ಟಿಕೋನ, ನಿರೀಕ್ಷೆಗಳು, ಸಮಸ್ಯೆಗಳನ್ನು ಚರ್ಚಿಸುವುದು ತನ್ಮೂಲಕ ವಿದ್ಯಾರ್ಥಿ ಕೇಂದ್ರಿತ ಶಿಕ್ಷಣದ ಪರಿಕಲ್ಪನೆಯನ್ನು ಬಲಪಡಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಇದು ಮಾಹಿತಿ ತಂತ್ರಜ್ಞಾನದ ಯುಗ. ಸಾಮಾನ್ಯ ಜನಜೀವನದಲ್ಲೂ ಇಂದು ಮಾಹಿತಿತಂತ್ರಜ್ಞಾನ ಕಾಲಿಡುತ್ತಿದೆ. ಕ್ರಾಂತಿಕಾರಿ ಬದಲಾವಣೆಯನ್ನೂ, ಮಹತ್ವದ ಬೆಳವಣಿಗೆಯನ್ನೂ ತರುತ್ತಿದೆ. ಎಲ್ಲಾ ರಂಗಗಳಲ್ಲೂ ಮಾಹಿತಿತಂತ್ರಜ್ಞಾನ ವ್ಯಾಪಿಸುತ್ತಿದೆ. ಆದರೆ ಕನ್ನಡ ಭಾಷಾಕಲಿಕಾ ಕ್ಷೇತ್ರವು ಮಾಹಿತಿತಂತ್ರಜ್ಞಾನ ಕ್ಷೇತ್ರದಿಂದ ಬಹಳಷ್ಟು ದೂರದಲ್ಲಿದೆ. ಕನ್ನಡ ಭಾಷೆಯ ಕಲಿಕೆಯು ಪ್ರಗತಿಪರವೂ, ಚಲನಶೀಲವೂ ಆಗಿರಬೇಕಾದುದು ಇಂದಿನ ಅಗತ್ಯತೆ. ಜಾಗತೀಕರಣದ ಈ ಸಂದರ್ಭಕ್ಕೆ ಕನ್ನಡ ಭಾಷಾ ಕಲಿಕಾ ಸಂದರ್ಭಗಳೂ ಬದಲಾಗಬೇಕಾದ ಅನಿವಾರ್ಯತೆಯಿದೆ. ಕನ್ನಡವನ್ನು ಹಾಗೂ ಕನ್ನಡ ಭಾಷಾ ಕೌಶಲಗಳ ಕಲಿಕಾ ವಾತಾವರಣವನ್ನು ಮಾಹಿತಂತ್ರಜ್ಞಾನ ಸ್ನೇಹಿಯಾಗಿ

ರೂಪಿಸುವ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಪ್ರೌಢಶಾಲಾ ಕನ್ನಡ ಕಲಿಕೆಯಲ್ಲಿ ಪ್ರಯೋಗಶೀಲತೆಯನ್ನು ತರುವತ್ತ, ವಿಭಿನ್ನ ದೃಷ್ಟಿಕೋನ, ಸಿದ್ಧಾಂತ, ಚಿಂತನೆಗಳ ನಡುವೆ ಹೊಸ ಆಶಯ ಹಾಗೂ ಹೊಸ ಕಾಲಧರ್ಮಕ್ಕೆ ಅನ್ವಯವಾಗುವಂತೆ ಪ್ರೌಢಶಾಲಾ ಕನ್ನಡ ಭಾಷಾ ಕೌಶಲಗಳ ಕಲಿಕೆಗೊಂದು ಹೊಸ ದಾರಿಯನ್ನು ಕಂಡುಕೊಳ್ಳುವತ್ತ ಚಿಂತಿಸಬೇಕಾದ ದೃಷ್ಟಿಕೋನವೂ ಅಧ್ಯಯನದಲ್ಲಿದೆ.

ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಪಠ್ಯ ಬೋಧನೆಗಳು ಮತ್ತು ಭಾಷಾ ಬೋಧನೆಗಳ ಬಗ್ಗೆ ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಹಾಗೂ ತರಬೇತಿ ಸಂಸ್ಥೆಯು ವೈಚಾರಿಕ ಆಶಯವನ್ನು ಇಟ್ಟುಕೊಂಡಿದೆ. ನಮ್ಮ ಸಂವಿಧಾನದ ಪ್ರಾಥಮಿಕ ಆಶಯವನ್ನು ಕೇಂದ್ರವಾಗಿಟ್ಟುಕೊಂಡು ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಹಾಗೂ ತರಬೇತಿ ಸಂಸ್ಥೆಯು ಪಠ್ಯ ರಚನೆ ಹಾಗೂ ಬೋಧನೆಗಳ ಆದರ್ಶಗಳನ್ನು ರೂಪಿಸಿದೆ. ಆದರೆ ಈ ಆದರ್ಶಗಳು ವಾಸ್ತವದಲ್ಲಿ ಎಷ್ಟರ ಮಟ್ಟಿಗೆ ಅನುಷ್ಠಾನಗೊಳ್ಳುತ್ತಿವೆ ಎಂಬುದನ್ನು ಚರ್ಚಿಸುವುದು ಅತಿ ಮುಖ್ಯವಾಗಿದೆ.

ರಾಷ್ಟ್ರಕವಿ ಕುವೆಂಪುರವರು ಹೇಳುವಂತೆ ಪ್ರತಿಯೊಂದು ಭಾಷೆಗೂ ನಿತ್ಯೋಪಯೋಗಿ, ಭಾವೋಪಯೋಗಿ ಹಾಗೂ ಶಾಸ್ತ್ರೋಪಯೋಗಿ ಎಂಬ ಮೂರು ಮುಖಗಳಿರುತ್ತವೆ. ಈ ಹಿನ್ನೆಲೆಯಲ್ಲಿ ಆಧುನಿಕ ಸಂದರ್ಭದ ಕನ್ನಡ ಭಾಷಾಕಲಿಕೆಯ ಮಿತಿ ಮತ್ತು ಶಕ್ತಿಗಳನ್ನು ಅಧ್ಯಯನ ಮಾಡುವುದು ಅಗತ್ಯ. ಸಾಹಿತ್ಯಕ ಉದ್ದೇಶ, ಮಾನಸಿಕ ಉದ್ದೇಶ, ನೈತಿಕ ಉದ್ದೇಶ, ಭಾವನಾತ್ಮಕ ಉದ್ದೇಶ, ಭಾಷಿಕ ಉದ್ದೇಶ, ಸಾಮಾಜಿಕ–ಸಾಂಸ್ಕೃತಿಕ ಉದ್ದೇಶಗಳು ಭಾಷಾಕಲಿಕೆಯ ಚೌಕಟ್ಟಿನಲ್ಲಿ ಸಾಧಿತವಾಗುತ್ತಿರುವ ಬಗೆ, ಈ ಎಲ್ಲಾ ಉದ್ದೇಶಗಳಲ್ಲಿ ವಿದ್ಯಾರ್ಥಿಯ ಸಹಭಾಗಿತ್ವದ ಕುರಿತ ಒಳನೋಟಗಳನ್ನು ದರ್ಶಿಸಲು ಪ್ರಯತ್ನಿಸಲಾಗಿದೆ.

ಕರ್ನಾಟಕದಲ್ಲಿ ಕನ್ನಡ ಸರ್ವೋಚ್ಚ ಭಾಷೆಯಾಗಿರಬೇಕು. ಅದು ಉಪಭಾಷೆಯ ಸ್ಥಾನಕ್ಕೆ ಇಳಿಯಬಾರದು. ಪ್ರೌಢಶಾಲಾ ಹಂತದಲ್ಲಿನ ವಿದ್ಯಾರ್ಥಿಗಳ ಮಾನಸಿಕ–ಬೌದ್ಧಿಕ ವಿಕಸನಕ್ಕೆ ಮತ್ತು ಹೃದಯ ಸಂಸ್ಕಾರಕ್ಕೆ ಕನ್ನಡ ಭಾಷಾಕಲಿಕೆ ಪೂರಕವಾಗಿರಬೇಕು, ಪ್ರೇರಕವಾಗಬೇಕು. ಕನ್ನಡ ಭಾಷಾ ಕಲಿಕೆಯ ಆಲಿಸುವ, ಮಾತನಾಡುವ, ಓದುವ, ಬರೆಯುವ ಕೌಶಲಗಳಲ್ಲಿ ಕ್ರಿಯಾತ್ಮಕ, ರಚನಾತ್ಮಕ ಚಟುವಟಿಕೆಗಳು ನಡೆಯಬೇಕು. ಈ ಹಿನ್ನೆಲೆಯಲ್ಲಿ ಇಂದು ಕನ್ನಡ ಭಾಷಾ ಕಲಿಕೆ ಕ್ರಿಯಾತ್ಮಕ ಕಲಿಕೆಯಾಗಬೇಕಾದ ಅವಶ್ಯಕತೆಯಿದೆ. ಈ ಉದ್ದೇಶಕ್ಕೊಂದು ಪ್ರೇರಣೆಯನ್ನು ಒದಗಿಸುವುದು ಈ ಅಧ್ಯಯನದ ಆಶಯವಾಗಿದೆ.

## ೧.೨ ಅಧ್ಯಯನದ ಸ್ವರೂಪ, ವಿಧಾನ ಮತ್ತು ಸೈದ್ಧಾಂತಿಕ ಹಿನ್ನೆಲೆ

ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಸಂಸ್ಥೆಯು ಭಾಷಾ ಬೋಧನೆಯು ವೈಜ್ಞಾನಿಕವಾಗಿರಬೇಕೆಂಬುದನ್ನು ಪ್ರತಿಪಾದಿಸುತ್ತದೆ. ಆ ನೆಲೆಯಲ್ಲಿ ಭಾಷಾ ಪಠ್ಯಗಳು ರೂಪಿತವಾಗಬೇಕೆಂಬುದು ಅದರ ಆಶಯ. ಆದರೆ ಇವತ್ತಿಗೂ ನಮ್ಮ ಸಂದರ್ಭದಲ್ಲಿ ಭಾಷಾ ಕಲಿಕೆಯು ಸಾಂಪ್ರದಾಯಿಕವಾಗಿದೆ. ಇದನ್ನು ವಿವರವಾಗಿ ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಈ ಅಧ್ಯಯನವು ಭಾಷಾ ಕಲಿಕೆಯು ವೈಜ್ಞಾನಿಕ, ವೈಚಾರಿಕವಾಗಿರಬೇಕು ಹಾಗೂ ಇಂದಿನ ಸಮಾಜದ ನಿರೀಕ್ಷೆಗಳನ್ನು ಪೂರೈಸುವಂತಿರಬೇಕು ಎಂಬ ದೃಷ್ಟಿಕೋನವನ್ನು ಹೊಂದಿದೆ. ಭಾಷಾ ವಿಜ್ಞಾನದಲ್ಲಿ ಕಳೆದ ನೂರೈವತ್ತು ವರ್ಷಗಳಲ್ಲಿ ಅಗಾಧವಾದ ಶೋಧನೆಗಳಾಗಿವೆ. ಭಾಷೆಯ ಕುರಿತಾದ ಸಾಂಪ್ರದಾಯಿಕ ಯೋಚನೆಗಳಿಗೆ ಸವಾಲು ಹಾಕುವಂತಹ ಸಂಶೋಧನೆಗಳು ಈ ಕ್ಷೇತ್ರದಲ್ಲಿ ನಡೆದಿವೆ. ಭಾಷಾ ಬೋಧನೆಯಲ್ಲಿ ಭಾಷಾ ವಿಜ್ಞಾನದ ದೃಷ್ಟಿಕೋನವನ್ನು ಈ ಅಧ್ಯಯನವು ಪ್ರತಿಪಾದಿಸುತ್ತಾ, ಸಾಂಪ್ರದಾಯಿಕ ಭಾಷಾ ಕಲಿಕೆಯು ಹೇಗೆ ಬದಲಾಗಬೇಕೆಂಬುದನ್ನು ಈ ಅಧ್ಯಯನದಲ್ಲಿ ನಿರೂಪಿಸಲಾಗುವುದು. ಇದು ಈ ಅಧ್ಯಯನದ ದೃಷ್ಟಿಕೋನವಾಗಿದೆ.

೨೦೧೨-೨೦೧೩ರಲ್ಲಿ ಕರ್ನಾಟಕದಲ್ಲಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗೆ ಮಾಧ್ಯಮವಾರು ದಾಖಲಾದ ವಿದ್ಯಾರ್ಥಿಗಳ ದಾಖಲಾತಿ ವಿವರ ಹೀಗಿದೆ.[೪]

| ಕಲಿಕಾ ಮಾಧ್ಯಮ | ಕಿರಿಯ ಪ್ರಾಥಮಿಕ (೧ ರಿಂದ ೫) | ಹಿರಿಯ ಪ್ರಾಥಮಿಕ (೬ ರಿಂದ ೭) | ಪ್ರೌಢಶಾಲೆ (೮ರಿಂದ ೧೦) | ಒಟ್ಟು |
|---|---|---|---|---|
| ಕನ್ನಡ | ೪೧೦೧೧೩೨ | ೧೪೪೨೦೩೨ | ೧೮೩೩೨೪೫ | ೭೩೭೬೪೦೯ |
| ಇಂಗ್ಲಿಷ್ | ೮೭೦೫೪೮ | ೪೬೨೭೧೩ | ೬೬೯೮೧೫ | ೨೦೦೩೦೭೬ |
| ಉರ್ದು | ೩೧೪೪೩೮ | ೧೦೫೬೨೫ | ೮೧೦೮೬ | ೫೦೧೧೪೯ |
| ತಮಿಳು | ೮೭೧೧ | ೩೦೨೧ | ೫೩೭ | ೧೨೨೬೯ |
| ತೆಲುಗು | ೪೬೫೬ | ೧೪೮೭ | ೯೪೫ | ೭೦೮೮ |
| ಮರಾಠಿ | ೭೩೯೮೬ | ೩೨೨೧೪ | ೪೫೮೯೨ | ೧೫೨೦೯೨ |
| ಹಿಂದಿ | ೫೦೧೦ | ೧೭೮೯ | ೩೨೦೧ | ೧೦೦೦೦ |
| ಒಟ್ಟು | ೫೩೭೮೪೮೧ | ೨೦೪೮೮೮೧ | ೨೬೩೪೭೨೧ | ೧೦೦೬೨೦೮೩ |

ಕರ್ನಾಟಕದಲ್ಲಿ ಪ್ರತಿ ವರ್ಷವೂ ಲಕ್ಷಾಂತರ ವಿದ್ಯಾರ್ಥಿಗಳು ಕನ್ನಡವನ್ನು ಪ್ರಥಮ, ದ್ವಿತೀಯ ಮತ್ತು ತೃತೀಯ ಭಾಷೆಯ ಹಿನ್ನೆಲೆಯಲ್ಲಿ ಕಲಿಯಲು ಹಾಗೂ ಕಲಿಕಾ

ಮಾಧ್ಯಮದ ಹಿನ್ನೆಲೆಯಲ್ಲಿ ಬಳಸಲು ಶಾಲೆಗಳಿಗೆ ದಾಖಲಾಗುತ್ತಿದ್ದಾರೆ. ಕನ್ನಡ ಭಾಷೆಯ ಕೌಶಲಗಳ ಕಲಿಕೆಯ ಸಂದರ್ಭಗಳಲ್ಲಿ ವಿದ್ಯಾರ್ಥಿಗಳು ಅನೇಕ ಮೂಲಭೂತ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಆ ಸಮಸ್ಯೆಗಳನ್ನು ಬಗೆಹರಿಸದೆಯೇ ಕೋಟಿಗಟ್ಟಲೆ ಹಣವನ್ನು ವ್ಯಯಿಸುವುದು ವ್ಯರ್ಥವಾಗುತ್ತದೆ. ಆದುದರಿಂದ ವಿದ್ಯಾರ್ಥಿಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಕ್ಷೇತ್ರಕಾರ್ಯದ ಮೂಲಕ ಅಧ್ಯಯನ ಮಾಡಿ ಆ ಸಮಸ್ಯೆಗಳಿಗೆ ಉತ್ತರವನ್ನು ಕಂಡುಕೊಂಡಲ್ಲಿ ಲಕ್ಷ ಲಕ್ಷ ವಿದ್ಯಾರ್ಥಿಗಳ ಕನ್ನಡ ಭಾಷಾ ಕೌಶಲಗಳ ಕಲಿಕೆಯು ಸುಧಾರಿಸುತ್ತದೆ ಹಾಗೂ ಕಲಿಕೆಯು ಗುಣಮಟ್ಟದ ಹಾಗೂ ಸಾಮರ್ಥ್ಯಾಧಾರಿತ ಕಲಿಕೆಯಾಗುತ್ತದೆ. ಸಾವಿರಾರು ಶಿಕ್ಷಕರ ಶ್ರಮ ಸಾರ್ಥಕವಾಗುತ್ತದೆ. ಈ ದೃಷ್ಟಿಯಿಂದ ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಗಳಲ್ಲಿ ಪ್ರಥಮ ಭಾಷೆ ಕನ್ನಡವನ್ನು ಕಲಿಯುತ್ತಿರುವ ವಿದ್ಯಾರ್ಥಿಗಳನ್ನು ಸಮೀಕ್ಷೆಗೆ ಆಯ್ಕೆ ಮಾಡಿಕೊಂಡಿದ್ದು ಈ ಅಧ್ಯಯನವು ಮುಂದಿನ ಸಂಶೋಧನೆಗಳಿಗೆ ಪೂರಕವಾಗಬಹುದಾಗಿದೆ.

ಪ್ರೌಢಶಾಲಾ ವಿದ್ಯಾರ್ಥಿಗಳು ಕನ್ನಡ ಭಾಷಾ ಕಲಿಕೆಯ ಸಂದರ್ಭದಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಗುರುತಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿರುವುದರಿಂದ ಅಧ್ಯಯನವು ಕ್ಷೇತ್ರಕಾರ್ಯ ಆಧಾರಿತವಾಗಿದೆ. ಶಾಲೆಗಳ ಆಯ್ಕೆ ಯಾದೃಚ್ಛಿಕವಾಗಿದೆ. ಮಾಹಿತಿಗಳನ್ನು ಪ್ರಾಥಮಿಕ ಮಾಹಿತಿ ಮೂಲ (ಸಂದರ್ಶನ, ಅವಲೋಕನ, ಕಚೇರಿ ಕಡತ, ದಾಖಲೆ... ಇತ್ಯಾದಿ)ಗಳಿಂದ ಹಾಗೂ ಅನುಷಂಗಿಕ ಮಾಹಿತಿ ಮೂಲ (ಲೇಖನ, ಪ್ರಬಂಧ, ಮಹಾಪ್ರಬಂಧ, ಪುಸ್ತಕಗಳು.. ಇತ್ಯಾದಿ)ಗಳಿಂದ ಸಂಗ್ರಹಿಸಲಾಗಿದೆ. ಅವಲೋಕನ ವಿಧಾನದಲ್ಲಿ ಸಹಜ ಅವಲೋಕನ ಮತ್ತು ನಿರ್ಬಂಧಿತ ಅವಲೋಕನ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ.

ಅಧ್ಯಯನವನ್ನು ರಾಜ್ಯದ ಯಾವುದೇ ಒಂದು ತಾಲೂಕು, ಜಿಲ್ಲೆ ಅಥವಾ ಒಂದು ಪ್ರಾಂತ್ಯಕ್ಕೆ ಸೀಮಿತಗೊಳಿಸಿಕೊಂಡಿಲ್ಲ. ಗ್ರಾಮೀಣ, ನಗರ, ಗಡಿನಾಡು ಎಂಬ ವಿಭಾಗ ಮಾಡಿಕೊಂಡಿಲ್ಲ, ಜಾತಿ, ಜನಾಂಗ, ಲಿಂಗ, ವರ್ಗಗಳ ಆಧಾರವಾಗಿಯಾಗಲೀ, ನಿಧಾನಕಲಿಕೆಯವರು, ವಿಶೇಷ ಬುದ್ಧಿಮತ್ತೆಯಿರುವವರು, ಕಲಿಕಾ ನ್ಯೂನತೆಯಿರುವ ವಿದ್ಯಾರ್ಥಿಗಳೆಂದಾಗಲೀ ವಿಭಾಗಿಸಿಕೊಂಡಿರುವುದಿಲ್ಲ. ಈಗಾಗಲೇ ಭೌಗೋಳಿಕ ವ್ಯಾಪ್ತಿ, ಮತ್ತು ಜಾತಿಗಳ ಆಧಾರದ ಮೇಲೆ ಕೆಲವು ಅಧ್ಯಯನಗಳು ನಡೆದಿವೆ. ಅವುಗಳ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ. ಭಾಷಾ ಪಠ್ಯಗಳು ವಿಕೇಂದ್ರೀಕರಣಗೊಳ್ಳದೆ ಅಖಿಲ ಕರ್ನಾಟಕ ವ್ಯಾಪ್ತಿಯನ್ನು ಹೊಂದಿವೆ. ಈ ನಿಟ್ಟಿನಲ್ಲಿ ಒಂದು ಸೀಮಿತ ದೃಷ್ಟಿಕೋನದಿಂದ ಅಧ್ಯಯನವನ್ನು ನಡೆಸುವುದರಿಂದ ಭಾಷಾ ಕಲಿಕೆಯ ಸಮಗ್ರ ಸ್ವರೂಪವನ್ನು ಅರ್ಥೈಸಲು ಸಾಧ್ಯವಾಗುವುದಿಲ್ಲ. ಈ ದೃಷ್ಟಿಯಿಂದ ಬಹಳಷ್ಟು ಮಿತಿಗಳಿದ್ದರೂ ಕರ್ನಾಟಕವನ್ನು ಅಧ್ಯಯನದ ಭೌಗೋಳಿಕ ವ್ಯಾಪ್ತಿಯೆಂದು ತಿಳಿಯಲಾಗಿದೆ. ಕರಾವಳಿ ಕರ್ನಾಟಕ, ಉತ್ತರ ಕರ್ನಾಟಕ ಹಾಗೂ ಮಧ್ಯ

ಕರ್ನಾಟಕದ ೨೧ ಜಿಲ್ಲೆಗಳ ಕೆಲವು ಶಾಲೆಗಳನ್ನು ಮತ್ತು ಪ್ರದೇಶಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಆದರೆ ಅತಿ ವ್ಯಾಪ್ತಿಯನ್ನು ತಡೆಯುವ ಉದ್ದೇಶದಿಂದ 'ಸರ್ಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮದಲ್ಲಿ ಪ್ರಥಮ ಭಾಷೆಯಾಗಿ ಕನ್ನಡವನ್ನು ಓದುತ್ತಿರುವ ವಿದ್ಯಾರ್ಥಿಗಳು ಮಾತ್ರ' ಎಂಬ ಚೌಕಟ್ಟನ್ನೂ, ಮಿತಿಯನ್ನೂ ಹಾಕಿಕೊಂಡು ಅಧ್ಯಯನವನ್ನು ಮಾಡಲಾಗಿದೆ.

ಏಳು ವರ್ಷಗಳ ಪ್ರಾಥಮಿಕ ಹಾಗೂ ಮೂರು ವರ್ಷಗಳ ಪ್ರೌಢಶಿಕ್ಷಣದಲ್ಲಿ ಕನ್ನಡ ಮಾತೃಭಾಷೆಯಾದ ವಿದ್ಯಾರ್ಥಿಗಳು ಕನ್ನಡ ಮಾಧ್ಯಮದಲ್ಲಿ ಹತ್ತು ವರ್ಷಗಳ ನಿರಂತರ ಕಲಿಕೆಯಲ್ಲಿದ್ದರೂ ಭಾಷಿಕ ಕನಿಷ್ಠ ಕೌಶಲಗಳೇ ಸಿದ್ಧಿಸದಿರುವುದರ ಕುರಿತು ಪ್ರಾಥಮಿಕ ಶಾಲಾ ಶಿಕ್ಷಕರು, ಪ್ರೌಢಶಾಲಾ ಶಿಕ್ಷಕರು, ವಿದ್ಯಾರ್ಥಿ ಪಾಲಕರು, ಮುಖ್ಯೋಪಾಧ್ಯಾಯರೊಂದಿಗೆ ಚರ್ಚಿಸಿ ಕನ್ನಡ ಕಲಿಕಾ ಸನ್ನಿವೇಶ ಹಾಗೂ ಬೋಧನಾ ಸನ್ನಿವೇಶದಲ್ಲಿರುವ ಮೂಲಭೂತವಾದ ಸೂಕ್ಷ್ಮ ಸಮಸ್ಯೆ-ಸವಾಲುಗಳನ್ನು ಗುರುತಿಸಲಾಗಿದೆ. ಸರ್ಕಾರ, ರಾಷ್ಟ್ರೀಯ ಶಿಕ್ಷಣ ನೀತಿ, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಸಂಸ್ಥೆಗಳು ನಿಗದಿಗೊಳಿಸಿರುವ ಧ್ಯೇಯೋದ್ದೇಶಗಳಿಗೂ ಹಾಗೂ ವಿದ್ಯಾರ್ಥಿಗಳು ಗಳಿಸಿಕೊಂಡಿರುವ ಭಾಷಿಕ ಸಾಮರ್ಥ್ಯಗಳಿಗೂ ಇರುವ ಅಂತರವನ್ನು ಅವಲೋಕನ ವಿಧಾನದಲ್ಲಿ ಕಂಡುಕೊಳ್ಳಲಾಗಿದೆ. ಕನ್ನಡ ಭಾಷಾ ಕಲಿಕೆಗೆ ಸಂಬಂಧಿಸಿದಂತೆ ಪರಿಹಾರಗಳನ್ನು ಕಂಡುಕೊಳ್ಳುವ ಕುರಿತು ಕೆಲವು ನಿರ್ಧಾರಕ್ಕೆ ಬರಲಾಗಿದೆ.

### ೧.೩ ಕ್ಷೇತ್ರ ಕಾರ್ಯ

ಸಾರ್ವಜನಿಕ ಶಿಕ್ಷಣ ಇಲಾಖೆಯ ಕನ್ನಡ ಭಾಷಿಕ ಧ್ಯೇಯೊದ್ದೇಶಗಳು ಕನ್ನಡದ ತರಗತಿಗಳಲ್ಲಿ ಹೇಗೆ ಸಾಧಿತವಾಗುತ್ತಿವೆ ಎಂಬುದನ್ನು ಪ್ರಾಯೋಗಿಕವಾದ ಪ್ರಜ್ಞಾಪೂರ್ವಕ ದೃಷ್ಟಿಯಿಂದ ನೋಡುವುದು ಕ್ಷೇತ್ರಕಾರ್ಯದ ಮುಖ್ಯ ಉದ್ದೇಶ. ಕನ್ನಡ ಭಾಷಾ ಕಲಿಕೆಯ ಕೌಶಲಗಳಿಕಾ ಸನ್ನಿವೇಶವನ್ನು ತಿಳಿಯವುದು, ಕೌಶಲಗಳಿಕೆಯಲ್ಲಿ ಮಕ್ಕಳು ಹಿಂದುಳಿದಿರುವುದಕ್ಕೆ ಕಾರಣಗಳನ್ನು ಗುರುತಿಸುವುದು ಹಾಗೂ ಪರಿಹಾರಗಳನ್ನು ಸೂಚಿಸುವ ಪ್ರಯತ್ನವನ್ನು ಇಲ್ಲಿ ಮಾಡುವ ಉದ್ದೇಶವಿದೆ.

ವಾಸ್ತವ ಹಾಗೂ ಪ್ರಾಯೋಗಿಕ ಚಿತ್ರಣವನ್ನು ಅಧ್ಯಯನ ಮಾಡುವ ಉದ್ದೇಶದಿಂದ ತರಗತಿಯ ಒಳಗೆ ನಡೆಯುವ ಚಟುವಟಿಕೆಗಳನ್ನು ಅವಲೋಕಿಸಲಾಗಿದೆ. ವಿದ್ಯಾರ್ಥಿಗಳ ಕಲಿಕೆಗೆ ಸಂಬಂಧಿಸಿದ ವರ್ತನೆಗಳನ್ನು ಅವರು ಕಲಿಯುತ್ತಿರುವ ಸನ್ನಿವೇಶಗಳಲ್ಲಿಯೇ ನೇರವಾಗಿ ಗುರುತಿಸುವ ಉದ್ದೇಶವನ್ನು ಹೊಂದಲಾಗಿದೆ. ಕಲ್ಪನೆಗಿಂತ ವಾಸ್ತವಕ್ಕೆ ಬದ್ಧವಾಗಬೇಕೆಂಬ ಉದ್ದೇಶವಿದೆ.

ಇಂದಿನ ಪ್ರೌಢಶಾಲಾ ಶಿಕ್ಷಣದ ಕಲಿಕಾ ಸನ್ನಿವೇಶದಲ್ಲಿನ ತಕ್ಷಣದ ಹಾಗೂ ದೀರ್ಘಕಾಲಿಕವಾದ ಕೆಲವು ಯೋಜನೆಗಳಿಗೆ ಈ ಕ್ಷೇತ್ರಕಾರ್ಯದ ಫಲಿತಗಳು ನೆರವಾಗುತ್ತವೆ. ಕನ್ನಡ ಭಾಷಾ ಕಲಿಕಾ ದೃಷ್ಟಿಯಿಂದ ಭವಿಷ್ಯದ ಕೆಲವು ಯೋಜನೆಗಳಿಗೂ ಕೆಲವು ಸಲಹೆ ಸೂಚನೆಗಳನ್ನು ನೀಡುತ್ತವೆ. ವಿದ್ಯಾರ್ಥಿಗಳು ಎದುರಿಸುತ್ತಿರುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಸಹಾಯವಾಗುತ್ತದೆ. ಸಾರ್ವಜನಿಕ ಶಿಕ್ಷಣ ಇಲಾಖೆ, ಕನ್ನಡ ಭಾಷಾ ಪಠ್ಯಪುಸ್ತಕ ನಿರ್ದೇಶನಾಲಯ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕನ್ನಡ ಹಿತಾಸಕ್ತಿಯ ಸಂಘ-ಸಂಸ್ಥೆಗಳು ಈ ಕ್ಷೇತ್ರಕಾರ್ಯದ ಹಿನ್ನೆಲೆಯ ಫಲಿತಗಳನ್ನು ಆಧಾರವಾಗಿಟ್ಟುಕೊಂಡು ಪ್ರೌಢಶಾಲಾ ಕನ್ನಡ ಕಲಿಕಾ ವಿದ್ಯಾರ್ಥಿಗಳಿಗಾಗಿ ಹಲವು ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂಬ ಉದ್ದೇಶವಿದೆ.

ಪ್ರೌಢಶಾಲಾ ಶಿಕ್ಷಣದ ಕನ್ನಡ ಭಾಷಾ ಕಲಿಕೆಯಲ್ಲಿನ ಸನ್ನಿವೇಶಗಳಿಗೆ ಪ್ರಭಾವ ಬೀರುವ ಭಾಷಾ ಪಠ್ಯಪುಸ್ತಕಗಳು, ಶಾಲಾ ಕಟ್ಟಡಗಳು ಹೊಂದಿರುವ ಸೌಲಭ್ಯಗಳು, ಭಾಷಾ ತರಗತಿಯಲ್ಲಿನ ಚಟುವಟಿಕೆಗಳು, ಬೋಧನೋಪಕರಣಗಳು, ಕಲಿಕೆಯಲ್ಲಿ ವಿದ್ಯಾರ್ಥಿಗಳನ್ನು ತೊಡಗಿಸಿಕೊಳ್ಳುವಿಕೆ, ಬೋಧನೆ ಮತ್ತು ಕಲಿಕಾ ಪ್ರಕ್ರಿಯೆಯಲ್ಲಿ ಆಧುನಿಕ ತಂತ್ರಜ್ಞಾನದ ಬಳಕೆ ಪ್ರಾಥಮಿಕ ಶಾಲಾ ಶಿಕ್ಷಕರ ಸಮಸ್ಯೆಗಳು, ಪ್ರೌಢಶಾಲಾ ಶಿಕ್ಷಕರ ಸಮಸ್ಯೆಗಳು ಇತ್ಯಾದಿ ವಿಷಯಗಳನ್ನು ಸಂದರ್ಭಾನುಸಾರ ಅವಲೋಕಿಸುವ ಉದ್ದೇಶವನ್ನೂ ಹೊಂದಲಾಗಿದೆ.

ಕ್ಷೇತ್ರಕಾರ್ಯದ ಸಹಾಯದಿಂದ ಮುಂದೆ ನಡೆಸಬಹುದಾದ ಸಂಶೋಧನೆ ಹಾಗೂ ಅಧ್ಯಯನಗಳಿಗೆ ಕೆಲವು ಹೊಳಹುಗಳನ್ನು ನೀಡುವ ಉದ್ದೇಶವಿದೆ.

### ೧.೩.೧ ಕ್ಷೇತ್ರಕಾರ್ಯದ ವ್ಯಾಪ್ತಿ

ಕ್ಷೇತ್ರ ಕಾರ್ಯಕ್ಕಾಗಿ ನಿಗದಿತವಾದ ವ್ಯಾಪ್ತಿಯ ಚೌಕಟ್ಟನ್ನು ಹಾಕಿಕೊಳ್ಳಲಾಗಿದೆ. ಈ ಚೌಕಟ್ಟಿನಲ್ಲಿ

ಅ) ಕ್ಷೇತ್ರ ವ್ಯಾಪ್ತಿ
ಆ) ವಿಷಯ ವ್ಯಾಪ್ತಿ
ಇ) ವಿದ್ಯಾರ್ಥಿ ವ್ಯಾಪ್ತಿ

ಎಂಬ ನೆಲೆಗಳಿವೆ. ಅಧ್ಯಯನವು ಈ ಮೂರು ನಿಗದಿತ ವ್ಯಾಪ್ತಿಯಲ್ಲಿಯೇ ಸಾಗುತ್ತದೆ. ಇಲ್ಲಿನ ಕ್ಷೇತ್ರಕಾರ್ಯ, ಗಮನ, ಗುರುತುಗಳು, ಮಾಹಿತಿಗಳು, ಚರ್ಚೆ, ಚಟುವಟಿಕೆಗಳು, ವಿವರ ವಿಶ್ಲೇಷಣೆಗಳನ್ನು ಈ ಮೂರು ಚೌಕಟ್ಟಿನೊಳಗೆ ಹಿಡಿದಿಡುವ ಪ್ರಯತ್ನವನ್ನು ಮಾಡಲಾಗಿದೆ.

**ಅ) ಕ್ಷೇತ್ರವ್ಯಾಪ್ತಿ:**

ಪ್ರೌಢಶಾಲೆಗಳಲ್ಲಿ ಕನ್ನಡ ಭಾಷಾ ಕಲಿಕೆಯ ಸನ್ನಿವೇಶದಲ್ಲಿ ಏಕರೂಪೀ ಭಾಷಾ ಪಠ್ಯವಿರುವುದರಿಂದ ಸಮಗ್ರ ಕರ್ನಾಟಕವನ್ನು ಅಧ್ಯಯನದ ವ್ಯಾಪ್ತಿಗೆ ತರುವ ಪ್ರಯತ್ನಮಾಡಲಾಗಿದೆ. ಕರ್ನಾಟಕ ಸಾರ್ವಜನಿಕ ಶಿಕ್ಷಣ ಇಲಾಖೆಯು ಪ್ರಥಮ ಭಾಷೆ ಕನ್ನಡ ಪಠ್ಯಪುಸ್ತಕಗಳನ್ನು ಸಮಗ್ರ ಕರ್ನಾಟಕಕ್ಕೆ ಏಕರೂಪಿಯಾಗಿ ನೀಡಿರುವುದರಿಂದ ಅಧ್ಯಯನ ಕ್ಷೇತ್ರವನ್ನು ಸಮಗ್ರವಾಗಿ ಗಣನೆಗೆ ತಂದು ಕೊಳ್ಳುವುದು ಈ ನಿಟ್ಟಿನಲ್ಲಿ ಮುಖ್ಯವಾಗುತ್ತದೆ. ಈ ದೃಷ್ಟಿಕೋನದಿಂದ ಕರ್ನಾಟಕದ ಈ ಕೆಳಗಿನ ೨೧ ಜಿಲ್ಲೆಗಳ ಕೆಲವು ಶಾಲೆಗಳನ್ನು ಕ್ಷೇತ್ರಕಾರ್ಯಕ್ಕಾಗಿ ಯಾದೃಚ್ಛಿಕವಾಗಿ ಆಯ್ಕೆಮಾಡಿಕೊಳ್ಳಲಾಗಿದೆ. ಕರಾವಳಿ ಕರ್ನಾಟಕ, ಮಧ್ಯ ಕರ್ನಾಟಕ ಹಾಗೂ ಉತ್ತರ ಕರ್ನಾಟಕಗಳ ಭಾಗಗಳನ್ನು ಪರಿಗಣಿಸಲಾಗಿದೆ.

| | | |
|---|---|---|
| ಮೈಸೂರು | ಬೆಂಗಳೂರು | ಚಿತ್ರದುರ್ಗ |
| ಮಂಡ್ಯ | ಕೋಲಾರ | ಉಡುಪಿ |
| ಹಾಸನ | ಚಿಕ್ಕಮಗಳೂರು | ಉತ್ತರ ಕನ್ನಡ |
| ದಾವಣಗೆರೆ | ಯಾದಗಿರಿ | ಬಾಗಲಕೋಟೆ |
| ಧಾರವಾಡ | ಬೆಳಗಾವಿ | ಹಾವೇರಿ |
| ಬಿಜಾಪುರ | ರಾಯಚೂರು | ಬೀದರ್ |
| ಗುಲ್ಬರ್ಗ | ತುಮಕೂರು | ಕೊಪ್ಪಳ |

**ಆ) ವಿಷಯ ವ್ಯಾಪ್ತಿ:**

ವಿಷಯ ವ್ಯಾಪ್ತಿಯ ಹಿನ್ನೆಲೆಯಲ್ಲಿ "ಸರಕಾರಿ ಹಾಗೂ ಅನುದಾನಿತ ಪ್ರೌಢಶಾಲೆಗಳಲ್ಲಿನ ಕನ್ನಡ ಪ್ರಥಮ ಭಾಷೆ" ಎಂಬ ಚೌಕಟ್ಟನ್ನು ಹಾಕಿಕೊಳ್ಳಲಾಗಿದೆ. ಅಧ್ಯಯನದ ವ್ಯಾಪ್ತಿಯ ದೃಷ್ಟಿಯಿಂದ ಪ್ರಥಮ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಿರುವ ಸರಕಾರಿ ಕನ್ನಡ ಮಾಧ್ಯಮ ಪ್ರೌಢಶಾಲೆಗಳನ್ನು ಮತ್ತು ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗಿದೆ. ಆಂಗ್ಲ ಮಾಧ್ಯಮಶಾಲೆಗಳು ಹಾಗೂ ಇತರ ಮಾಧ್ಯಮ ಶಾಲೆಗಳನ್ನು ಪರಿಗಣಿಸಲಾಗಿಲ್ಲ. ಕನ್ನಡ ಮಾಧ್ಯಮದಲ್ಲಿ ಭಾಷೆಯನ್ನು ಕಲಿಯುವ ವಿದ್ಯಾರ್ಥಿಗಳ ಸನ್ನಿವೇಶವು ಆಂಗ್ಲ ಮಾಧ್ಯಮಶಾಲೆಗಳಲ್ಲಿ ಕನ್ನಡ ಭಾಷೆಯನ್ನು ಕಲಿಯುವ ವಿದ್ಯಾರ್ಥಿಗಳಿಗಿಂತ ಭಿನ್ನವಾದುದು ಹಾಗೂ ಇತರ ಮಾಧ್ಯಮಗಳಲ್ಲಿ ಕನ್ನಡ ಕಲಿಯುತ್ತಿರುವ ವಿದ್ಯಾರ್ಥಿಗಳ ಭಾಷಾ ಕಲಿಕಾ ಸನ್ನಿವೇಶಗಳಿಗಿಂತ ಭಿನ್ನವಾಗಿರುತ್ತವೆ. ಆದುದರಿಂದ ಈ ಎರಡೂ ವಿಭಾಗದವರನ್ನು ಅಧ್ಯಯನಕ್ಕೆ ಪರಿಗಣಿಸಿರುವುದಿಲ್ಲ. ಆಂಗ್ಲ

ಮಾಧ್ಯಮ ಹಾಗೂ ಇತರ ಭಾಷಾ ಕಲಿಕಾ ಮಾಧ್ಯಮದ ವಿದ್ಯಾರ್ಥಿಗಳನ್ನು ಪರಿಗಣಿಸಿದ್ದರೆ ತುಲನಾತ್ಮಕ ಅಧ್ಯಯನ ಮಾಡಬಹುದಿತ್ತಾದರೂ, ಪ್ರಸ್ತುತ ಅಧ್ಯಯನದ ವ್ಯಾಪ್ತಿಯ ದೃಷ್ಟಿಯಿಂದ ಈ ಮಿತಿಯನ್ನು ಹಾಕಿಕೊಳ್ಳಲಾಗಿದೆ. ಈ ಮಿತಿಗಳು ಮುಂದಿನ ಅಧ್ಯಯನಕ್ಕೆ ಸಾಧ್ಯತೆಯ ವಿಷಯವಾಗಿವೆ.

ಪ್ರೌಢಶಾಲಾ ಶಿಕ್ಷಣದಲ್ಲಿನ ಕನ್ನಡ ಭಾಷಾ ಕಲಿಕೆಯ ಸ್ವರೂಪ, ಕನ್ನಡ ಪ್ರಥಮ ಭಾಷಾ ಪಠ್ಯಪುಸ್ತಕಗಳ ಸ್ವರೂಪ, ಭಾಷಾ ಕಲಿಕೆಯಲ್ಲಿ ಸಾಹಿತ್ಯದ ಸ್ವರೂಪ, ಕನ್ನಡ ಮಾಧ್ಯಮ ಕಲಿಕೆ ಮತ್ತು ಭಾಷಾ ಕಲಿಕೆಗಳ ಅಂತರ್ ಸಂಬಂಧಗಳ ವಿಷಯಗಳಿಗೆ ಸಂಬಂಧಿಸಿದಂತೆ ಸಂಶೋಧನಾ ದೃಷ್ಟಿಯನ್ನು ಹರಿಸಲಾಗಿದ್ದು ಈ ವಿಚಾರಗಳ ಸಮಗ್ರ ವಿಶ್ಲೇಷಣೆಯನ್ನು ಮಾಡಲಾಗಿದೆ. ಸ್ವಾತಂತ್ರಪೂರ್ವ, ಸ್ವಾತಂತ್ರ್ಯೋತ್ತರದ ದಶಕಗಳು ಹಾಗೂ ಆಧುನಿಕ ಸಂದರ್ಭಗಳಲ್ಲಿನ ಕನ್ನಡ ಕಲಿಕೆಯ ಸ್ವರೂಪಗಳನ್ನು, ಓದು, ಬರಹ, ಆಶುಭಾಷಣ, ಗಾಯನ, ಅಭಿನಯ ಕೌಶಲಗಳ ಮೂಲಕ ವಿದ್ಯಾರ್ಥಿಗಳ ಭಾಷಾ ಕೌಶಲಗಳ ಸಾಮರ್ಥ್ಯಗಳನ್ನು, ಭಾಷಾ ಪಠ್ಯಗಳ ರಚನಾ ತತ್ವ ಹಾಗೂ ಭಾಷಾ ಬೋಧನಾ ಉದ್ದಿಷ್ಟ–ನಿರ್ದಿಷ್ಟಗಳ ಕುರಿತು ಚರ್ಚಿಸಲಾಗಿದೆ. ಕಾವ್ಯ, ಗದ್ಯ, ವ್ಯಾಕರಣ, ಲೇಖನಗಳ ಕುರಿತು ವಿಶ್ಲೇಷಣೆ ಮಾಡಲಾಗಿದೆ. ಕನ್ನಡ ಮಾಧ್ಯಮ ಕಲಿಕೆ, ಕನ್ನಡ ಮತ್ತು ಇತರ ವಿಷಯಗಳ ಸಹಸಂಬಂಧ, ತ್ರಿಭಾಷಾ ಸೂತ್ರದ ಮಿತಿ ಶಕ್ತಿಯ ವಿಚಾರಗಳನ್ನು ಅಧ್ಯಯನದ ವಿಷಯ ವ್ಯಾಪ್ತಿಯಲ್ಲಿ ತರಲಾಗಿದೆ. ಕನ್ನಡ ಭಾಷಾ ಬೆಳವಣಿಗೆಗೆ ಪೂರಕವಾಗುವಂತಹ ಶಿಫಾರಸ್ಸುಗಳನ್ನು ಮಾಡಲಾಗಿದೆ.

ಪ್ರೌಢಶಾಲಾ ವಿದ್ಯಾರ್ಥಿಗಳು ಕನ್ನಡ ಭಾಷಾ ಕಲಿಕೆಯಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಭಾಷಿಕ ನೆಲೆಯಲ್ಲಿ ಗುರುತಿಸುವುದು, ಶಿಕ್ಷಣ ಇಲಾಖೆ ನಿರ್ದೇಶಿಸಿರುವ ಕನ್ನಡ ಭಾಷಾ ಬೋಧನೆಯ ಗುರಿ ಮತ್ತು ಉದ್ದೇಶಗಳು ತರಗತಿಯಲ್ಲಿ ಎಷ್ಟರ ಮಟ್ಟಿಗೆ ಸಾಧಿತವಾಗುತ್ತಿವೆ ಎಂಬುದನ್ನು ತಿಳಿದುಕೊಳ್ಳುವುದು ಅಧ್ಯಯನದ ಪ್ರಧಾನ ಉದ್ದೇಶವಾದುದರಿಂದ ಅಧ್ಯಯನದ ಕ್ಷೇತ್ರಕಾರ್ಯದ ವ್ಯಾಪ್ತಿಯನ್ನು ಭಾಷಾ ಕೌಶಲಗಳ ಗಳಿಕೆ ಹಾಗೂ ಅದಕ್ಕೆ ಪೂರಕವಾದ ಅಂಶಗಳಿಗೆ ನಿಗದಿಗೊಳಿಸಲಾಗಿದೆ.

**ಇ) ವಿದ್ಯಾರ್ಥಿ ವ್ಯಾಪ್ತಿ.**

ಕರ್ನಾಟಕದಲ್ಲಿ ಪ್ರೌಢಶಾಲೆಗಳ ವಿದ್ಯಾರ್ಥಿಗಳು ಹಲವು ಬಗೆಯ ವಿದ್ಯಾಸಂಸ್ಥೆಗಳಲ್ಲಿ ವಿಸ್ತಾರವಾಗಿ ಹರಡಿಕೊಂಡು ಕನ್ನಡ ಭಾಷೆಯನ್ನು ಕಲಿಯುತ್ತಿದ್ದಾರೆ. ಪ್ರಥಮ, ದ್ವಿತೀಯ ಹಾಗೂ ತೃತೀಯ ಭಾಷೆಗಳ ನೆಲೆಯಲ್ಲಿ ಕನ್ನಡಾಭ್ಯಾಸ ಮಾಡುತ್ತಿದ್ದಾರೆ. ಅಧ್ಯಯನದ ದೃಷ್ಟಿಯಿಂದ "ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಗಳಲ್ಲಿ ಪ್ರಥಮ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಿರುವ ವಿದ್ಯಾರ್ಥಿಗಳು" ಎಂಬುದಾಗಿ ವಿದ್ಯಾರ್ಥಿ

ವ್ಯಾಪ್ತಿಯನ್ನು ಹಾಕಿಕೊಳ್ಳಲಾಗಿದೆ. ಅಧ್ಯಯನಕ್ಕೆ ೨೧ ಜಿಲ್ಲೆಗಳ ೬೩ ಶಾಲೆಗಳಲ್ಲಿನ ೧೫೦೦ ವಿದ್ಯಾರ್ಥಿಗಳನ್ನು ಯಾದೃಚ್ಛಿಕವಾಗಿ ಆಯ್ಕೆಮಾಡಿಕೊಳ್ಳಲಾಗಿದೆ.

ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿಕೊಳ್ಳುವಾಗ ವ್ಯಾಪ್ತಿಯನ್ನು ಯಾವುದೇ ಒಂದು ತಾಲೂಕು, ಜಿಲ್ಲೆ ಅಥವಾ ಒಂದು ಪ್ರಾಂತ್ಯಕ್ಕೆ ಸೀಮಿತಗೊಳಿಸಿಕೊಂಡಿಲ್ಲ. ಗ್ರಾಮೀಣ, ನಗರ, ಗಡಿನಾಡು ಎಂಬ ವಿಭಾಗ ಮಾಡಿಕೊಂಡಿಲ್ಲ, ಜಾತಿ, ಜನಾಂಗ, ಲಿಂಗ, ವರ್ಗಗಳ ಆಧಾರವಾಗಿಯಾಗಲೀ, ನಿಧಾನಕಲಿಕೆಯವರು, ವಿಶೇಷ ಬುದ್ಧಿಮತ್ತೆ ಇರುವವರು, ಕಲಿಕಾ ನ್ಯೂನತೆಯಿರುವ ವಿದ್ಯಾರ್ಥಿಗಳೆಂದಾಗಲೀ ವಿಭಾಗಿಸಿಕೊಂಡಿರುವುದಿಲ್ಲ. ಅಧ್ಯಯನದ ಆಳ ಮತ್ತು ಹರಹುಗಳ ವ್ಯಾಪ್ತಿಯ ದೃಷ್ಟಿಯಿಂದ ಸರ್ಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮದಲ್ಲಿ ಪ್ರಥಮ ಭಾಷೆಯಾಗಿ ಕನ್ನಡವನ್ನು ಓದುತ್ತಿರುವ ವಿದ್ಯಾರ್ಥಿಗಳು ಮಾತ್ರ ಎಂಬ ಚೌಕಟ್ಟನ್ನೂ, ಮಿತಿಯನ್ನೂ ಹಾಕಿಕೊಂಡು ಅಧ್ಯಯನವನ್ನು ಮಾಡಲಾಗಿದೆ. ಈ ರೀತಿಯ ವಿಭಾಗ ಕ್ರಮಗಳಿಂದ ಅಧ್ಯಯನದ ಫಲಿತಗಳಲ್ಲಿ ಪ್ರೌಢಶಾಲಾ ಕನ್ನಡ ಕಲಿಕೆಯ ಸಮಗ್ರ ಸ್ವರೂಪವನ್ನು ಅರ್ಥೈಸಲು ಸಾಧ್ಯವಾಗುವುದಿಲ್ಲ. ಅಖಿಲ ಕರ್ನಾಟಕ ವ್ಯಾಪ್ತಿಯಲ್ಲಿ ಪ್ರೌಢಶಾಲಾ ಪ್ರಥಮ ಭಾಷಾ ಪಠ್ಯಪುಸ್ತಕಗಳು ಏಕರೂಪಿಯಾಗಿವೆ. ಬೋಧನೋದ್ದೇಶಗಳು ಹಾಗೂ ಮೌಲ್ಯಮಾಪನ ಪ್ರಕ್ರಿಯೆಗಳು ಕೂಡಾ ಏಕರೂಪಿಯಾಗಿವೆ. ಸಮಗ್ರ ಕರ್ನಾಟಕದ ದೃಷ್ಟಿಯಲ್ಲಿನ ಅಧ್ಯಯನದಿಂದ ಕನ್ನಡ ಭಾಷಾ ಕಲಿಕೆಯ ಸ್ವರೂಪವನ್ನು ಸಮಗ್ರವಾಗಿ ಗ್ರಹಿಸಬಹುದಾದ್ದರಿಂದ ಹಲವು ಮಿತಿಗಳ ನಡುವೆಯೂ ವಿದ್ಯಾರ್ಥಿ ವ್ಯಾಪ್ತಿಯನ್ನು ಕರ್ನಾಟಕ ವ್ಯಾಪ್ತಿಯಾಗಿ ಪರಿಗಣಿಸಿದೆ.

ಅಧ್ಯಯನದ ಶೀರ್ಷಿಕೆಯ ವ್ಯಾಪ್ತಿಯಲ್ಲಿ ಪ್ರಾಥಮಿಕ ಶಾಲಾ ವಿಚಾರಗಳು ಬರುವುದಿಲ್ಲವಾದರೂ, ಕನ್ನಡ ಮಾಧ್ಯಮ ಪ್ರೌಢಶಾಲೆಯ ಕನ್ನಡ ಕಲಿಕಾ ವಾತಾವರಣದ ಮೇಲೆ ಪ್ರಾಥಮಿಕ ಶಾಲಾ ಕನ್ನಡ ಕಲಿಕಾ ವಾತಾವರಣ ದಟ್ಟ ಪರಿಣಾಮವನ್ನು ಬೀರುವುದರಿಂದ, ಪ್ರಾಥಮಿಕ ಶಾಲಾ ಕನ್ನಡ ಕಲಿಕಾ ವಾತಾವರಣದ ವಿಚಾರವನ್ನು, ಅಲ್ಲಿಯ ಶಿಕ್ಷಕರ ಸಮಸ್ಯೆಗಳನ್ನು ಸಾಂದರ್ಭಿಕವಾಗಿ ಗಣನೆಗೆ ತೆಗೆದುಕೊಳ್ಳಲಾಗಿದೆ.

### ೧.೩.೨ ಕ್ಷೇತ್ರಕಾರ್ಯದ ಸಿದ್ಧತೆ

ರಾಷ್ಟ್ರೀಯ ಶಿಕ್ಷಣ ನೀತಿಯ ಆಶಯದ ಆಧಾರದ ಮೇಲೆ ರಾಜ್ಯದ ಕನ್ನಡ ಭಾಷಾ ಪಠ್ಯಗಳು ರೂಪಿತವಾಗಿವೆ. ಪಠ್ಯದ ಬೋಧನಾ ಸಂದರ್ಭಗಳಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯ ಧ್ಯೇಯಗಳು ಅನುಷ್ಠಾನಗೊಳ್ಳುತ್ತಿರುವ ಬಗೆಯನ್ನು ತಿಳಿಯಲು ಓದು, ಬರಹ, ಗಾಯನ, ಅಭಿನಯ, ಆಶುಭಾಷಣದ ಚಟುವಟಿಕೆಗಳನ್ನು ಕೈಗೊಳ್ಳಲಾಗಿದೆ. ಭಾಷಾ ಕೌಶಲಗಳ ವಿಚಾರವಾಗಿ ಕೈಗೊಂಡ ಚಟುವಟಿಕೆಗಳಿಗಾಗಿ ಕೆಲವು ಸಿದ್ಧತೆಗಳನ್ನು ಮಾಡಿಕೊಳ್ಳಲಾಯಿತು. ಓದುವಿಕೆ ಹಾಗೂ ಬರವಣಿಗೆಯ ಕೌಶಲದ ಸಾಮರ್ಥ್ಯ ತಿಳಿಯಲು ಆಯಾಯ ತರಗತಿಯ

ವಾಕ್ಯಗಳನ್ನು ಸ್ವರ, ವ್ಯಂಜನ, ಅರ್ಧಸ್ವರ, ಗುಣಿತಾಕ್ಷರ, ಒತ್ತಕ್ಷರ, ಅನುನಾಸಿಕಗಳಿಗೆ ಆದ್ಯತೆ ನೀಡಿ ಬಳಸಿಕೊಳ್ಳಲಾಯಿತು. ಓದುವಿಕೆಯಲ್ಲಿ ವಿದ್ಯಾರ್ಥಿಗಳು ಮಾಡುವ ವ್ಯತ್ಯಾಸಗಳನ್ನು ಗುರುತಿಸಲು ವಾಕ್ಯಗಳಿಗೆ ಅನುಗುಣವಾದ ಮೌಲ್ಯಮಾಪನ ತಖ್ತೆಗಳನ್ನು ಮಾಡಿಕೊಳ್ಳಲಾಯಿತು. ಅನುಬಂಧದಲ್ಲಿ ಮೌಲ್ಯಮಾಪನ ತಖ್ತೆಗಳನ್ನು ನೀಡಲಾಗಿದೆ. ಮಾತನಾಡುವ ಕೌಶಲದ ಸಾಮರ್ಥ್ಯ ತಿಳಿಯಲು ವಿದ್ಯಾರ್ಥಿಗಳ ಮಟ್ಟಕ್ಕನುಗುಣವಾಗಿ ವಿಷಯಗಳನ್ನು ಆಯ್ಕೆ ಮಾಡಿಕೊಂಡು ಆಶುಭಾಷಣವನ್ನು ನಿಗದಿಪಡಿಸಲಾಯ್ತು. ಭಾಷಾ ಕಲಿಕೆಯ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳು ಗಳಿಸಿಕೊಂಡ ಗಾಯನ ಹಾಗೂ ಅಭಿನಯ ಕೌಶಲಗಳನ್ನೂ ತಿಳಿಯಲು ಚಟುವಟಿಕೆಗಳನ್ನು ರಚಿಸಿಕೊಳ್ಳಲಾಯಿತು. ಪ್ರತಿಭಾ ಕಾರಂಜಿಯ ಕಾರ್ಯಕ್ರಮಗಳ ನಿಯಮಗಳನ್ನು ಮೌಲ್ಯಮಾಪನಕ್ಕೆ ಅಳವಡಿಸಿಕೊಳ್ಳಲಾಯಿತು.

### ೧.೩.೩ ಕ್ಷೇತ್ರಕಾರ್ಯದ ವಿಧಾನ

ಕ್ಷೇತ್ರಕಾರ್ಯವು ಸಂಪೂರ್ಣವಾಗಿ ಚಟುವಟಿಕೆಯಾಧಾರಿತ, ಮಾಹಿತಿ ಸಂಗ್ರಹಣ, ಅವಲೋಕನ ಹಾಗೂ ವಿಶ್ಲೇಷಣಾ ವಿಧಾನಗಳದ್ದಾಗಿದೆ. ವಿದ್ಯಾರ್ಥಿಗಳು ಭಾಷಾ ಕಲಿಕೆಯಲ್ಲಿ ಗಳಿಸಿದ ಕೌಶಲಗಳ ಮಟ್ಟವನ್ನು ತಿಳಿಯುವ ಉದ್ದೇಶಕ್ಕಾಗಿ ಮಕ್ಕಳಿಂದ ಆಯಾ ತರಗತಿಯ ಪಠ್ಯದಿಂದ ಆಯ್ದ ವಾಕ್ಯಗಳನ್ನು ಓದಿಸುವಿಕೆ, ಆಯಾ ತರಗತಿಯ ಪಠ್ಯದಿಂದಾಯ್ದ ವಾಕ್ಯಗಳನ್ನು ಬರೆಸುವಿಕೆ, ವಿದ್ಯಾರ್ಥಿಗಳ ಮಟ್ಟಕ್ಕೆ ನಿಲುಕುವ ವಿಚಾರಗಳ ಕುರಿತು ಆಶುಭಾಷಣ, ಅಭಿನಯ ಹಾಗೂ ಗಾಯನಗಳ ಚಟುವಟಿಕೆಗಳನ್ನು ಮಾಡಲಾಗಿದೆ. ಸಂದರ್ಭಾನುಸಾರ ಕನ್ನಡ ಭಾಷಾ ಕಲಿಕೆಯ ವಿಚಾರ, ಬೋಧನೆಯ ಉದ್ದೇಶ, ಶಿಕ್ಷಕರ ಸಮಸ್ಯೆಗಳು, ಇತರ ಭಾಷಾ ಕಲಿಕೆಯ ಸಂದರ್ಭಗಳು ಹಾಗೂ ಇತರ ವಿಷಯಗಳ ಕಲಿಕಾ ಸಂದರ್ಭಗಳು, ವಿದ್ಯಾರ್ಥಿಗಳಲ್ಲಿನ ಸಾಂಸ್ಕೃತಿಕ ಆಸಕ್ತಿಗಳು, ವಿದ್ಯಾರ್ಥಿಗಳ ಗುಣ ಸ್ವಭಾವ, ಕಲಿಕೆಯಲ್ಲಿ ವಿದ್ಯಾರ್ಥಿಗಳು ಹಿಂದುಳಿಯಲು ಕಾರಣ ಇತ್ಯಾದಿ ವಿಚಾರಗಳ ಕುರಿತು ಶಿಕ್ಷಕರೊಂದಿಗೆ ಚರ್ಚೆಯನ್ನು ಮಾಡಲಾಗಿದೆ. ಅಧ್ಯಯನಕ್ಕೆ ಬೇಕಾದ ಕೆಲವು ಉಪಯುಕ್ತ ಅಂಕಿ ಅಂಶಗಳನ್ನು ತರಗತಿಯ ಅಧ್ಯಾಪಕರಿಂದ ಹಾಗೂ ಕಚೇರಿಯಿಂದ ಪಡೆದುಕೊಂಡು ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ.

ಶಿಕ್ಷಕರ ಗುಣ ಸ್ವಭಾವ, ತರಗತಿಗಳಲ್ಲಿ ಮತ್ತು ಪಾಠಗಳಲ್ಲಿನ ತೊಡಗಿಸಿಕೊಳ್ಳುವಿಕೆ, ಟಿಪ್ಪಣಿ ಕೊಡುವ ರೀತಿ, ತರಗತಿಯಲ್ಲಿ ಕೈಗೊಳ್ಳುವ ಚಟುವಟಿಕೆಗಳು ಇತ್ಯಾದಿ ವಿಚಾರಗಳ ಕುರಿತು ವಿದ್ಯಾರ್ಥಿಗಳಿಂದ ಹಾಗೂ ಪೋಷಕರಿಂದ ಮಾಹಿತಿಗಳನ್ನು ಸಾಂದರ್ಭಿಕವಾಗಿ ಸಂಗ್ರಹಿಸಲಾಗಿದೆ.

ಅ) **ಓದುವಿಕೆಯ ಸಂದರ್ಭ**

- ಆಯಾ ತರಗತಿಯ ಪಠ್ಯಪುಸ್ತಕದ ಐದು ಬೇರೆ ಬೇರೆ ವಾಕ್ಯಗಳನ್ನು ಪ್ರತ್ಯೇಕವಾಗಿ ಕಾಗದದಲ್ಲಿ ಬರೆದು ಅವುಗಳನ್ನು ವಿದ್ಯಾರ್ಥಿಗಳಿಂದ ಓದಿಸಲಾಯಿತು.
- ತರಗತಿಯ ಐದು ವಿದ್ಯಾರ್ಥಿಗಳನ್ನು ಮಾತ್ರ ಓದುವಿಕೆಗೆ ಯಾದೃಚ್ಛಿಕವಾಗಿ ಆಯ್ಕೆ ಮಾಡಿಕೊಳ್ಳಲಾಗಿತ್ತು.
- ಆಯಾ ತರಗತಿಯ ಬೇರೆ ಬೇರೆ ವಾಕ್ಯಗಳನ್ನು ಸ್ವರ, ವ್ಯಂಜನ, ಅರ್ಧಸ್ವರ, ಗುಣಿತಾಕ್ಷರ, ಒತ್ತಕ್ಷರ, ಅಲ್ಪಪ್ರಾಣ, ಮಹಾಪ್ರಾಣ, ಅನುನಾಸಿಕಗಳಿಗೆ ಆದ್ಯತೆ ನೀಡಿ ಪ್ರತ್ಯೇಕ ಕಾಗದದಲ್ಲಿ ವಾಕ್ಯಗಳನ್ನು ಬರೆದಿಡಲಾಗಿತ್ತು.
- ವಿದ್ಯಾರ್ಥಿಗಳು ಓದುತ್ತಿರುವಾಗ ಮಾಡುವ ವ್ಯತ್ಯಾಸಗಳನ್ನು ಗುರುತಿಸಿ, ಮೌಲ್ಯಮಾಪನ ತಖ್ತೆಯಲ್ಲಿ ನಮೂದಿಸಿಕೊಳ್ಳಲಾಯಿತು.
- ಓದುವಿಕೆಯ ಸಂದರ್ಭದಲ್ಲಿ ವಿದ್ಯಾರ್ಥಿಗಳ ನಿರರ್ಗಳತೆ, ಧೈರ್ಯ, ಅಂಜಿಕೆ, ಹಿಂಜರಿಕೆ, ಕೀಳರಿಮೆ ಇತ್ಯಾದಿ ಅಂಶಗಳನ್ನು ಗಮನಿಸಲಾಯಿತು.

ಆ) **ಬರವಣಿಗೆಯ ಸಂದರ್ಭ.**

- ಆಯಾ ತರಗತಿಯ ಪಠ್ಯಪುಸ್ತಕದ ಹತ್ತು ವಾಕ್ಯಗಳನ್ನು ಸ್ವರ, ವ್ಯಂಜನ, ಅರ್ಧಸ್ವರ, ಗುಣಿತಾಕ್ಷರ, ಒತ್ತಕ್ಷರ, ಅಲ್ಪಪ್ರಾಣ, ಮಹಾಪ್ರಾಣ, ಅನುನಾಸಿಕಗಳಿಗೆ ಆದ್ಯತೆ ನೀಡಿ ಬರೆದುಕೊಳ್ಳಲಾಯಿತು.
- ಆಯಾ ತರಗತಿಗಳಲ್ಲಿ ಹತ್ತು ವಾಕ್ಯಗಳ ಉಕ್ತಲೇಖನವನ್ನು ಪ್ರತ್ಯೇಕ ಕಾಗದದಲ್ಲಿ ಬರೆಯಿಸಲಾಗಿತ್ತು.
- ಉಕ್ತಲೇಖನದ ಸಂದರ್ಭದಲ್ಲಿ ಒಬ್ಬರನ್ನೊಬ್ಬರು ನೋಡಿ ಬರೆಯದಂತೆ ಸೂಚಿಸಿ ಗಮನಿಸಲಾಗಿತ್ತು.
- ತದನಂತರ ಮೌಲ್ಯಮಾಪನ ಮಾಡಿ ವಿದ್ಯಾರ್ಥಿಗಳು ಬರವಣಿಗೆಯಲ್ಲಿ ಮಾಡಿರುವ ವ್ಯತ್ಯಾಸಗಳನ್ನು ಗುರುತಿಸಿ ಪಟ್ಟಿಮಾಡಲಾಯಿತು.

ಇ) **ಆಶುಭಾಷಣ ಸಂದರ್ಭ.**

- ವಿದ್ಯಾರ್ಥಿಗಳು ಈಗಾಗಲೇ ಕಲಿತಿರುವ ಕೆಲವು ವಿಚಾರಗಳಿಗೆ ಸಂಬಂಧಿಸಿದಂತೆ ಹಾಗೂ ವಿದ್ಯಾರ್ಥಿಗಳ ಮಟ್ಟಕ್ಕೆ ನಿಲುಕುವ ಮನೆ, ತಾಯಿ, ಗುರು, ವಿದ್ಯೆ, ಹಸು, ಶಾಲೆ, ಭಾರತ..... ಇತ್ಯಾದಿ ಪದಗಳನ್ನು ಆಯ್ಕೆ ಮಾಡಲಾಯಿತು.

- ಪ್ರತ್ಯೇಕ ಚೀಟಿಗಳಲ್ಲಿ ಪದಗಳನ್ನು ಬರೆದು ಆಶುಭಾಷಣಕ್ಕಾಗಿ ವಿದ್ಯಾರ್ಥಿಗಳನ್ನು ಕರೆಯಲಾಯಿತು.
- ವಿದ್ಯಾರ್ಥಿಗಳು ಮುಂದೆ ಬರದಿದ್ದಾಗ ಯಾದೃಚ್ಛಿಕವಾಗಿ ನಾಲ್ಕು ವಿದ್ಯಾರ್ಥಿಗಳನ್ನು ಕರೆಯಲಾಯಿತು.
- ವಿದ್ಯಾರ್ಥಿಗಳ ಭಾಷಾಸಾಮರ್ಥ್ಯ, ಸಭಾಕಂಪನ, ಸಮಯಪ್ರಜ್ಞೆ, ಸೃಜನಶೀಲತೆ, ಧೈರ್ಯ, ಭಾಷಾಶೈಲಿ ಇತ್ಯಾದಿ ಅಂಶಗಳನ್ನು ಗಮನಿಸಲಾಯಿತು.

**ಈ) ಗಾಯನ ಸಂದರ್ಭ.**

- ಪಠ್ಯದಲ್ಲಿ ಕಲಿತ, ಯಾವುದೇ ತರಗತಿಯ ಕನ್ನಡದ ಗೀತೆಯೊಂದನ್ನು ಹಾಡಲು ತಿಳಿಸಲಾಯಿತು.
- ವಿದ್ಯಾರ್ಥಿಗಳು ಮುಂದೆ ಬರದಿದ್ದಾಗ ಯಾದೃಚ್ಛಿಕವಾಗಿ ನಾಲ್ಕು ವಿದ್ಯಾರ್ಥಿಗಳನ್ನು ಕರೆಯಲಾಯಿತು.
- ಹಾಡುವಲ್ಲಿ ಹಿಂಜರಿಕೆಯಿರುವ ವಿದ್ಯಾರ್ಥಿಗಳಲ್ಲಿ ಒಂದು ಚರಣವನ್ನು ಮಾತ್ರ ಹಾಡಲು ತಿಳಿಸಲಾಯಿತು.
- ವಿದ್ಯಾರ್ಥಿಗಳಲ್ಲಿರುವ ಸಭಾಕಂಪನ, ಧೈರ್ಯ, ಗಾಯನ ಕೌಶಲ ಇತ್ಯಾದಿ ಅಂಶಗಳನ್ನು ಗಮನಿಸಲಾಯಿತು.

**ಉ) ಅಭಿನಯ ಸಂದರ್ಭ.**

- ವಿದ್ಯಾರ್ಥಿಗಳು ಈಗಾಗಲೇ ಗಮನಿಸಿರುವ ಕೆಲವು ವಿಚಾರಗಳಿಗೆ ಸಂಬಂಧಿಸಿದಂತೆ ಹಾಗೂ ವಿದ್ಯಾರ್ಥಿಗಳ ಮಟ್ಟಕ್ಕೆ ನಿಲುಕುವ ತರಕಾರಿ ಮಾರುವವ, ಗೊಂಬೆಬೇಕೆಂದು ಹಟಹಿಡಿದ ಮಗು, ಎಳನೀರು ಮಾರುವವ, ವೈದ್ಯ, ಶಿಕ್ಷಕ...... ಇತ್ಯಾದಿಯಾಗಿ ಕೆಲವು ಅಭಿನಯ ವಿಷಯಗಳನ್ನು ಪಟ್ಟಿಮಾಡಲಾಯಿತು.
- ಪ್ರತ್ಯೇಕ ಚೀಟಿಗಳಲ್ಲಿ ಪದಗಳನ್ನು ಬರೆದು ಅಭಿನಯಕ್ಕಾಗಿ ವಿದ್ಯಾರ್ಥಿಗಳನ್ನು ಕರೆಯಲಾಯಿತು.
- ವಿದ್ಯಾರ್ಥಿಗಳು ಮುಂದೆ ಬರದಿದ್ದಾಗ ಯಾದೃಚ್ಛಿಕವಾಗಿ ನಾಲ್ಕು ವಿದ್ಯಾರ್ಥಿಗಳನ್ನು ಕರೆಯಲಾಯಿತು.
- ವಿದ್ಯಾರ್ಥಿಗಳ ಅಭಿನಯ ಚತುರತೆ, ಭಾಷಾಸಾಮರ್ಥ್ಯ, ಸಭಾಕಂಪನ, ಸಮಯಪ್ರಜ್ಞೆ, ಸೃಜನಶೀಲತೆ, ಧೈರ್ಯ, ಭಾಷಾಶೈಲಿ ಇತ್ಯಾದಿ ಅಂಶಗಳನ್ನು ಗಮನಿಸಲಾಯಿತು.

## ೧.೪ ಅಧ್ಯಯನದ ಮಿತಿ

ಪ್ರಸ್ತುತ ಅಧ್ಯಯನಕ್ಕೆ ಹಲವು ಮಿತಿಗಳಿವೆ. ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಮಾಹಿತಿಗಳ ಆಧಾರದ ಮೇಲೆ ಅಧ್ಯಯನ ನಿಂತಿದೆ. ಅಧ್ಯಯನಕ್ಕೆ ಕರ್ನಾಟಕದ ೨೧ ಜಿಲ್ಲೆಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಪ್ರತೀ ಜಿಲ್ಲೆಯ ೨ ಸರ್ಕಾರಿ ಕನ್ನಡ ಮಾಧ್ಯಮ ಪ್ರೌಢಶಾಲೆಗಳನ್ನು ಹಾಗೂ ೧ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಥಮ ಭಾಷೆಯಾಗಿ ಕನ್ನಡವನ್ನು ಕಲಿಯುವ ವಿದ್ಯಾರ್ಥಿಗಳಿಗೆ ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ. ಆಂಗ್ಲಮಾಧ್ಯಮವನ್ನು, ಅನುದಾನ ರಹಿತ ಶಾಲೆಗಳನ್ನು, ದ್ವಿತೀಯ, ತೃತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವ ವಿದ್ಯಾರ್ಥಿಗಳನ್ನು ಅಧ್ಯಯನಕ್ಕೆ ತೆಗೆದುಕೊಂಡಿರುವುದಿಲ್ಲ. ಅಧ್ಯಯನದ ಅತಿವ್ಯಾಪ್ತಿಯ ದೃಷ್ಟಿಯಿಂದ ಈ ಮಿತಿಯನ್ನು ಹಾಕಿಕೊಳ್ಳಲಾಗಿದೆ.

ಈ ಅಧ್ಯಯನವು ಸಂಪೂರ್ಣವಾಗಿ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯುವ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳನ್ನು ಕೇಂದ್ರೀಕರಿಸಿಕೊಂಡಿದೆ. ರಾಷ್ಟ್ರೀಯ ಶಿಕ್ಷಣ ನೀತಿಯ ಭಾಷಾ ಬೋಧನೆಯ ಗುರಿ ಹಾಗೂ ಉದ್ದೇಶಗಳು ತರಗತಿಯಲ್ಲಿ ಎಷ್ಟರಮಟ್ಟಿಗೆ ಈ ತರಗತಿಗಳಲ್ಲಿ ಸಾಧಿತವಾಗುತ್ತಿವೆಯೆಂಬುದನ್ನು ಗಮನಿಸುವುದು, ತಿಳಿದುಕೊಳ್ಳುವುದು, ಕನ್ನಡ ಭಾಷಾ ಕಲಿಕೆಯಲ್ಲಿ ವಿದ್ಯಾರ್ಥಿಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಗುರುತಿಸುವುದು, ಕಾರಣಗಳನ್ನು ಕಂಡುಕೊಳ್ಳುವುದು, ಪರಿಹಾರಗಳ ಕುರಿತು ಚರ್ಚಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಆದುದರಿಂದ ಕನ್ನಡ ಭಾಷಾ ಬೋಧಕರು, ಅವರ ತರಬೇತಿಯ ವಿಚಾರಗಳು, ಪದವಿ ಹಾಗೂ ಬಿ.ಎಡ್ ತರಬೇತಿಯ ಅಧ್ಯಯನ ಸಾಮಗ್ರಿಗಳು, ಪ್ರಾಥಮಿಕ ಶಾಲೆಯಲ್ಲಿನ ಕನ್ನಡ ಕಲಿಕೆಯ ಸಂದರ್ಭದ ವಿಚಾರಗಳು, ಅಲ್ಲಿಯ ಸಮಸ್ಯೆಗಳು, ಕನ್ನಡ ಭಾಷಾ ತರಗತಿಗಳಿಗಿರುವ ಸೌಲಭ್ಯಗಳು, ಪದವಿಪೂರ್ವದ ಹಂತದಲ್ಲಿನ ವಿದ್ಯಾರ್ಥಿಗಳ ಕನ್ನಡ ಕಲಿಕೆಯ ಸಮಸ್ಯೆಗಳು ಇತ್ಯಾದಿ ವಿಷಯಗಳನ್ನು ಸಮಗ್ರವಾಗಿ ಗಣನೆಗೆ ತೆಗೆದುಕೊಂಡಿಲ್ಲ. ಪ್ರೌಢಶಾಲಾ ವಿದ್ಯಾರ್ಥಿಗಳ ಕನ್ನಡ ಕಲಿಕೆಯ ಹಿನ್ನೆಲೆಯಲ್ಲಿ ಈ ಎಲ್ಲಾ ವಿಚಾರಗಳು ಗಣನೆಗೆ ಬರುತ್ತವೆಯಾದರೂ ಅಧ್ಯಯನದ ವ್ಯಾಪ್ತಿಯ ದೃಷ್ಟಿಯಿಂದ ಈ ವಿಚಾರಗಳ ಕುರಿತು ಹೆಚ್ಚಿನ ಗಮನ ನೀಡಿರುವುದಿಲ್ಲ.

ಅಧ್ಯಯನದಲ್ಲಿ ನಗರದ ವಿದ್ಯಾರ್ಥಿಗಳು, ಗ್ರಾಮೀಣ ವಿದ್ಯಾರ್ಥಿಗಳು, ಲಿಂಗಾಧಾರಿತ, ಜಾತಿ-ಜನಾಂಗಾಧಾರಿತ, ಪ್ರಾಂತ್ಯವಾರು, ಕನ್ನಡ ಮನೆಮಾತಾದ ಮಕ್ಕಳು, ಅನ್ಯ ಭಾಷಿಕ ವಿದ್ಯಾರ್ಥಿಗಳು, ದ್ವಿಭಾಷಿಕ ಅಥವಾ ಗಡಿನಾಡು ವಿದ್ಯಾರ್ಥಿಗಳು ಮುಂತಾದ ಯಾವ ವಿಭಾಗಗಳನ್ನೂ ಮಾಡಿಕೊಂಡಿಲ್ಲ. ಈ ರೀತಿಯ ವಿಭಾಗ ಮಾಡಿಕೊಂಡಲ್ಲಿ ಅಧ್ಯಯನದ ಫಲಿತಕ್ಕೆ ಭಿನ್ನ ವಿವೇಚನೆಗಳು ಸೇರಿಕೊಳ್ಳುವ ಸಾಧ್ಯತೆಗಳಿರಬಹುದಾದರೂ ಅಧ್ಯಯನದ

ವ್ಯಾಪ್ತಿಯ ದೃಷ್ಟಿಯಿಂದ ಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ. ಈ ಮಿತಿಗಳು ಮುಂದಿನ ಸಂಶೋಧನೆಗಳಿಗೆ ಸಾಧ್ಯತೆಗಳಾಗಿವೆ ಎಂಬುದೂ ಗಮನಾರ್ಹ ಅಂಶ.

## ೧.೫ ಅಧ್ಯಯನದ ಮಹತ್ವ

ಕರ್ನಾಟಕದ ರಾಜ್ಯಭಾಷೆಯ ಕಲಿಕೆಯಲ್ಲಿ ಕನ್ನಡ ಮಾಧ್ಯಮದ ಪ್ರೌಢಶಾಲಾ ವಿದ್ಯಾರ್ಥಿಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಪ್ರೌಢಶಾಲೆಗಳ ಕನ್ನಡ ಕಲಿಕೆಯ ಹಿನ್ನೆಲೆಯನ್ನು ಆಧಾರವಾಗಿಟ್ಟುಕೊಂಡು ಬೋಧನೆಯ ಕ್ಷೇತ್ರದಲ್ಲಾಗಬೇಕಾದ ಬದಲಾವಣೆಗಳು, ಭಾಷಾ ಶಿಕ್ಷಣ ಪದ್ಧತಿಯಲ್ಲಾಗಬೇಕಾದ ಮರುಚಿಂತನೆ, ಆಧುನಿಕ ಭಾಷಾ ವಿಜ್ಞಾನದ ಕ್ರಮಬದ್ಧ ಅಳವಡಿಕೆ, ಆಧುನಿಕ ದೃಕ್–ಶ್ರವಣ ಮಾಧ್ಯಮಗಳನ್ನು ಬಳಸಿಕೊಂಡು ಕನ್ನಡ ಕಲಿಕಾ ಸನ್ನಿವೇಶಗಳನ್ನು ಆಸಕ್ತಿದಾಯಕ ಹಾಗೂ ಸಂತಸದ ಕಲಿಕೆಯ ವಾತಾವರಣವನ್ನಾಗಿಸಿಕೊಳ್ಳುವತ್ತ ಚಿಂತಿಸಬೇಕಾದ ಅನಿವಾರ್ಯತೆ ಪ್ರೌಢಶಿಕ್ಷಣ ಹಂತದಲ್ಲಿದೆ ಎಂಬ ವಿಚಾರವನ್ನು ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ರಾಷ್ಟ್ರೀಯ ಶಿಕ್ಷಣ ನೀತಿಯ ಭಾಷಾ ಬೋಧನೆಯ ಗುರಿ ಹಾಗೂ ಉದ್ದೇಶಗಳು ಪ್ರೌಢಶಾಲಾ ತರಗತಿಗಳಲ್ಲಿ ಎಷ್ಟರಮಟ್ಟಿಗೆ ಸಾಧಿತವಾಗುತ್ತಿವೆ ಹಾಗೂ ವಿದ್ಯಾರ್ಥಿಗಳು ಕನ್ನಡ ಕಲಿಕೆಯ ಸಂದರ್ಭದಲ್ಲಿ ಎದುರಿಸುತ್ತಿರುವ ಸಮಸ್ಯೆಗಳ ಚಿತ್ರಣಗಳು ಈ ಅಧ್ಯಯನದಲ್ಲಿದೆ. ಇದರ ಆಧಾರದ ಮೇಲೆ ಶಿಕ್ಷಕರು ವಿದ್ಯಾರ್ಥಿಗಳ ಕಲಿಕಾ ಹಿನ್ನೆಲೆಯ ಸಂದರ್ಭದ ಸಮಸ್ಯೆಗಳನ್ನು ಸರಿಯಾಗಿ ಗುರುತಿಸಿ ಕಲಿಕಾ ಪ್ರಕ್ರಿಯೆಯ ತೊಡಕುಗಳನ್ನು ನಿವಾರಿಕೊಳ್ಳಬಹುದಾಗಿದೆ.

ಕನ್ನಡ ಮಾಧ್ಯಮದಲ್ಲಿ ವಿದ್ಯಾರ್ಥಿಗಳು ಗಣಿತ, ವಿಜ್ಞಾನ, ಸಮಾಜ ವಿಜ್ಞಾನಗಳನ್ನೂ ಕನ್ನಡ ಭಾಷೆಯ ಮೂಲಕ ಕಲಿಯುತ್ತಾರೆ. ಕನ್ನಡ ಭಾಷಾ ಕೌಶಲಗಳಲ್ಲಿ ಕಡಿಮೆ ಸಾಮರ್ಥ್ಯಗಳಿಸುವ ವಿದ್ಯಾರ್ಥಿಗಳು ಇತರ ವಿಷಯಗಳಲ್ಲೂ ಹಿಂದುಳಿಯುತ್ತಿದ್ದಾರೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಇಂತಹ ಸನ್ನಿವೇಶಕ್ಕೆ ಪ್ರಾಥಮಿಕ ಶಿಕ್ಷಣದ ಕನ್ನಡ ಕಲಿಕಾ ಸನ್ನಿವೇಶಗಳು ಪ್ರಮುಖ ಪಾತ್ರವಹಿಸುತ್ತವೆ. ಅಧ್ಯಯನದ ಆಶಯದಂತೆ ಪ್ರಾಥಮಿಕ ಶಿಕ್ಷಣದ ಕನ್ನಡ ಕಲಿಕಾ ಸನ್ನಿವೇಶದಲ್ಲಿ ಹಲವು ಬದಲಾವಣೆಗಳನ್ನು ತರಬಹುದಾಗಿದೆ. ಈ ವಿಚಾರವನ್ನು ಗಮನದಲ್ಲಿಟ್ಟುಕೊಂಡು ಪ್ರೌಢಶಾಲಾ ಹಂತದಲ್ಲಿ ಕನ್ನಡ ಕಲಿಕಾ ಸುಧಾರಣೆಗಾಗಿ ಆಯಾಯ ಶಾಲೆಯವರು ಶಾಲಾ ಮಟ್ಟದಲ್ಲಿ ಹಲವು ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಳ್ಳಬಹುದಾಗಿದೆ. ಕನ್ನಡ ಬೋಧನೆಯ ಸಂದರ್ಭಗಳಲ್ಲಿ ಆಧುನಿಕ ತಂತ್ರಜ್ಞಾನ, ಮಾಹಿತಿ ತಂತ್ರಜ್ಞಾನಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳುವ ಕುರಿತು ಅನೇಕ ಸೃಜನಶೀಲ ಕಾರ್ಯಗಳನ್ನು ಶಾಲಾ ಮಟ್ಟದಲ್ಲಿ, ತಾಲೂಕು ಮಟ್ಟಗಳಲ್ಲಿ

ಮಾಡಬಹುದಾಗಿದೆ. ಈ ಮೂಲಕ ಶಾಲಾ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸಿಕೊಳ್ಳಬಹುದಾಗಿದೆ.

ಶಿಕ್ಷಣ ಇಲಾಖೆಯು ಈ ಅಧ್ಯಯನವನ್ನು ಗಂಭೀರವಾಗಿ ಪರಿಗಣಿಸಬಹುದಾಗಿದೆ. ಅಧ್ಯಯನದ ಫಲಿತಗಳನ್ನು ಚರ್ಚಿಸಿ ಪ್ರೌಢಶಾಲಾ ಶಿಕ್ಷಣದ ಕನ್ನಡ ಕಲಿಕೆಗೆ ಹೊಸ ಆಯಾಮವನ್ನು ನೀಡಬಹುದಾಗಿದೆ. ಬಿ.ಎಡ್ ಪಠ್ಯಕ್ರಮವನ್ನು ಪ್ರೌಢಶಾಲಾ ವಿದ್ಯಾರ್ಥಿಗಳ ಭಾಷಿಕ ಸಾಮರ್ಥ್ಯವನ್ನು ಹೇಗೆ ಹೆಚ್ಚಿಸಬಹುದೆಂಬ ಸಿದ್ಧಾಂತಗಳ ಆಧಾರದ ಮೇಲೆ ಪುನರ್ ರೂಪಿಸಬಹುದಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಸಾಹಿತ್ಯ ಅಕಾಡೆಮಿ, ಕನ್ನಡ ಗಣಕ ಪರಿಷತ್ತು, ಕನ್ನಡ ಕಾವಲು ಪಡೆ, ಕನ್ನಡ ಪುಸ್ತಕ ಪ್ರಕಾಶನ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡದ ಅಭಿವೃದ್ಧಿಗಾಗಿಯೇ ಇರುವ ಕನ್ನಡ ವಿಶ್ವವಿದ್ಯಾನಿಲಯಗಳು ಈ ಅಧ್ಯಯನವನ್ನು ಗಂಭೀರವಾಗಿ ಪರಿಗಣಿಸಿ ಪ್ರೌಢಶಾಲಾ ಕನ್ನಡ ಕಲಿಕಾ ಸನ್ನಿವೇಶದಲ್ಲಿ ರಚನಾತ್ಮಕ ಬೆಳವಣಿಗೆಗಳನ್ನು ತರಲು ಹಲವು ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬಹುದಾಗಿದೆ.

**ಅಡಿಟಿಪ್ಪಣಿ:**


೧) Government of Karnataka, Department of Public Instruction, 'EDUCATION IN KARNATAKA 2012-13' "AN ANALITICAL REPORT".

೨) 'Annual status of education report ( ASER) report-2009'.www.ASER.com.

೩) ಮಾಲಿನಿ ಮಲ್ಯ., ೧೯೯೪, **ಡಾ.ಶಿವರಾಮ ಕಾರಂತರ ಲೇಖನಗಳು–ಸಂಪುಟ–೨,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೪) Government of Karnataka, Department of Public Instruction, 'EDUCATION IN KARNATAKA 2012-13' "AN ANALITICAL REPORT".

# ಅಧ್ಯಾಯ - ೨

## ಪ್ರೌಢಶಿಕ್ಷಣದಲ್ಲಿ ಕನ್ನಡ ಭಾಷಾಕಲಿಕೆಯ ಸ್ವರೂಪ

ಮನುಷ್ಯನು ತನ್ನ ಭಾವನೆಗಳನ್ನು ಇತರರಿಗೆ ತಿಳಿಸಲು ಪ್ರಯತ್ನ ಪೂರ್ವಕವಾಗಿ ಧ್ವನಿಸಂಕೇತಗಳನ್ನು ಉಚ್ಚರಿಸಿ, ಅನುಸರಿಸಿ, ಅನುಕರಿಸಿ, ತನ್ನ ಅಗತ್ಯಕ್ಕೆ ಅನುಗುಣವಾಗಿ ರೂಢಿಸಿಕೊಂಡ ಮಾಧ್ಯಮವೇ ಭಾಷೆ. ಅನುಕರಣೆಯಿಂದ ಗಳಿಸಿಕೊಂಡ ಸಂವಹನ ಮಾಧ್ಯಮ. ಲಿಪಿಸಹಿತವಾದ ಭಾಷೆಗೆ ನಾಲ್ಕು ಕೌಶಲಗಳಿವೆ.




೧) ಆಲಿಸುವಿಕೆ,

೨) ಮಾತನಾಡುವಿಕೆ,

೩) ಓದು,

೪) ಬರಹ.

ಈ ನಾಲ್ಕು ಕೌಶಲಗಳು ಒಂದಕ್ಕೊಂದು ಪೂರಕವಾಗಿವೆ. ಮಕ್ಕಳು ಆಲಿಸುವಿಕೆ, ಮತ್ತು ಮಾತನಾಡುವಿಕೆಯನ್ನು ಅನೌಪಚಾರಿಕವಾಗಿ ಕಲಿತರೆ, ಓದು ಮತ್ತು ಬರಹಗಳನ್ನು ಔಪಚಾರಿಕವಾಗಿ ಕಲಿಯುತ್ತಾರೆ. ಈ ನಾಲ್ಕೂ ಕೌಶಲಗಳನ್ನು ಗಂಭೀರವಾಗಿ, ಪ್ರಜ್ಞಾ ಪೂರ್ವಕವಾಗಿ ಕಲಿತರೆ ಮಾತ್ರ ಭಾಷಾ ಕೌಶಲಗಳು ಪ್ರಬುದ್ಧ ಮಟ್ಟದಲ್ಲಿ ಸಿದ್ಧಿಸುತ್ತವೆ.

ಒಂದು ಮಗು ಮಾತನಾಡುವ ಮೂಲಭಾಷೆ ಅಥವಾ ಮನೆಯ ಭಾಷೆಯನ್ನು ಮಾತೃಭಾಷೆ ಎಂದು ಕರೆಯಲಾಗುತ್ತದೆ. ಸಹಜ ಪರಿಸರದಲ್ಲಿ, ಸಹಜ ಭಾವಾಭಿವ್ಯಕ್ತಿಯಲ್ಲಿ ಮಗುವು ಕಲಿಯುವ ಮೊದಲ ನುಡಿ ತಾಯ್ನುಡಿ. ಯಾವುದೇ ವಿಷಯಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಮತ್ತು ಮನಸ್ಸಿನಲ್ಲಿರುವುದನ್ನು ಅಭಿವ್ಯಕ್ತಿಗೊಳಿಸಲು

ಮಾತೃಭಾಷೆಯೇ ಪ್ರಧಾನ ಮಾಧ್ಯಮ. ಮಾತೃಭಾಷೆಯಲ್ಲಿ ಮಗುವು ಗಳಿಸುವ ಸಾಮರ್ಥ್ಯವು ಆ ಮಗುವಿನ ಶೈಕ್ಷಣಿಕ ಬದುಕಿಗೆ ಮಾತ್ರವಲ್ಲದೆ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೂ ಕಾರಣವಾಗುತ್ತದೆ. ಗ್ರಹಿಕೆ ಮತ್ತು ಅಭಿವ್ಯಕ್ತಿಗೆ ಮಾತೃಭಾಷೆ ಅತ್ಯುತ್ತಮ ಮಾಧ್ಯಮವೆಂಬುದು ಶಿಕ್ಷಣತಜ್ಞರ ಒಕ್ಕೊರಲ ಅಭಿಪ್ರಾಯ. ಶಿಕ್ಷಣ ಸುಧಾರಣೆಗಾಗಿ ರಚಿತಗೊಂಡಿರುವ ಆಯೋಗಗಳೆಲ್ಲವೂ ಈ ಮಾತನ್ನು ಒತ್ತಿಹೇಳಿವೆ. ಈ ನಿಟ್ಟಿನಲ್ಲಿ ಮಾತೃಭಾಷೆಯ ಕಲಿಕೆ, ಮಾತೃಭಾಷೆಯ ಕುರಿತ ಕಲಿಕೆ ಹಾಗೂ ಮಾತೃಭಾಷೆಯ ಮೂಲಕ ಕಲಿಕೆ ಎಂಬ ವಿಚಾರಗಳು ಬಹಳ ಮುಖ್ಯವಾಗುತ್ತವೆ.

ಶೈಕ್ಷಣಿಕವಾಗಿ ಹಾಗೂ ಆಡಳಿತಾತ್ಮಕವಾಗಿ ಕರ್ನಾಟಕದ ಜನರು ಕನ್ನಡವನ್ನು ಒಪ್ಪಿಕೊಂಡಿರುವುದರಿಂದ ಕನ್ನಡವನ್ನು ಕರ್ನಾಟಕದ ಜನರ ಮಾತೃಭಾಷೆಯೆಂದು ಪರಿಗಣಿಸಬಹುದು. ೧೫೦೦ವರ್ಷಗಳ ಸ್ಪಷ್ಟ ಮತ್ತು ವೈವಿಧ್ಯಮಯ ಇತಿಹಾಸ ಹೊಂದಿರುವ, ತನ್ನದೇ ಆದ ಶಾಸ್ತ್ರಬದ್ಧ ಹಾಗೂ ವೈಜ್ಞಾನಿಕ ರೂಪಿತ ಲಿಪಿಯನ್ನು ಹೊಂದಿರುವ, ಶಾಸ್ತ್ರೀಯ ಸ್ಥಾನಮಾನದ ಗೌರವವನ್ನು ಪಡೆದು, ಗುರುತಿಸಲ್ಪಟ್ಟ ಭಾಷೆಯಾಗಿರುವ ರಾಜ್ಯಭಾಷೆ ಕನ್ನಡವು ಕರ್ನಾಟಕದ ಶಿಕ್ಷಣ ಮಾಧ್ಯಮವಾಗಿ ಪ್ರಚಲಿತದಲ್ಲಿದೆ. ಪ್ರಾಥಮಿಕ ಶಿಕ್ಷಣದಲ್ಲಿ ನಾಲ್ಕನೆಯ ತರಗತಿಯವರೆಗೆ ಕನ್ನಡ ಮಾಧ್ಯಮದ ಭಾಷೆಯಾಗಿ, ಐದನೆಯ ತರಗತಿಯಿಂದ ಪ್ರಥಮ, ದ್ವಿತೀಯ, ತೃತೀಯ ಭಾಷೆಯಾಗಿ ಕಲಿಯುವ ಅವಕಾಶವಿದೆ. ಪ್ರೌಢಶಿಕ್ಷಣದಲ್ಲಿ ವಿದ್ಯಾರ್ಥಿಗಳು ೧೨೫ ಅಂಕಗಳಿಗೆ ಪ್ರಥಮ ಭಾಷೆಯಾಗಿಯೂ, ತಲಾ ೧೦೦ ಅಂಕಗಳಿಗೆ ದ್ವಿತೀಯ ಹಾಗೂ ತೃತೀಯ ಭಾಷೆಯಾಗಿಯೂ ಕನ್ನಡವನ್ನು ಅಧ್ಯಯನ ಮಾಡುತ್ತಾರೆ.

ರಾಷ್ಟ್ರೀಯ ಶಿಕ್ಷಣ ನೀತಿಯು ಭಾಷಾ ಬೋಧನೆಯ ಧ್ಯೇಯಗಳನ್ನು ವಿವರಿಸಿದೆ. ಅದರ ನಿರ್ದೇಶನ ಹಾಗೂ ಗುರಿಗಳನ್ನು ಆಧರಿಸಿ ಕರ್ನಾಟಕದ ಶಿಕ್ಷಣ ಇಲಾಖೆಯು ವಿದ್ಯಾರ್ಥಿಗಳಿಗೆ ನಿರ್ದಿಷ್ಟ ಪಠ್ಯವನ್ನು ರೂಪಿಸಿದೆ. ಭಾಷಾ ಕಲಿಕೆಯನ್ನು ವ್ಯವಸ್ಥಿತವಾಗಿ ರೂಪಿಸುವ ಹಿನ್ನೆಲೆಯಲ್ಲಿ ರಾಜ್ಯವ್ಯಾಪ್ತಿಯಲ್ಲಿ ಪ್ರೌಢಶಾಲಾ ಕನ್ನಡ ಪಠ್ಯಗಳು ಏಕರೂಪಿಯಾಗಿವೆ. "ಪುಸ್ತಕಗಳಲ್ಲಿರುವ ವಿಚಾರಗಳನ್ನು ಓದಿ ಅರ್ಥ ಮಾಡಿಕೊಳ್ಳುವುದಕ್ಕೆ ಪಠ್ಯಪುಸ್ತಕ ವಿಧಾನ (Text Book Method) ಎನ್ನುವರು. ಪಠ್ಯಪುಸ್ತಕಗಳಲ್ಲಿರುವ ವಿಚಾರಗಳನ್ನು ತಿಳಿಯುವುದು ಪಠ್ಯಪುಸ್ತಕಗಳ ವಿಧಾನದ ಮುಖ್ಯ ಉದ್ದೇಶ. ಈ ವಿಧಾನದಲ್ಲಿ ಬೋಧನಾಕ್ರಮ ಪೂರ್ಣವಾಗಿ ಪಠ್ಯ ಪುಸ್ತಕಗಳನ್ನೇ ಅವಲಂಬಿಸಿರುತ್ತದೆ. ಪಠ್ಯಪುಸ್ತಕಗಳು ಬೋಧಕ ಮತ್ತು ವಿದ್ಯಾರ್ಥಿಗಳಿಗೆ ಬೋಧನೆ ಹಾಗೂ ಕಲಿಕೆಯ ಸಾಧನಗಳಾಗಿವೆ. ಪಠ್ಯಪುಸ್ತಕಗಳು ಶೈಕ್ಷಣಿಕ ಚಟುವಟಿಕೆಗಳನ್ನು ನಿಯೋಜಿಸುತ್ತವೆ. ಅಧ್ಯಾಪಕ ಯಾವ ತರಗತಿಗೆ ಯಾವ ವಿಚಾರವನ್ನು ಕಲಿಸಬೇಕು? ಹೇಗೆ ಕಲಿಸಬೇಕು? ಎಷ್ಟು ಕಲಿಸಬೇಕು? ಎಂಬುದನ್ನು ಪಠ್ಯಪುಸ್ತಕಗಳು ನಿರ್ದೇಶಿಸುತ್ತವೆ. ಪಠ್ಯಪುಸ್ತಕಗಳಿಲ್ಲದೆ ಬೋಧನಾ ಕಾರ್ಯ ಒಂದು

ಕ್ರಮದಲ್ಲಿ ಸಾಗಲಾರದು. ಮಕ್ಕಳು ಕಲಿಯಬೇಕಾಗಿರುವ ವಿಚಾರಗಳನ್ನು ಯಾವ ಪ್ರಮಾಣದಲ್ಲಿ ಬೋಧಿಸಬೇಕು ಎಂಬುದನ್ನು ಪಠ್ಯಪುಸ್ತಕಗಳು ತಿಳಿಸುತ್ತವೆ. ಪಠ್ಯಪುಸ್ತಕದಲ್ಲಿ ಭಾಷಿಕ ವಿಚಾರಗಳು, ಭಾಷಾ ಸಾಮರ್ಥ್ಯಗಳನ್ನು ವೃದ್ಧಿಪಡಿಸುವ ಉದ್ದೇಶದಿಂದ ಕ್ರಮಬದ್ಧವಾಗಿ ಅಳವಡಿಸಿಕೊಳ್ಳಬೇಕಾಗುತ್ತದೆ. ಇದರಿಂದ ವಿಷಯ ಜ್ಞಾನ ಮತ್ತು ಭಾಷಾ ಸಾಮರ್ಥ್ಯ ಎರಡೂ ಬೆಳೆಯುತ್ತದೆ. ಹಾಗೂ ಮಕ್ಕಳ ಮಾತುಗಾರಿಕೆ ಮತ್ತು ಓದುಗಾರಿಕೆ ಬೆಳೆಯುತ್ತದೆ”[೧]. ಪಠ್ಯಪುಸ್ತಕಗಳ ಸಹಾಯವಿಲ್ಲದೆ ಮಕ್ಕಳಿಗೆ ಭಾಷಿಕ ವಿಚಾರಗಳ ಸೂಕ್ಷ್ಮಗಳನ್ನೆಲ್ಲ ಬಾಯಿ ಮಾತಿನಲ್ಲಿಯೇ ಕಲಿಸಲು ಸಾಧ್ಯವಿಲ್ಲ. ಈ ದೃಷ್ಟಿಯಿಂದ ಪಠ್ಯಪುಸ್ತಕಗಳನ್ನು ತುಂಬಾ ಎಚ್ಚರಿಕೆಯಿಂದ ನಿರ್ದಿಷ್ಟ ವಿಚಾರಗಳನ್ನು ನಿರ್ದಿಷ್ಟ ತರಗತಿಗೆ ಅನುಗುಣವಾಗಿ ಸುವ್ಯವಸ್ಥಿತವಾಗಿ ತಯಾರಿಸಿಕೊಳ್ಳಬೇಕಾಗುತ್ತದೆ. ವಿದ್ಯಾರ್ಥಿಗಳ ಮಟ್ಟ, ಆಸಕ್ತಿ, ಮನೋಭಾವ, ಗ್ರಹಿಕೆ, ಅಭಿರುಚಿಗಳನ್ನು ಗಮನದಲ್ಲಿಟ್ಟುಕೊಂಡು ಪಠ್ಯಗಳನ್ನು ರೂಪಿಸಬೇಕಾಗುತ್ತದೆ.

ಶಿಕ್ಷಣ ಇಲಾಖೆಯು ಕನ್ನಡ ಭಾಷಾ ಕಲಿಕೆಗಾಗಿ ಪಠ್ಯಪುಸ್ತಕ ರಚನಾ ಸಮಿತಿಯ ನೆರವಿನಿಂದ ಪಠ್ಯಪುಸ್ತಕಗಳನ್ನು ಒದಗಿಸುತ್ತದೆ. ಇಲಾಖೆ ನಿರ್ದೇಶಿಸಿರುವ ಬೋಧನಾ ಕಲಿಕಾ ಪ್ರಕ್ರಿಯೆಗಳ ಉದ್ದೇಶಗಳು ಪಠ್ಯಗಳಲ್ಲಿರುತ್ತವೆ. ಶಿಕ್ಷಕರು ಅದನ್ನು ವಿದ್ಯಾರ್ಥಿಗಳಿಗೆ ಲಭಿಸುವಂತೆ ಮಾಡುವ ಪ್ರೇರಕರಾಗಬೇಕೆಂಬುದು ಮುಖ್ಯ ಉದ್ದೇಶ. ಹೀಗೆ ಶಿಕ್ಷಣ ಇಲಾಖೆಯ ಗುರಿಗಳು ಕನ್ನಡ ಪಠ್ಯಪುಸ್ತಕದೊಳಗೆ ಸೇರಿ, ಶಿಕ್ಷಕರ ಮೂಲಕವಾಗಿ ಕಟ್ಟಕಡೆಗೆ ವಿದ್ಯಾರ್ಥಿಗಳು ಫಲಾನುಭವಿಗಳಾಗಬೇಕು, ತನ್ಮೂಲಕ ಸುಶಿಕ್ಷಿತ ಸಮಾಜ ನಿರ್ಮಾಣವಾಗಬೇಕು ಎಂಬುದು ಶಿಕ್ಷಣ ಇಲಾಖೆಯ ಆಶಯವಾಗಿದೆ.



ಇಲ್ಲಿ ಶಿಕ್ಷಣ ಇಲಾಖೆಯು ನಿರೂಪಿಸುವ ಕನ್ನಡ ಭಾಷಾ ಬೋಧನೆಯ ಗುರಿಗಳಿಗೂ ಹಾಗೂ ಕನ್ನಡ ಭಾಷಾ ಪಠ್ಯಪುಸ್ತಕಗಳಿಗೂ ನೇರಸಂಬಂಧವಿದೆ. ಪಠ್ಯಪುಸ್ತಕಗಳನ್ನು ಅಧ್ಯಾಪಕರು ಯಥಾವತ್ತಾಗಿ ಪಾಲಿಸುತ್ತಾರೆ. ಅಧ್ಯಾಪಕರನ್ನು ವಿದ್ಯಾರ್ಥಿಗಳು ಅವಲಂಬಿಸಿರುತ್ತಾರೆ. ವಿದ್ಯಾರ್ಥಿಗಳೇ ಮುಂದೆ ಸಮಾಜ ನಿರ್ಮಾಣ ಮಾಡುತ್ತಾರೆ. ಹೀಗೆ ಶಿಕ್ಷಣ ಇಲಾಖೆಯು ಸಮಾಜ ನಿರ್ಮಾಣದ ಕಾರ್ಯದಲ್ಲಿ ಹಾಗೂ ಕನ್ನಡ ಭಾಷೆಯನ್ನು ಕಲಿಸುವ, ಉಳಿಸುವ ಹಾಗೂ ಬೆಳೆಸುವ ಕಾರ್ಯದಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸುತ್ತದೆ.

**೨.೧. ಸ್ವಾತಂತ್ರ್ಯಪೂರ್ವ.**

ಭಾರತೀಯ ಹಿನ್ನೆಲೆಯ ಶಿಕ್ಷಣ ಪದ್ಧತಿಯಲ್ಲಿ ಭಾಷಾಕಲಿಕೆ ಎಂಬ ಪ್ರತ್ಯೇಕ ವಿಭಾಗ ಇರಲಿಲ್ಲವೆಂದೇ ಹೇಳಬಹುದು. ಗುರುಕುಲ ಪದ್ಧತಿಯ ಶಿಕ್ಷಣದಲ್ಲಿ ಶ್ರವಣ, ಧ್ಯಾನ, ಧಾರಣ, ಮನನ ಎಂಬಿತ್ಯಾದಿ ಹಂತಗಳಲ್ಲಿ ವಿದ್ಯೆ ಸ್ಥಿರೀಕರಣಗೊಳ್ಳುತ್ತಿತ್ತು. ಅರವತ್ತನಾಲ್ಕು ವಿದ್ಯೆಗಳಲ್ಲಿ ವ್ಯಾಕರಣ, ಛಂದಸ್ಸು, ಅಲಂಕಾರ, ನಿಘಂಟು, ಗ್ರಂಥ ರಚನೆಯೇ ಮೊದಲಾದ ಭಾಷಾ ವಿಚಾರಗಳು ಶ್ರುತಿ-ಸ್ಮೃತಿಯ ಮೂಲಕ ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆಯಾಗುತ್ತಿತ್ತು. ತನ್ಮೂಲಕ ಭಾಷೆಯು ಶ್ರೀಮಂತಗೊಂಡು, ಭಾಷಾ ಸಂಪನ್ನತೆ ರಕ್ತಗತವಾಗುತ್ತಿತ್ತು. ವಿದ್ಯಾರ್ಥಿಗಳಿಗೆ ಅವರವರ ಅಭಿರುಚಿಗೆ ತಕ್ಕಂತೆ ಆಯ್ಕೆಯ ಸ್ವಾತಂತ್ರ್ಯವಿದ್ದುದರಿಂದ ಆಸಕ್ತರು ಅವರವರ ವಿಷಯಗಳಲ್ಲಿ ಪಾಂಡಿತ್ಯವನ್ನು ಪಡೆದುಕೊಳ್ಳುತ್ತಿದ್ದರು. ಗುರುಕುಲ ಶಿಕ್ಷಣ ಪದ್ಧತಿಯಲ್ಲಿ ಸಂಸ್ಕೃತ ಪ್ರಭಾವೀ ಭಾಷೆಯಾಗಿತ್ತು. ಇದು ಕನ್ನಡಕ್ಕೆ ಬಹಳ ಪ್ರಾಚೀನ ಕಾಲದಿಂದಲೂ ಸಂಸ್ಕೃತದ ಪೋಷಣೆ ದೊರೆಯುವುದಕ್ಕೆ ಮಹಾನ್ ಕಾರಣವಾಯಿತು. ಆದಿಕವಿ ಪಂಪನಿಂದ ಮೊದಲ್ಗೊಂಡು ಕನ್ನಡದ ಕವಿಗಳೆಲ್ಲರೂ ಸಂಸ್ಕೃತದ ಪೋಷಣೆಯಲ್ಲಿ ಬೆಳೆದವರಾದ್ದರಿಂದ ಗ್ರಂಥಸ್ಥ ಕನ್ನಡವು ಸಂಸ್ಕೃತಮಯವಾಗಿ ಬೆಳೆದುಹೋಗಿತ್ತು.

ಭಾರತದಲ್ಲಿ ನೂತನ ಶಿಕ್ಷಣ ಪದ್ಧತಿಯ ಸ್ವರೂಪ ಬಂದುದು ಆಂಗ್ಲೇಯರಿಂದ. ಶಾಲೆಯ ಪರಿಕಲ್ಪನೆಯೇ ಪಾಶ್ಚಾತ್ಯ ಪ್ರಭಾವದ್ದು. ಸರ್ಕಾರದ ನಿರ್ವಹಣೆ ಮತ್ತು ನಿರ್ದೇಶನದ ಮೇರೆಗೆ ಶಾಲೆಯೆಂಬ ಸಂಸ್ಥೆ, ಅದಕ್ಕೆ ನಿರ್ದಿಷ್ಟವಾದ ಪಠ್ಯಕ್ರಮ, ನಿರ್ದಿಷ್ಟವಾದ ಕಟ್ಟಡ, ಕೊಠಡಿ, ನಿಗದಿತ ಪಠ್ಯಪುಸ್ತಕ, ನಿಗದಿತ ಅವಧಿಗಳ ಪರಿಮಿತಿ, ತರಬೇತಿ ಪಡೆದ ಅಧ್ಯಾಪಕರು, ನಿಗದಿತ ವಿಧಾನದ ಮೌಲ್ಯಮಾಪನ ಈ ಮೊದಲಾದ ಕಲ್ಪನೆಗಳು, ವಿಚಾರಧಾರೆಗಳು ಭಾರತೀಯ ಶಿಕ್ಷಣ ಕ್ಷೇತ್ರದೊಳಗೆ ಸೇರಿದ್ದು ಬ್ರಿಟಿಷರ ಶಿಕ್ಷಣ ಪದ್ಧತಿಯಿಂದ. ಕ್ರೈಸ್ತ ಧರ್ಮ ಪ್ರಚಾರದ ಉದ್ದೇಶದಿಂದ ಬ್ರಿಟಿಷರು ಶಾಲೆಗಳನ್ನು ಪ್ರಾರಂಭಿಸಿದರೂ ಭಾರತೀಯರಿಗೆ ಇದರಿಂದ ನೂತನ ಶಿಕ್ಷಣ ಪದ್ಧತಿಯ ಅರಿವುಂಟಾಯಿತು. ಭಾರತೀಯ ಭಾಷೆಗಳು ಶಿಕ್ಷಣದ ಮಾಧ್ಯಮವಾಗಬೇಕೆಂಬ ಚಿಂತನೆ ಹತ್ತೊಂಭತ್ತನೆಯ ಶತಮಾನದಲ್ಲಾಗಲೇ ಹುಟ್ಟಿಕೊಂಡಿತ್ತು. ಕ್ರೈಸ್ತ ಮತ ಪ್ರಚಾರ ಸುಲಭವಾಗಬೇಕಾದರೆ ಸ್ಥಳೀಯ

ಭಾಷೆ ಸುಲಭಮಾರ್ಗ ಎಂಬುದನ್ನು ಮಿಷನರಿಗಳೂ ಕೂಡ ಕಂಡುಕೊಂಡಿದ್ದವು. ಮಾತೃಭಾಷೆಯಲ್ಲಿ ಶಿಕ್ಷಣ ನೀಡಿದಾಗ ಮಾತ್ರ ಶಿಕ್ಷಣದ ಮೂಲ ಉದ್ದೇಶ ಈಡೇರುತ್ತದೆ ಎಂಬುದನ್ನು ವಿದ್ವಾಂಸರು ಕಂಡುಕೊಂಡಿದ್ದರು. ೧೮೧೩ ರಲ್ಲಿ ಬಂದ ಮೆಕಾಲೆಯ ವರದಿಗಿಂತ ಮೊದಲೇ ಬಾಂಬೆ ಎಜುಕೇಷನ್ ಸೊಸೈಟಿಯು ಭಾರತೀಯ ಭಾಷೆಗಳೇ ಶಿಕ್ಷಣ ಮಾಧ್ಯಮವಾಗಬೇಕೆಂಬುದನ್ನು ಪ್ರಕಟಿಸಿತು. ಸಾರ್ವತ್ರಿಕ ಶಿಕ್ಷಣದ ಪರಿಕಲ್ಪನೆ ಬೆಳೆಯುತ್ತಿದ್ದ ಕಾಲಘಟ್ಟದಲ್ಲಿಯೇ ಶಿಕ್ಷಣವು ಮಾತೃಭಾಷೆಯಲ್ಲಿಯೇ ಇದ್ದಾಗ ಅತ್ಯಂತ ಪರಿಣಾಮಕಾರಿ ಎಂಬ ಚಿಂತನೆಯೂ ಹುಟ್ಟಿಕೊಂಡಿರುವುದು ಬಹಳ ಗಮನಾರ್ಹ ಅಂಶ. ದೇಶ ಭಾಷಾ ಮಾಧ್ಯಮದ ಮೂಲಕ ಶಿಕ್ಷಣ ಎಂಬ ಚಿಂತನೆ ವ್ಯಾಪಕವಾಗಿ, ಭಾಷಾ ಶಿಕ್ಷಣವು ನಿಗದಿತ ಪಠ್ಯದೊಂದಿಗೆ ಆರಂಭಗೊಂಡದ್ದು ಇದೇ ಕಾಲಘಟ್ಟದಲ್ಲಿ. ೧೮೩೧ ರಲ್ಲಿ ಸರ್ ವಾಲ್ಟರ್ ಧಾರವಾಡದಲ್ಲಿ ಕನ್ನಡ ಶಾಲೆಯೊಂದನ್ನು ಪ್ರಾರಂಭಿಸಿದ. ಇದು ಕನ್ನಡ ಮಾಧ್ಯಮದ ಕಲಿಕೆ ಹಾಗೂ ಕನ್ನಡ ಭಾಷಾ ಕಲಿಕೆಯ ಆಧುನಿಕ ಇತಿಹಾಸದಲ್ಲಿ ಮಹತ್ವದ ಮೈಲಿಗಲ್ಲು. ೧೮೪೧ ರಲ್ಲಿ ಬಾಸೆಲ್ ಮಿಷನರಿಯು ಕನ್ನಡ ಪಠ್ಯ ಪುಸ್ತಕಗಳನ್ನು ರಚಿಸುವ ಕಾರ್ಯದಲ್ಲಿ ತೊಡಗಿಕೊಂಡದ್ದು ಮತ್ತೊಂದು ಮೈಲಿಗಲ್ಲು. ಡೆಪ್ಯುಟಿ ಚೆನ್ನಬಸಪ್ಪ, ಉತ್ತಂಗಿ ಚೆನ್ನಪ್ಪ, ರೊದ್ದ ಶ್ರೀನಿವಾಸರಾಯರು, ಮೈಸೂರು ತಾತಯ್ಯ ಎಂದೇ ಖ್ಯಾತರಾದ ಎಂ.ವೆಂಕಟಕೃಷ್ಣಯ್ಯ ಮೊದಲಾದವರ ಕೊಡುಗೆಗಳು ಈ ನಿಟ್ಟಿನಲ್ಲಿ ಅತ್ಯಂತ ಮಹತ್ವದ್ದಾಗಿದೆ.

## ೨.೨ ಸ್ವಾತಂತ್ರ್ಯೋತ್ತರದ ದಶಕಗಳು.

೧೯೫೬ರ ವರೆಗಿನ ಕನ್ನಡ ಭಾಷಾ ಪಠ್ಯಪುಸ್ತಕದ ಇತಿಹಾಸವನ್ನು ಗಮನಿಸಿದರೆ, ವಿವಿಧ ವಿದ್ವಾಂಸರು ಕಲೆತು ಹಲವು ಪಠ್ಯ ಪುಸ್ತಕಗಳನ್ನು ರಚಿಸುತ್ತಿದ್ದರು. ತಮಗೆ ಬೇಕಾದ ಪಠ್ಯ ಪುಸ್ತಕವನ್ನು ಆಯ್ಕೆಮಾಡಿಕೊಳ್ಳುವ ಸ್ವಾತಂತ್ರ್ಯ ಆಯಾ ಶಿಕ್ಷಣ ಸಂಸ್ಥೆಗಳಿಗೆ ಇರುತ್ತಿತ್ತು. ಹಲವು ವಿದ್ವಾಂಸರ ಪರಿಶ್ರಮದಿಂದ ಕ್ರಮಿಕ ಕನ್ನಡ ಪಠ್ಯ ಪುಸ್ತಕಗಳು ಮುದ್ರಣಗೊಳ್ಳುತ್ತಿದ್ದವು.

"೧೯೫೬ ರಲ್ಲಿ ಪಠ್ಯ ಪುಸ್ತಕಗಳ ರಾಷ್ಟ್ರೀಕರಣವಾಯಿತು. ಇದು ಭಾಷಾ ಶಿಕ್ಷಣ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆಗೆ ಕಾರಣವಾಯಿತು. ಪಠ್ಯ ಪುಸ್ತಕಗಳ ರಾಷ್ಟ್ರೀಕರಣದ ಪ್ರಭಾವದಿಂದ ಆಯಾ ರಾಜ್ಯಕ್ಕೆ ಅನುಗುಣವಾಗಿ ರಾಜ್ಯ ಭಾಷೆಯಲ್ಲಿ ಪಠ್ಯ ಪುಸ್ತಕಗಳು ರಚನೆಗೊಂಡವು. ಆಯಾ ರಾಜ್ಯಗಳ ಶಿಕ್ಷಣ ಇಲಾಖೆಗಳು ನಿಯಮಗಳನ್ನು ರೂಪಿಸಿಕೊಂಡು ಪಠ್ಯ ಪುಸ್ತಕಗಳನ್ನು ರಚನೆ ಮಾಡಿಕೊಂಡವು. ಇದೇ ಸಂದರ್ಭದಲ್ಲಿ ಸಮಗ್ರ ಕರ್ನಾಟಕ ರಾಜ್ಯಕ್ಕೆ ಏಕರೂಪೀ ಪಠ್ಯ ಸಿದ್ಧಗೊಂಡಿತು. ಭಾಷಾನೀತಿಗಳ ಆದೇಶದ ಪ್ರಕಾರ ಕನ್ನಡದ ಕಲಿಕೆ ಯಾವ ಹಂತದಲ್ಲೂ ಕಡ್ಡಾಯವಾಗಿರಲಿಲ್ಲ. ೧೯೮೨ ರ ಭಾಷಾನೀತಿಯು 'ಕನ್ನಡ ಭಾಷೆ ಶಿಕ್ಷಣದಲ್ಲಿ ಕಡ್ಡಾಯ' ಎಂಬ ನಿಯಮವನ್ನು ಜಾರಿಗೆ ತಂದಿತು"[೨]. ಹೀಗೆ ಸ್ವಾತಂತ್ರ್ಯೋತ್ತರದ ದಶಕಗಳಲ್ಲಿ ಕನ್ನಡ ಭಾಷಾ ಕಲಿಕೆಯು ಅನೇಕ ಸ್ಥಿತ್ಯಂತರಗಳನ್ನು ಕಂಡಿದೆ.

## ೨.೩ ಕನ್ನಡ ಭಾಷಾ ಬೋಧನೆ: ಆಧುನಿಕ ಸಂದರ್ಭ.

ಭಾಷಾ ಬೋಧನೆಯ ಸನ್ನಿವೇಶದಲ್ಲಿ ವಿದ್ಯಾರ್ಥಿಗಳಿಗೆ ಏನನ್ನು ಕಲಿಸಬೇಕು? ಎಷ್ಟನ್ನು ಕಲಿಸಬೇಕು? ಯಾವಾಗ ಕಲಿಸಬೇಕು? ಹೇಗೆ ಕಲಿಸಬೇಕು? ಎಂಬಿತ್ಯಾದಿ ಪ್ರಶ್ನೆಗಳಿಗೆ ನಿಖರವಾದ ಚೌಕಟ್ಟಿನ ಸಿದ್ಧ ಉತ್ತರವನ್ನು ನೀಡುವುದು ಕಷ್ಟಸಾಧ್ಯ. ಭಾಷಾವಿದ್ವಾಂಸರಲ್ಲಿ ಈ ಕುರಿತು ಭಿನ್ನಾಭಿಪ್ರಾಯಗಳಿವೆ. ಭಾಷಾ ತಜ್ಞರ ಸಿದ್ಧಾಂತಗಳು, ಶಿಕ್ಷಣ ಆಯೋಗಗಳ ವರದಿಗಳು, ಕಲಿಕಾ ಸಿದ್ಧಾಂತಗಳು, ಪ್ರಸ್ತುತ ಕಲಿಕಾ ಸನ್ನಿವೇಶ, ಸಮಾಜದ ನಿರೀಕ್ಷೆ, ಭಾಷೆಯ ಸ್ಥಿತ್ಯಂತರಗಳು, ವಿದ್ಯಾರ್ಥಿಗಳ ವಯಸ್ಸು, ಕಲಿಕಾಮಟ್ಟ, ಅರ್ಥಗ್ರಹಣ, ಚಿಂತನಾ ಸಾಮರ್ಥ್ಯ, ಅಭಿವ್ಯಕ್ತಿ ಸಾಮರ್ಥ್ಯ, ಲಭ್ಯವಿರುವ ಸಂಪನ್ಮೂಲಗಳು, ವಿದ್ಯಾರ್ಥಿಗಳಿಗಿರುವ ಸಾಹಿತ್ಯಕ-ಸಾಂಸ್ಕೃತಿಕ ಹಿನ್ನೆಲೆ ಈ ಮೊದಲಾದ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ಕಲಿಕೆ ಹಾಗೂ ಬೋಧನೆಯ ಸನ್ನಿವೇಶಗಳನ್ನು ಸೃಷ್ಟಿಸಿಕೊಳ್ಳಬೇಕಾಗುತ್ತದೆ.

ಕರ್ನಾಟಕದಲ್ಲಿ ಪ್ರಸ್ತುತ ೧೪೮೯೪ ಪ್ರೌಢಶಾಲೆಗಳಲ್ಲಿ ವಿದ್ಯಾರ್ಥಿಗಳು ಕನ್ನಡ ಕಲಿಕೆಯಲ್ಲಿ ತೊಡಗಿಕೊಂಡಿದ್ದು ಇದರಲ್ಲಿ ೮೨೪೦ ಪ್ರೌಢಶಾಲೆಗಳಲ್ಲಿನ ವಿದ್ಯಾರ್ಥಿಗಳು ಗ್ರಾಮೀಣ ಭಾಗದವರಾಗಿದ್ದಾರೆ. ಉಳಿದ ೫೯೫೪ ಪ್ರೌಢಶಾಲೆಗಳಲ್ಲಿ ವ್ಯಾಸಂಗ ಮಾಡುವವರು ನಗರ ಭಾಗದವರಾಗಿರುತ್ತಾರೆ[೩].

"ಶಿಕ್ಷಣ ಕ್ರಮದಲ್ಲಿ ರೂಪುಗೊಂಡಿರುವ ಪ್ರಥಮ, ದ್ವಿತೀಯ ಮತ್ತು ತೃತೀಯ ಎಂಬ ಸ್ಥಾನ ನಿರ್ದೇಶನ ಪಡೆದ ಭಾಷೆಗಳ ನಡುವೆ ಏನೆಲ್ಲಾ ತಾಕಲಾಟಗಳಿವೆ ಎಂಬುದನ್ನು ಗಮನಿಸಬೇಕಾದ ಆವಶ್ಯಕತೆಯಿದೆ. ಈ ಮೂರು ಭಾಷೆಗಳು ಶಾಲೆಗಳಲ್ಲಿ ಪಡೆಯುವ ಬೋಧನಾ ಅವಧಿಯಲ್ಲಿ ವ್ಯತ್ಯಾಸಗಳಿವೆಯೇ ಹೊರತು ಅವುಗಳ ನಡುವೆ ಗುಣಾತ್ಮಕವಾದ ವ್ಯತ್ಯಾಸಗಳನ್ನೇನೂ ರಾಜ್ಯ ಸರಕಾರದ ಭಾಷಾ ನೀತಿ ಸೂಚಿಸುತ್ತಿಲ್ಲ. ಎಲ್ಲವನ್ನೂ ಸಮಾನ ಎಂದೇ ಪರಿಗಣಿಸಲಾಗುತ್ತಿದೆ"[೪]. ಪ್ರಸ್ತುತ ಪ್ರೌಢಶಾಲಾ ಹಂತದಲ್ಲಿ ಕನ್ನಡ ಭಾಷೆಗೆ ಮೂರು ಸ್ಥಾನನಿರ್ದೇಶನಗಳನ್ನು ಮಾಡಿ ವಿದ್ಯಾರ್ಥಿಗಳಿಗೆ ಆಯ್ಕೆಯನ್ನು ಕೊಡಲಾಗಿದೆ. ಪ್ರಥಮ ಭಾಷೆಯಾಗಿ, ದ್ವಿತೀಯ ಭಾಷೆಯಾಗಿ ಹಾಗೂ ತೃತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವ ಅವಕಾಶ ವಿದ್ಯಾರ್ಥಿಗಳಿಗಿದೆ. ಪ್ರಥಮ ಭಾಷೆಗೆ ಪ್ರತ್ಯೇಕ ಪಠ್ಯವಿದೆ. ಆದರೆ ದ್ವಿತೀಯ ಭಾಷೆ ಹಾಗೂ ತೃತೀಯ ಭಾಷೆಗಳಿಗೆ ಒಂದೇ ಪಠ್ಯವಿದೆ.

ಪ್ರಸ್ತುತ ಪ್ರೌಢಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ತ್ರಿಭಾಷಾ ಸೂತ್ರದಡಿ ಕೆಲವು ಆಯ್ಕೆಗಳಿವೆ. ೧೨೫ ಅಂಕಗಳಿಗೆ ಪ್ರಥಮ ಭಾಷೆಯಾಗಿ ಕನ್ನಡ, ಸಂಸ್ಕೃತ, ಇಂಗ್ಲಿಷ್, ಹಿಂದಿ, ತಮಿಳು, ತೆಲುಗು, ಮರಾಠಿ ಹಾಗೂ ಉರ್ದು ಭಾಷೆಗಳಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳಬಹುದು. ಪ್ರಥಮ ಭಾಷೆಯಾಗಿ ಆಯ್ಕೆ ಮಾಡಿಕೊಂಡ ಭಾಷೆಯನ್ನು ಬಿಟ್ಟು ತಲಾ ೧೦೦ ಅಂಕಗಳಿಗೆ ಎರಡು ಭಾಷೆಗಳನ್ನು ಆಯ್ಕೆ ಮಾಡಿಕೊಳ್ಳಬಹುದು. ತ್ರಿಭಾಷೆಗಳಲ್ಲಿ ಯಾವುದಾರೂ ಒಂದು ಕನ್ನಡವಾಗಿರಬೇಕು ಎಂಬ ನಿಯಮವಿದೆ. ಒಟ್ಟಿನಲ್ಲಿ ಪ್ರೌಢಶಾಲಾ ಹಂತದಲ್ಲಿ ಕನ್ನಡ ಭಾಷಾ

ಕಲಿಕೆ ಕಡ್ಡಾಯವಾಗಿದೆ. ಪ್ರಥಮ ಭಾಷೆ ಕನ್ನಡಕ್ಕೆ ವಾರದಲ್ಲಿ ಆರು ಅವಧಿಗಳಂತೆ ಸುಮಾರು ೧೮೦ ಅವಧಿಗಳ ಬೋಧನೆಗೆ ಅವಕಾಶವಿರಬೇಕೆಂದು ಪಠ್ಯಪುಸ್ತಕ ನಿರ್ದೇಶನಾಲಯ ತಿಳಿಸಿದೆ. ಪ್ರತೀ ತರಗತಿಯ ಪಠ್ಯದಲ್ಲಿ ಆಯಾಯ ತಿಂಗಳಲ್ಲಿ ಮುಗಿಸಬೇಕಾದ ಪಾಠ-ಪದ್ಯಗಳ ಪಟ್ಟಿಯನ್ನು ಕೊಡಲಾಗಿದೆ. ವಾರದಲ್ಲಿ ಒಂದು ಅವಧಿಯಂತೆ ವರ್ಷದಲ್ಲಿ ೩೦ ಅವಧಿಗಳಲ್ಲಿ ಕ್ರಿಯಾತ್ಮಕ ವ್ಯಾಕರಣಾಂಶಗಳನ್ನು ಬೋಧಿಸಬೇಕು. ವಾರದಲ್ಲಿ ಒಂದು ಅವಧಿಯಂತೆ ವರ್ಷದಲ್ಲಿ ೩೦ ಅವಧಿಗಳನ್ನು ಪ್ರಬಂಧ ರಚನೆಗೆ ಮೀಸಲಿಡಬೇಕು ಎಂಬ ಸೂಚನೆಯಿದೆ.

೧೯೯೨-೯೩ ನೆಯ ಸಾಲಿನವರೆಗೆ ಕನ್ನಡ ಭಾಷಾ ಪಠ್ಯಗಳ ಜೊತೆ ಉಪಪಠ್ಯಗಳಿದ್ದವು. ವಿದ್ಯಾರ್ಥಿಗಳ ಹೆಚ್ಚಿನ ಓದು ಮತ್ತು ಸ್ವಾಧ್ಯಾಯ ಕೇಂದ್ರಿತವಾದ ಉದ್ದೇಶಗಳಿಗಾಗಿ ಈ ಪಠ್ಯಗಳನ್ನು ರೂಪಿಸಲಾಗಿತ್ತು. ೧೯೯೨-೯೩ನೆಯ ಸಾಲಿನಲ್ಲಿ ಭಾಷೆಗಳಿಗೆ ಸಂಬಂಧಿಸಿದಂತೆ ಇದ್ದ ಉಪ ಪಠ್ಯಪುಸ್ತಕಗಳನ್ನು ಕೈಬಿಡಲಾಯ್ತು. ಅದಕ್ಕೆ ಬದಲಾಗಿ ಮಕ್ಕಳ ಆಲೋಚನಾ ಶಕ್ತಿ, ಮಾತನಾಡುವ ಕೌಶಲದ ಬೆಳವಣಿಗೆ, ಯಾವುದೇ ವಿಷಯಗಳ ಮೇಲೆ ಸರಳವಾಗಿ, ಸ್ವತಃ ಬರೆಯುವ ಮತ್ತು ಅರ್ಥಮಾಡಿಕೊಳ್ಳುವ ಕೌಶಲಗಳನ್ನು ಬೆಳೆಸುವ ಉದ್ದೇಶದಿಂದ, ಇಲಾಖೆಯು ಕೆಲವು ವಿಷಯಗಳನ್ನು ಪಠ್ಯಪುಸ್ತಕದಲ್ಲಿಯೇ ನೀಡಿ ಮಕ್ಕಳ ಭಾಷಾ ಕೌಶಲ ಹೆಚ್ಚಿಸಬೇಕೆಂದು ತಿಳಿಸಿದೆ.

ಪ್ರೌಢಶಾಲೆಗಳಲ್ಲಿ ಕನ್ನಡ ಬೋಧನೆ ಮಾಡಬೇಕಾದರೆ, ಪದವಿಯಲ್ಲಿ ಕನ್ನಡವನ್ನು ಐಚ್ಛಿಕವಾಗಿ ಅಧ್ಯಯನ ಮಾಡಿರಬೇಕು. ಅದಿಲ್ಲದಿದ್ದಲ್ಲಿ ಕನ್ನಡ ಭಾಷೆಯಲ್ಲಿ ಡಿಪ್ಲೋಮಾ ಪಡೆದಿರಬೇಕು ಹಾಗೂ ಒಂದು ವರ್ಷದ ಶಿಕ್ಷಕ-ಶಿಕ್ಷಣ ತರಬೇತಿಯಲ್ಲಿ ಕನ್ನಡವನ್ನು ಬೋಧನಾ ವಿಷಯವಾಗಿ ಅಧ್ಯಯನ ಮಾಡಿರಬೇಕು ಎಂಬ ನಿಯಮವಿದೆ. ಪದವಿ ಹಂತದಲ್ಲಿ ಭಾಷೆ ಮತ್ತು ಸಾಹಿತ್ಯ ಪ್ರಕಾರಗಳ ಸಮಗ್ರ ಪರಿಚಯವಾದರೆ, ಶಿಕ್ಷಣ ತರಬೇತಿಯಲ್ಲಿ ಭಾಷೆಯನ್ನು ಕಲಿಸುವ ರೀತಿಯ ಕುರಿತ ಅಧ್ಯಯನವಿದೆ. ಪ್ರೌಢಶಾಲಾ ಹಂತದಲ್ಲಿ ಕನ್ನಡ ಬೋಧನೆಯ ಗುರಿಗಳೇನು ಎಂಬ ವಿಚಾರಗಳು ಶಿಕ್ಷಕರಿಗೆ ಪ್ರಥಮತಃ ಸಮಗ್ರವಾಗಿ ಲಭ್ಯವಾಗಬೇಕಾಗಿರುವುದು ಶಿಕ್ಷಕ ಶಿಕ್ಷಣ ತರಬೇತಿ ಕೇಂದ್ರಗಳಲ್ಲಿ. ಆದರೆ ಶಿಕ್ಷಣ ತರಬೇತಿ ಕೇಂದ್ರಗಳಲ್ಲಿ ಪರೀಕ್ಷಾ ಕೇಂದ್ರಿತ ಹಾಗೂ ಅಂಕ ಕೇಂದ್ರಿತ ವ್ಯವಸ್ಥೆ ಇರುವುದರಿಂದ ಭಾಷಾ ಶಿಕ್ಷಕರಾಗಿ ರೂಪುಗೊಳ್ಳುವ ಶಿಕ್ಷಣಾರ್ಥಿಗಳಲ್ಲಿ ಪರೀಕ್ಷಾ ಪ್ರಾಮುಖ್ಯ ಧೋರಣೆಗಳೇ ಮುಖ್ಯವಾಗುತ್ತವೆ. ಹತ್ತು ತಿಂಗಳ ತ್ವರಿತಗತಿಯ ತರಬೇತಿಯಲ್ಲಿ ಹಲವು ವಿಚಾರಗಳನ್ನು ಅಧ್ಯಯನ ಮಾಡಬೇಕಾಗಿರುವುದರಿಂದ ಕನ್ನಡ ಭಾಷಾ ಬೋಧನೆಯ ಉದ್ದಿಷ್ಟಗಳು ಹಾಗೂ ಉದ್ದಿಷ್ಟ ಸಾಧನೆಗೆ ನೆರವಾಗುವ ಅದರ ಉಪಘಟಕಗಳಾದ ನಿರ್ದಿಷ್ಟಗಳು ಕೇವಲ ಹತ್ತು ಅಂಕದ ಪ್ರಶ್ನೆಗೆ ಸೀಮಿತವಾಗುವ ಸಾಧ್ಯತೆಗಳೇ ಹೆಚ್ಚು. ಬಿ.ಎಡ್ ತರಬೇತಿಯ ಸಂದರ್ಭದಲ್ಲಿ ಕನ್ನಡ ಭಾಷಾ ಬೋಧನೆಯ ಉದ್ದೇಶಗಳ ವಿಚಾರಗಳು ಮೇಲುಸ್ತರದಲ್ಲಿಯೇ ಹಾದು ಹೋಗುತ್ತವೆ. ಆಳ ಅಧ್ಯಯನಕ್ಕೆ ಅಲ್ಲಿ ಸಮಯದ ಅವಕಾಶ ಕಡಿಮೆಯಿರುವುದರಿಂದ ಶಿಕ್ಷಕರ

ತರಬೇತಿಯು ಅಸಂಪೂರ್ಣವಾಗುವ ಪರಿಸ್ಥಿತಿಯಿದೆ. ಪ್ರೌಢಶಾಲಾ ವಿದ್ಯಾರ್ಥಿಗಳ ಕನ್ನಡ ಭಾಷಿಕ ಹಿನ್ನೆಡೆಗೆ ಇದು ಬಹುದೊಡ್ಡ ಕಾರಣವಾಗಿದೆ. ಶಿಕ್ಷಕರ ಆಯ್ಕೆಯು ವಸ್ತುನಿಷ್ಟ ಮಾದರಿಯ ಪರೀಕ್ಷೆಯನ್ನು ನಡೆಸಿ ಅದರಲ್ಲಿನ ಶೇಕಡಾ ೭೦ ರಷ್ಟು ಅಂಕ, ಬಿ.ಎಡ್ ಪದವಿಯ ಶೇಕಡಾ ೧೦ ರಷ್ಟು ಅಂಕ ಹಾಗೂ ಪದವಿ ತರಗತಿಯಲ್ಲಿ ಪಡೆದ ಶೇಕಡಾ ೨೦ ರಷ್ಟು ಅಂಕಗಳನ್ನು ಒಟ್ಟುಗೂಡಿಸಿ ಆಯ್ಕೆ ಮಾಡಲಾಗುತ್ತದೆ. ಭಾಷಾ ಶಿಕ್ಷಕರಿಗಿರಬೇಕಾದ ಇತರ ಯಾವ ಕೌಶಲಗಳನ್ನೂ, ಸಂಗೀತ, ಸಾಹಿತ್ಯ, ಸಾಂಸ್ಕೃತಿಕ ಸಾಧನೆಗಳನ್ನೂ, ಭಾಷಾ ಪಾಂಡಿತ್ಯವನ್ನೂ ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಕೇವಲ ೧೦೦ ಅಂಕಗಳ ಆಧಾರದ ಮೇಲೆ ಶಿಕ್ಷಕರ ಆಯ್ಕೆ ಪ್ರಕ್ರಿಯೆ ನಡೆಯುತ್ತದೆ ಹಾಗೂ ಆಯ್ಕೆಯಾದನಂತರ ಇಲಾಖೆಯಲ್ಲಿ ಸೇವಾಂತರ್ಗತ ತರಬೇತಿಗಳಿರುತ್ತವೆ ಆದರೆ, ನಿವೃತ್ತಿಯವರೆಗೆ ಶಿಕ್ಷಕರಿಗೆ ಯಾವುದೇ ರೀತಿಯ ಮೌಲ್ಯಮಾಪನವೆಂಬುದಿಲ್ಲ.

## ೨.೪. ಬೋಧನಾ ಪ್ರಕ್ರಿಯೆಗಳು ಮತ್ತು ಪಠ್ಯವಸ್ತು

ಪ್ರೌಢಶಿಕ್ಷಣದಲ್ಲಿ ಕನ್ನಡ ಭಾಷಾಕಲಿಕೆಯ ಹಾಗೂ ಬೋಧನೆಯ ವರ್ತಮಾನದ ಸನ್ನಿವೇಶದ ಸ್ವರೂಪ ಬಹಳ ಸ್ಥಿತ್ಯಂತರಗಳನ್ನು ಕಂಡಿದೆ. ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ನಿರ್ದೇಶನಗಳನ್ನು ಪಾಲಿಸಿಕೊಂಡು, ಕರ್ನಾಟಕದ ಸಾರ್ವಜನಿಕ ಶಿಕ್ಷಣ ಇಲಾಖೆಯು ಪ್ರೌಢಶಾಲಾ ಕನ್ನಡ ಕಲಿಕೆ- ಬೋಧನಾ ವಿಧಾನಗಳ ಕುರಿತು ಅನೇಕ ನಿರ್ದೇಶನಗಳನ್ನು ನೀಡಿದೆ. ಶಿಕ್ಷಣ ಇಲಾಖೆಯ ಭಾಷಾ ಕಲಿಕೆಯ ಗುರಿಗಳು, ಧ್ಯೇಯೋದ್ದೇಶಗಳು ಪಠ್ಯಪುಸ್ತಕದ ಮೂಲಕ ವಿದ್ಯಾರ್ಥಿಗಳನ್ನು ತಲುಪಬೇಕಾದ ವ್ಯವಸ್ಥೆಯಿದೆ. ಶಿಕ್ಷಕರು ಇಲ್ಲಿ ಇಲಾಖೆ ಹಾಗೂ ವಿದ್ಯಾರ್ಥಿಗಳ ನಡುವೆ ಇರುವ ಮಧ್ಯವರ್ತಿಗಳಾಗುತ್ತಾರೆ. ಶಿಕ್ಷಣ ಇಲಾಖೆಯು ಭಾಷಾ ಕಲಿಕೆಯ ನಿಗದಿತ ಧ್ಯೇಯಗಳನ್ನು ವಿದ್ಯಾರ್ಥಿಗಳೇ ನೇರವಾಗಿ ಗಳಿಸಿಕೊಳ್ಳುವ ಮಟ್ಟಕ್ಕೆ ಬೆಳೆಯದಿರುವುದರಿಂದ ವಿದ್ಯಾರ್ಥಿಗಳ ಕಲಿಕೆಯ ಸನ್ನಿವೇಶದಲ್ಲಿ ಅಧ್ಯಾಪಕರು ಅತ್ಯಂತ ಮುಖ್ಯರಾಗುತ್ತಾರೆ.



ನಿರೀಕ್ಷಿತ ಗುರಿಗಳನ್ನು ಕಲಿಕೆಯ ಸ್ವರೂಪದಲ್ಲಿ ನೋಡಬೇಕಾದರೆ ಅಧ್ಯಾಪಕರ ಬೋಧನಾ ಪ್ರಕ್ರಿಯೆ ಅತ್ಯಂತ ಮುಖ್ಯವಾಗುತ್ತದೆ. ಬೋಧನಾ ಪ್ರಕ್ರಿಯೆಯ ಮಟ್ಟವು ಕಲಿಕಾ ಸ್ವರೂಪದ ಮಟ್ಟವನ್ನು ನಿರ್ಧರಿಸುತ್ತವೆ. ಬೋಧನೆಯು ಅತಿ ಶ್ರೇಷ್ಠವಾಗಿದ್ದಲ್ಲಿ ಕಲಿಕೆಯ ಸ್ವರೂಪವೂ ಉನ್ನತ ಮಟ್ಟದ್ದಾಗಿರುತ್ತದೆ. ಬೋಧನೆಯ ಮಟ್ಟವು ಕಳಪೆಯಾಗಿದ್ದಲ್ಲಿ ಕಲಿಕೆಯ ಮಟ್ಟವೂ ಕಳಪೆಯಾಗುತ್ತದೆ.

ನಿರೀಕ್ಷಿತ ಗುರಿಗಳನ್ನು ನಿರ್ದಿಷ್ಟ ಪಠ್ಯಕ್ರಮದೊಳಗೆ ತರುವ ಪ್ರಯತ್ನವನ್ನು ಮಾಡುವ ಶಿಕ್ಷಣ ಇಲಾಖೆಯು ವಿದ್ಯಾರ್ಥಿಗಳಲ್ಲಿನ ಕಲಿಕಾ ಸ್ವರೂಪವನ್ನು ನಿರ್ಧರಿಸಲು ಹಾಗೂ ಕನ್ನಡ ಭಾಷಾ ಕಲಿಕೆಯ ಗುರಿಗಳನ್ನು ಸಾಧಿಸಲು ಗದ್ಯ, ಪದ್ಯ, ಲೇಖನ, ವ್ಯಾಕರಣಗಳ ಬೋಧನಾ ಪ್ರಕ್ರಿಯೆಗಳ ಕುರಿತು ನಿರ್ದೇಶನಗಳನ್ನು ನೀಡಿದೆ.

ಅಧ್ಯಾಪಕರ ಜ್ಞಾನ, ಕೌಶಲಗಳು, ವರ್ತನೆಗಳು, ಕಲಿಕೆಯ ಸ್ಥಿರೀಕರಣಕ್ಕಾಗಿ ಕೈಗೊಳ್ಳುವ ಚಟುವಟಿಕೆಗಳು ನಿಗದಿತ ಪಠ್ಯಕ್ರಮದ ಬೋಧನೆಗಾಗಿ ನಡೆಸುವ ಪೂರ್ವ ತಯಾರಿ, ಬೋಧನಾ ವಿಧಾನಗಳು, ಕಲಿಕೆಯನ್ನು ಸ್ಥಿರೀಕರಿಸುವಲ್ಲಿ ನಡೆಸುವ ಪ್ರಯತ್ನಗಳು, ವಿದ್ಯಾರ್ಥಿಗಳೊಂದಿಗೆ ಸಂವಹನಿಸುವ ರೀತಿ ಹೀಗೆ ಎಲ್ಲಾ ವಿಚಾರಗಳಿಂದ ವಿದ್ಯಾರ್ಥಿಗಳು ಪ್ರಭಾವಿತರಾಗಿ, ಬೋಧನೆಯ ವಿಚಾರದ ಕಲಿಕೆಯಲ್ಲಿ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತಾರೆ. ಜೊತೆಗೆ ವಿದ್ಯುನ್ಮಾನ ಮಾಧ್ಯಮಗಳ ಮೂಲಕ ಬೋಧನಾ ಪ್ರಕ್ರಿಯೆಗಳು ನಡೆದಲ್ಲಿ ಬೋಧನಾ ಪ್ರಕ್ರಿಯೆಗಳು ಮತ್ತಷ್ಟು ಯಶಸ್ವಿಯಾಗಿ ಕಲಿಕೆಯ ಚಟುವಟಿಕೆಗಳು ಚುರುಕಾಗುತ್ತವೆ. ವಿದ್ಯಾರ್ಥಿಗಳು ನಿರೀಕ್ಷಿತ ಗುರಿಗಳನ್ನು ಮುಟ್ಟುತ್ತಾರೆ.

ಕರ್ನಾಟಕದ ಬಿ.ಎಡ್.ತರಬೇತಿ ಕೇಂದ್ರಗಳಲ್ಲಿ ಭಾಷಾ ಬೋಧನೆಯ ಹಿನ್ನೆಲೆಯಾಗಿ ಹರ್ಬಾರ್ಟ್‌ನ ಪಂಚಸೋಪಾನ ಪದ್ಧತಿಯನ್ನು ಪ್ರಧಾನವಾಗಿ ಕಲಿಸಲಾಗುತ್ತಿದೆ. ಪೀಠಿಕೆ, ವಿಷಯಘೋಷಣೆ, ಮಾದರಿ ವಾಚನ, ಮೌನವಾಚನ, ಕೇಂದ್ರಪ್ರಶ್ನೆ, ವಿವರಣೆ, ಮೌಲ್ಯಮಾಪನ, ಮರು ಬೋಧನೆ, ಮರು ಮೌಲ್ಯಮಾಪನ ಇತ್ಯಾದಿ ಹಂತಗಳನ್ನು ತಿಳಿಸಲಾಗುತ್ತದೆ. ಬಿ.ಎಡ್ ತರಬೇತಿ ಕೇಂದ್ರಗಳಲ್ಲಿಯೂ ಬೋಧನೆ ಸಾಂಪ್ರದಾಯಿಕ ಪದ್ಧತಿಯಲ್ಲಿಯೇ ಸಾಗುತ್ತಿದೆ. ಆಧುನಿಕ ಭಾಷಾವಿಜ್ಞಾನದಲ್ಲಾದ ಬದಲಾವಣೆಗಳನ್ನು ನೂತನವಾಗಿ ಅಳವಡಿಸಿಕೊಳ್ಳುವ ಕುರಿತು ಹಾಗೂ ಆಧುನಿಕ ವಿದ್ಯುನ್ಮಾನ ತಂತ್ರಜ್ಞಾನಗಳನ್ನು ಕಲಿಕೆ ಹಾಗೂ ಬೋಧನೆಗಳಲ್ಲಿ ಅಳವಡಿಸುವ ಕುರಿತು ಶಿಕ್ಷಣ ಇಲಾಖೆ ಯಾವುದೇ ಗಂಭೀರ ನಿರ್ಧಾರಗಳನ್ನು ತೆಗೆದುಕೊಂಡಿರುವುದಿಲ್ಲ. ಬಿ.ಎಡ್ ತರಬೇತಿಯು ಕೇವಲ ಹತ್ತು ತಿಂಗಳ ತರಬೇತಿಯಾದ್ದರಿಂದ ಕನ್ನಡ ಭಾಷಾ ಬೋಧನೆಯ ವಿಚಾರಗಳು ಶಿಕ್ಷಕರಿಗೆ ಮೇಲುಸ್ತರದಲ್ಲಿ ಹಾದು ಹೋಗುತ್ತವೆ. ಕೇವಲ ಪರೀಕ್ಷಾ ದೃಷ್ಟಿಯಿಂದ ಬೋಧನೆಯು ಸಾಗುತ್ತದೆ. ಭಾಷಾ ಬೋಧನೆಯ ಆಧುನಿಕ ತಂತ್ರಗಳ ಕುರಿತು ತರಬೇತಿಯಿಲ್ಲದಿರುವುದು ಕಂಡುಬರುತ್ತದೆ. ಇದು ಪ್ರೌಢಶಾಲಾ ಕನ್ನಡ ಭಾಷಾ ಕಲಿಕಾ ಸಮಸ್ಯೆಗಳಿಗೆ ಮೂಲಭೂತ ಕಾರಣಗಳಲ್ಲಿ ಒಂದಾಗಿದೆ.

## ಅ) ಗದ್ಯ ಬೋಧನಾ ಪ್ರಕ್ರಿಯೆ ಮತ್ತು ಪಠ್ಯವಸ್ತು

ಶಿಕ್ಷಣ ಇಲಾಖೆಯು ಕನ್ನಡ ಭಾಷಾ ಬೋಧನೆಯ ಹಿನ್ನಲೆಯಲ್ಲಿ ಶಿಕ್ಷಕರಿಗೆ ಅನೇಕ ನಿರ್ದೇಶನಗಳನ್ನು ನೀಡಿದೆ. ಸೇವಾಂತರ್ಗತ ತರಬೇತಿಗಳಲ್ಲಿ ಗದ್ಯ ಬೋಧನಾ ವಿಧಾನಗಳ ವಿಚಾರಗಳನ್ನು ಶಿಕ್ಷಕರಿಗೆ ತಿಳಿಸಲಾಗುತ್ತದೆ. ಬಿ.ಎಡ್ ತರಬೇತಿಯ ಸಂದರ್ಭದಲ್ಲಿಯೂ ಗದ್ಯ ಬೋಧನಾ ವಿಧಾನಗಳನ್ನು ಪಂಚಸೋಪಾನದ ವಿಧಾನದಲ್ಲಿ ವಿವರಿಸಲಾಗುತ್ತದೆ. ಪ್ರಸ್ತುತ ಪ್ರೌಢಶಾಲಾ ಕನ್ನಡ ಭಾಷಾ ಬೋಧನಾ ವಿಧಾನವು ಸಾಂಪ್ರದಾಯಿಕ ಚೌಕಟ್ಟಿನಲ್ಲಿಯೇ ಸಾಗುತ್ತಿದೆ. ವಿದ್ಯಾರ್ಥಿಗಳನ್ನು ಗದ್ಯದ ಅಧ್ಯಯನಕ್ಕೆ ಸಿದ್ಧಗೊಳಿಸಬೇಕಾದುದು ಮೊದಲ ಹೆಜ್ಜೆ. ಈ ನಿಟ್ಟಿನಲ್ಲಿ ನಿರ್ದಿಷ್ಟಗೊಳಿಸಿದ ಗದ್ಯವನ್ನು ಬೋಧಿಸುವ ಮೊದಲು ವಿದ್ಯಾರ್ಥಿಗಳನ್ನು ನಿಗದಿತ ಕಲಿಕೆಯ ಸನ್ನಿವೇಶಕ್ಕೆ ಮಾನಸಿಕವಾಗಿ ಅಣಿಗೊಳಿಸಬೇಕು. ಅಂದಿನ ಪಾಠಕ್ಕೆ ಪೂರಕವಾಗಿ ಸೂಕ್ತವಾದ ಪೀಠಿಕೆಯನ್ನು ಹಾಕುವುದು ಈ ನಿಟ್ಟಿನಲ್ಲಿ ಮಹತ್ವದ್ದಾಗುತ್ತದೆ. ಬೋಧನಾ ಘಟಕದಲ್ಲಿ ಬರುವ ಹೊಸ ಪದಗಳನ್ನು, ನುಡಿಗಟ್ಟುಗಳನ್ನು, ಸಂಕೀರ್ಣ ಪದ ಪುಂಜಗಳನ್ನು ನಂತರದ ಹಂತದಲ್ಲಿ ಪರಿಚಯಿಸಬೇಕು. ಆಕರ್ಷಕವಾದ ಪ್ರಯೋಗಗಳ ಮೂಲಕ ವಿದ್ಯಾರ್ಥಿಗಳನ್ನು ಈ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಬೇಕು. ಪಾಠದಲ್ಲಿ ಬರುವ ಮುಖ್ಯ ಭಾವವನ್ನು ವಿದ್ಯಾರ್ಥಿಗಳು ಪಾಲ್ಗೊಳ್ಳುವಂತಹ ಚಟುವಟಿಕೆಗಳ ಮೂಲಕ ಪರಿಚಯಿಸಬೇಕು. ಅಧ್ಯಾಪಕರು ಸೂಕ್ತ ವೇಗದಲ್ಲಿ, ಸ್ಪಷ್ಟವಾಗಿ, ಧ್ವನಿಯನ್ನು ಭಾವಕ್ಕೆ ತಕ್ಕಂತೆ ಉಪಯೋಗಿಸಿಕೊಂಡು ಓದಬೇಕು. ವಿದ್ಯಾರ್ಥಿಗಳಿಗೆ ಅಧ್ಯಾಪಕರ ಓದುವಿಕೆಯನ್ನು ಕೇಳಿದಾಗಲೇ ಪಾಠದ ಅರ್ಥವು ಸ್ಫುರಿಸುವಂತೆ ಓದುವ ಕ್ರಿಯೆ ಇರಬೇಕು. ಈ ಹಂತದಲ್ಲಿ ವಿದ್ಯಾರ್ಥಿಗಳಿಗೆ ಶ್ರವಣಾಭ್ಯಾಸ ಹಾಗೂ ಆಲಿಸುವಾಗಲೇ ಗ್ರಹಿಸುವ ಕೌಶಲವನ್ನು ಕಲಿಸುವುದು ಮುಖ್ಯವಾಗುತ್ತದೆ. ಇಲ್ಲಿನ ಕಲಿಕೆಯ ಸಂದರ್ಭಗಳಲ್ಲಿ ಮನಃಶಾಸ್ತ್ರೀಯ ಅಂಶಗಳು ಬಹು ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಆದುದರಿಂದ ಅಧ್ಯಾಪಕರು ವಿದ್ಯಾರ್ಥಿಗಳ ಮನಃಶಾಸ್ತ್ರವನ್ನು ಸಮಗ್ರವಾಗಿ ತಿಳಿಯುವುದು ಮುಖ್ಯವಾಗುತ್ತದೆ.

ಕೇಂದ್ರ ಪ್ರಶ್ನೆ, ಪೂರಕ ಪ್ರಶ್ನೆಗಳ ಮೂಲಕ ಪಾಠದ ಅರ್ಥಗ್ರಹಣಮಾಡಿಕೊಳ್ಳುವ ಹಂತ ನಂತರದ್ದು. ಈ ಸಂದರ್ಭದಲ್ಲಿ ಪಠ್ಯದ ಅಭ್ಯಾಸದಲ್ಲಿರುವ ಪ್ರಶ್ನೆಗಳನ್ನು ಕೇಳಬಾರದು. ಆ ದಿನ ಓದಿದ ಭಾಗದಲ್ಲಿರುವ ವಿಚಾರಗಳನ್ನಾಧರಿಸಿ ಪ್ರಶ್ನೆಗಳನ್ನು ಕೇಳಬೇಕು. ಆ ಪ್ರಶ್ನೆಗಳನ್ನು ಆಧಾರವಾಗಿಟ್ಟುಕೊಂಡು ವಿದ್ಯಾರ್ಥಿಗಳಿಗೆ ಮೌನವಾಗಿಯೇ ಓದಿ ಗ್ರಹಿಸುವ ಅವಕಾಶ ಹಾಗೂ ಮಾತನಾಡುವ ಅವಕಾಶಗಳನ್ನು ಅಭ್ಯಾಸ ಮಾಡಿಸಬೇಕು. ಪ್ರಶ್ನೋತ್ತರಗಳ ಮೂಲಕ ವಿದ್ಯಾರ್ಥಿಗಳೊಂದಿಗೆ ಅಂದಿನ ಪಾಠದ ವಿಚಾರವನ್ನು ಚರ್ಚಿಸಬೇಕು. ಬಳಿಕ ಸದರಿ ಪಠ್ಯ ಭಾಗವನ್ನು ವಿದ್ಯಾರ್ಥಿಗಳಿಂದ ಗಟ್ಟಿಯಾಗಿ ಓದಿಸಬೇಕು. ಬೋಧನೆಯ ನಂತರ ಸ್ಥಿರೀಕರಣದಲ್ಲಿ ಪಠ್ಯದ ಕೊನೆಯಲ್ಲಿ ಕೊಟ್ಟಿರುವ ಅಭ್ಯಾಸಗಳನ್ನು ತರಗತಿಯಲ್ಲಿ ಚರ್ಚಿಸಿ ವಿದ್ಯಾರ್ಥಿಗಳೇ ಉತ್ತರವನ್ನು ಬರೆಯುವಂತೆ ಮಾಡಬೇಕು. ನಂತರದಲ್ಲಿ ಘಟಕ ಪರೀಕ್ಷೆಗಳನ್ನು ಮಾಡಿಸಬೇಕು. ಉತ್ತರಗಳನ್ನು ವಿಶ್ಲೇಷಿಸಿ, ದೋಷಗಳನ್ನು ತಿದ್ದಬೇಕು. ಪರಿಹಾರ ಬೋಧನೆಯನ್ನು ಅಗತ್ಯವಿದ್ದಲ್ಲಿ ಕೈಗೊಳ್ಳಬೇಕು.

ಪಠ್ಯವಸ್ತು ರಚನಾ ಸಮಿತಿಯು ಪಠ್ಯಪುಸ್ತಕದ ರಚನೆಯ ಚೌಕಟ್ಟನ್ನು ತಿಳಿಸುತ್ತದೆ.

- ❖ ಪಠ್ಯಪುಸ್ತಕವು ಪ್ರೌಢವಿಷಯಗಳನ್ನು ಒಳಗೊಂಡಿದ್ದು ಜಿಲ್ಲೆ, ಜನಾಂಗ, ಲಿಂಗಸಮಾನತೆ, ಪ್ರಾದೇಶಿಕವಾರು ಮತ್ತು ಭಾಷಾ ಶೈಲಿಯ ವೈವಿಧ್ಯತೆಯನ್ನು ಒಳಗೊಂಡಿರಬೇಕು. ಸಾಹಿತ್ಯದ ಪ್ರಕಾರಗಳ ಹಂತಗಳೊಂದಿಗೆ ಪ್ರಕೃತ ವಿದ್ಯಮಾನಗಳನ್ನೊಳಗೊಂಡ ಪಾಠಗಳಿರಬೇಕು.
- ❖ ಎಂಟನೆಯ ತರಗತಿಯ ಗದ್ಯಭಾಗದಲ್ಲಿ ಸುಮಾರು ೭೦ ಪುಟಗಳಿರಬೇಕು. ಒಂಭತ್ತು ಹಾಗೂ ಹತ್ತನೆಯ ತರಗತಿಯ ಗದ್ಯಭಾಗಗಳ ಭಾಷಾ ಶೈಲಿಯು ಎಂಟನೆಯ ತರಗತಿಯ ಗದ್ಯಭಾಗದ ಮುಂದುವರಿದ ಭಾಷಾ ಶೈಲಿಯಂತಿರಬೇಕು.
- ❖ ತರಗತಿಯಿಂದ ತರಗತಿಗೆ ಎಂಟು-ಹತ್ತು ಪುಟಗಳಷ್ಟು ಏರಿಕೆಯ ಕ್ರಮವಿರಬೇಕು. ಪ್ರತಿ ತರಗತಿಯಲ್ಲಿ ಎಂಟು ಶೀರ್ಷಿಕೆಗಳ ಗದ್ಯಭಾಗವಿದ್ದು ಹತ್ತು ಶೀರ್ಷಿಕೆಯನ್ನು ಮೀರದಂತಿರಬೇಕು.
- ❖ ಕನಿಷ್ಠ ಮೂರು ಪುಟಗಳ ಹಳಗನ್ನಡ ಹಾಗೂ ನಾಲ್ಕು ಪುಟಗಳನ್ನು ಮೀರದಂತೆ ನಡುಗನ್ನಡ ಪಾಠಗಳಿರಬೇಕು.
- ❖ ಪಠ್ಯಪುಸ್ತಕಗಳು ಕಥೆ, ವರ್ಣನೆ, ನಿರೂಪಣೆ, ನಾಟಕ, ಸಂಭಾಷಣೆ, ಲಲಿತ ಪ್ರಬಂಧ, ವ್ಯಕ್ತಿಚಿತ್ರ, ಜೀವನಚರಿತ್ರೆ, ಪ್ರವಾಸ ಕಥನ, ಜನಪದ, ಪರಿಸರ, ಕಲೆಗಳ ಪರಿಚಯ, ಹಳಗನ್ನಡ ಪರಿಚಯ, ಪತ್ರಲೇಖನ, ಹಾಸ್ಯ ಸಾಹಿತ್ಯ, ವಿಜ್ಞಾನ ಸಾಹಿತ್ಯ, ಐತಿಹಾಸಿಕ ಸಾಹಿತ್ಯದ ವಿಚಾರಗಳನ್ನು ಒಳಗೊಂಡಿರಬೇಕು ಎಂಬುದಾಗಿ ಪಠ್ಯ ರಚನಾ ಸಮಿತಿಯು ತಿಳಿಸುತ್ತದೆ.

## ಆ) ಪದ್ಯ ಬೋಧನಾ ಪ್ರಕ್ರಿಯೆ ಮತ್ತು ಪಠ್ಯವಸ್ತು

ಪಠ್ಯಪುಸ್ತಕ ನಿರ್ದೇಶನಾಲಯವು ಪದ್ಯ ಬೋಧನಾ ಪ್ರಕ್ರಿಯೆಯ ಕುರಿತು ಶಿಕ್ಷಕರಿಗೆ ನಿರ್ದೇಶನ ನೀಡಿದೆ. ಗದ್ಯ ಭಾಗಕ್ಕೆ ಸೂಚಿಸಿರುವ ಕ್ರಮಗಳೇ ಪದ್ಯ ಭಾಗಕ್ಕೂ ಅನ್ವಯವಾಗುತ್ತವೆ. ಅಧ್ಯಾಪಕರು ಪದ್ಯದ ಅರ್ಥಗ್ರಹಣೆಗೆ ಅವಶ್ಯಕವಾದಷ್ಟು ಮಾತ್ರ ವಿವರಣೆಯನ್ನು ನೀಡಬೇಕು ಉಳಿದಂತೆ ಪದ್ಯದ ಧ್ವನಿತಾರ್ಥಗಳನ್ನು, ವ್ಯಂಜಕಾರ್ಥಗಳನ್ನು ವಿದ್ಯಾರ್ಥಿಗಳಿಂದ ಉತ್ತರ ತರಿಸುವ ಪ್ರಯತ್ನಗಳಾಗಬೇಕು. ವಿದ್ಯಾರ್ಥಿಗಳಿಗೆ ಪದ್ಯದ ಅರ್ಥವು ಅಧ್ಯಾಪಕರ ವಾಚನ ಕಾಲದಲ್ಲಿ ಮತ್ತು ವಿದ್ಯಾರ್ಥಿಗಳ ಮೌನ ವಾಚನದ ಕಾಲದಲ್ಲಿ ಸ್ಫುರಿಸುವಂತೆ ಅವರ ರಸಾಸ್ವಾದನ ಸಾಮರ್ಥ್ಯವನ್ನು ಹೆಚ್ಚಿಸಬೇಕು.

ವಿದ್ಯಾರ್ಥಿಗಳನ್ನು ಪದ್ಯ ಭಾಗಕ್ಕೆ ಸಿದ್ಧಗೊಳಿಸಬೇಕಾದಲ್ಲಿ ಪದ್ಯಕ್ಕೆ ಪೂರಕವಾದ ಪೀಠಿಕೆ ಅಗತ್ಯವಾಗುತ್ತದೆ. ಕವಿ, ಕಾವ್ಯ, ಹೊಸ ಪದಗಳು, ಪದ ಚಿತ್ರಗಳು, ವಿಶೇಷ ಅರ್ಥಗಳ ವಿವರಣೆಯನ್ನು ಚಟುವಟಿಕೆಗಳ ಮೂಲಕ ಮಾಡಬೇಕಾದುದು ತದನಂತರದ

ಹಂತವಾಗಿರುತ್ತದೆ. ಮುಂದೆ ಅಧ್ಯಾಪಕರು ಭಾವಾರ್ಥಗರ್ಭಿತ ವಾಚನವನ್ನು ಎರಡುಬಾರಿಯಾದರೂ ಮಾಡಬೇಕು. ಬಳಿಕ ವಿದ್ಯಾರ್ಥಿಗಳಿಂದ ಮೌನವಾಚನ ನಡೆಸುವುದು. ವಾಚ್ಯಾರ್ಥಕ್ಕಾಗಿ, ಸ್ಥೂಲ ವಿಷಯಗ್ರಹಣೆಗಾಗಿ, ಅರ್ಥೈಸುವುದಕ್ಕಾಗಿ, ವ್ಯಾಖ್ಯಾನಕ್ಕಾಗಿ, ಸೃಜನಾತ್ಮಕ ಗ್ರಹಿಕೆಗಾಗಿ ಪ್ರಶ್ನೋತ್ತರಗಳ ಮೂಲಕ ಆ ದಿನದ ಪದ್ಯ ಭಾಗದ ಕುರಿತು ಚರ್ಚೆ ನಡೆಸಬೇಕು. ಅದಾದ ಬಳಿಕ ಪದ್ಯದ ವಾಚನವನ್ನು ವಿದ್ಯಾರ್ಥಿಗಳಿಂದ ಮಾಡಿಸಬೇಕು. ಈ ಸಮಯದಲ್ಲಿ ಶಿಕ್ಷಕರೇ ಹಾಡಬಹುದು. ಧ್ವನಿ ಸುರುಳಿಗಳನ್ನು ಬಳಸಬಹುದು. ಬೋಧನೆಯ ನಂತರ ಸ್ಥಿರೀಕರಣಕ್ಕಾಗಿ ಪದ್ಯದ ಕೊನೆಯಲ್ಲಿರುವ ಅಭ್ಯಾಸಗಳನ್ನು ಮಾಡಿಸುವುದು. ಸಮಾನ ಭಾವದ ಕವಿತೆಗಳನ್ನು ಸಂಗ್ರಹಿಸುವುದು. ಕವನವನ್ನು ಗದ್ಯ, ನಾಟಕ, ಕಥಾ ರೂಪಕ್ಕೆ ರೂಪಾಂತರಿಸುವುದು, ವಿದ್ಯಾರ್ಥಿಗಳಿಂದ ಕವನ ರಚನೆ, ಘಟಕ ಪರೀಕ್ಷೆ, ವಿಶ್ಲೇಷಣೆ, ಪರಿಹಾರ ಬೋಧನೆ ಈ ಕ್ರಮಗಳನ್ನು ಪದ್ಯ ಬೋಧನಾ ಪ್ರಕ್ರಿಯೆಯಲ್ಲಿ ಅನುಸರಿಸಬೇಕೆಂದು ಇಲಾಖೆಯು ಶಿಕ್ಷಕರಿಗೆ ತರಬೇತಿಯ ಅವಧಿಯಲ್ಲಿ ತಿಳಿಸುತ್ತದೆ.

ಪಠ್ಯಪುಸ್ತಕ ರಚನಾ ಸಮಿತಿಯು ಪದ್ಯಭಾಗದ ಪಠ್ಯವಸ್ತುವಿನ ಕುರಿತಾದ ಚೌಕಟ್ಟನ್ನು ಹೇಳಿದೆ.

- ಎಂಟನೆಯ ತರಗತಿಗೆ ೨೫೦ ಸಾಲುಗಳಷ್ಟು ಪದ್ಯಭಾಗಗಳಿರಬೇಕು. ಎಂಟರಿಂದ ಹತ್ತು ಶೀರ್ಷಿಕೆಗಳ ಪದ್ಯಗಳಿರಬೇಕು.
- ಆಧುನಿಕ ಕವನ ೧೦೦ ಸಾಲು, ನಡುಗನ್ನಡ ಕಾವ್ಯಭಾಗ ೫೦ ಸಾಲು, ವಚನ, ತ್ರಿಪದಿ ೪೦ ಸಾಲು, ದಾಸರಪದ ೪೦ ಸಾಲು, ಜನಪದ, ಹಳಗನ್ನಡ ೨೦ ಸಾಲುಗಳಿರಬೇಕು. ಒಂಭತ್ತನೆಯ ತರಗತಿಯಲ್ಲಿ ೩೦೦ ಸಾಲುಗಳಷ್ಟು ಪದ್ಯಭಾಗವಿದ್ದು, ಆಧುನಿಕ ಕನ್ನಡ ಕಾವ್ಯ ೧೦೦ ಸಾಲುಗಳಷ್ಟಿರಬೇಕು.
- ನವೋದಯ, ನವ್ಯ, ದಲಿತ, ಬಂಡಾಯ ವಿಚಾರಗಳಿರಬೇಕು.
- ನಡುಗನ್ನಡ ಭಾಗವು ಸುಮಾರು ನೂರು ಸಾಲುಗಳಷ್ಟಿರಬೇಕು. ಇದರಲ್ಲಿ ವಚನ, ರಗಳೆ, ಷಟ್ಪದಿ, ಕೀರ್ತನೆಯ ಅಂಶಗಳಿರಬೇಕು.
- ಹಳಗನ್ನಡ ಚಂಪೂಕಾವ್ಯ ಸುಮಾರು ನೂರು ಸಾಲುಗಳಿರಬೇಕು. ಅದರಲ್ಲಿ ವೃತ್ತ ಮತ್ತು ಕಂದ ಪದ್ಯಗಳಿರಬೇಕು.
- ಹತ್ತನೆಯ ತರಗತಿಯಲ್ಲಿ ಈ ಕ್ರಮವು ಮುಂದುವರಿದ ಭಾಗದಂತೆ ಇರಬೇಕು.
- ಕಂಠಪಾಠಕ್ಕೆ ಎಂಟನೆಯ ತರಗತಿಯಲ್ಲಿ ೫೦ ಸಾಲುಗಳು, ಒಂಭತ್ತನೆಯ ತರಗತಿಯಲ್ಲಿ ೬೦ ಸಾಲುಗಳು ಕಂಠಪಾಠಕ್ಕೆ ನಿಗದಿಗೊಳಿಸಲಾಗಿದೆ. ಕಂಠಪಾಠದ ಪದ್ಯಭಾಗಗಳು ನೀತಿ ಪ್ರಾಧಾನ್ಯವಾಗಿದ್ದು ಗೇಯತೆ ಮತ್ತು ರಸವತ್ತತೆಯನ್ನು ಆಧರಿಸಿರಬೇಕು.

❖ ನಾಡಿನ ಎಲ್ಲಾ ಭಾಗದ ಭಾಷಾ ಶೈಲಿಯ ಕವಿ–ಕವಯತ್ರಿಯರಿಗೆ ಪ್ರಕಾರವಾರು ಆದ್ಯತೆ ನೀಡಬೇಕು.

❖ ಹಳಗನ್ನಡ, ನಡುಗನ್ನಡ ಹಾಗೂ ಆಧುನಿಕ ಕನ್ನಡಕ್ಕೆ ಸೂಚಿತ ಪ್ರಮಾಣದಲ್ಲಿ ಸಮಾನತೆಯನ್ನು ಕಾಪಾಡಿಕೊಳ್ಳಬೇಕು.

❖ ಶೀರ್ಷಿಕೆಯ ದೃಷ್ಟಿಯಿಂದ ಗದ್ಯಪಾಠಗಳ ಸಂಖ್ಯೆಗೆ ಪದ್ಯ ಪಾಠಗಳು ಸಮನಾಗಿರಬೇಕು.

❖ ಪದ್ಯಭಾಗದ ಆರಂಭದಲ್ಲಿ ಆಧುನಿಕ ಕನ್ನಡ ಕಾವ್ಯಗಳಿದ್ದು, ನವೋದಯ, ನವ್ಯ, ದಲಿತ, ಬಂಡಾಯ ಘಟ್ಟಗಳಿಗೆ ಸಂಬಂಧಿಸಿದ ಆಯ್ದ ಪದ್ಯಗಳನ್ನು ಅನುಕ್ರಮವಾಗಿ ಅನುಸರಿಸಬೇಕು.

❖ ನಡುಗನ್ನಡದಲ್ಲಿ ರಗಳೆ ಪ್ರಕಾರವು ಕಡ್ಡಾಯವಾಗಿದ್ದು (ಛಂದಸ್ಸಿನ ದೃಷ್ಟಿಯಿಂದ) ವಚನ, ರಗಳೆ, ಷಟ್ಪದಿ, ಕೀರ್ತನೆಗಳ ಅನುಕ್ರಮವನ್ನು ಅನುಸರಿಸುವುದು.

❖ ಪದ್ಯಭಾಗದಲ್ಲಿ ಚಂಪೂ ಕಾವ್ಯ ಪ್ರಕಾರದ ಕಾವ್ಯಭಾಗಗಳಿರತಕ್ಕದ್ದು

## ಇ) ಲೇಖನ ಕೌಶಲದ ಬೋಧನೆ

ವಿದ್ಯಾರ್ಥಿಗಳ ಭಾಷಾ ಕೌಶಲವನ್ನು ವೃದ್ಧಿಸುವಲ್ಲಿ ಲೇಖನದ ಪಾತ್ರ ಮುಖ್ಯವಾದುದು. ಅಭಿವ್ಯಕ್ತಿಯ ಸಾಮರ್ಥ್ಯವನ್ನು ಇದು ವಿಸ್ತರಿಸುತ್ತದೆ. ವಿದ್ಯಾರ್ಥಿಗಳಿಗೆ ಲೇಖನದ ವಿಷಯವನ್ನು ತರಗತಿಯಲ್ಲಿ ಚರ್ಚೆಯ ಮೂಲಕ ಪರಿಚಯಿಸಬೇಕು. ಅವರೊಡನೆ ಚರ್ಚೆ ಮಾಡುವ ಸಂದರ್ಭದಲ್ಲಿ ಲೇಖನದ ವಿಚಾರವಾಗಿ ಬರುವ ಪ್ರಮುಖ ಪದಗಳನ್ನು ಹಾಗೆಯೇ ಕರಿಹಲಗೆಯ ಮೇಲೆ ಬರೆಯಬೇಕು. ಅನಂತರ ಅವುಗಳನ್ನು ಅನುಕ್ರಮಗೊಳಿಸಬೇಕು. ಬೇಡವಾದುದನ್ನು ಬಿಡಬೇಕು. ವಿಷಯ ವಿಶ್ಲೇಷಣೆ ಮಾಡುವಾಗ ಲೇಖನಕ್ಕೆ ಬೇಕಾಗುವ ಪದಗಳನ್ನು ಕರಿಹಲಗೆಯ ಮೇಲೆ ಬರೆಯಬೇಕು. ನಂತರ ಹಂತಹಂತವಾಗಿ ವಿದ್ಯಾರ್ಥಿಗಳ ಆತ್ಮವಿಶ್ವಾಸಕ್ಕೆ ದಕ್ಕೆ ಬಾರದಂತೆ ತಪ್ಪುಗಳನ್ನು ಸರಿಪಡಿಸಬೇಕು. ಈ ಕ್ರಮವನ್ನು ಯೋಜನಾ ಬದ್ಧವಾಗಿ ಹಂತಹಂತವಾಗಿ ನಡೆಸಿದರೆ ವಿದ್ಯಾರ್ಥಿಗಳಿಗೆ ಬರೆಯುವ ಕೌಶಲ ಕರಗತವಾಗುತ್ತದೆ. ಈ ವಿಚಾರಗಳನ್ನು ಶಿಕ್ಷಕರಿಗೆ ತರಬೇತಿಯ ಅವಧಿಗಳಲ್ಲಿ ತಿಳಿಸಲಾಗುತ್ತದೆ.

❖ ಪ್ರಬಂಧಗಳ ಸ್ವರೂಪ, ಲಕ್ಷಣಗಳು, ಪ್ರಬಂಧ ರಚನಾವಿಧಾನಗಳನ್ನು ತಿಳಿಸುವುದು. ಪರಿಸರ, ಮಾಧ್ಯಮಗಳು, ಆರೋಗ್ಯ–ನೈರ್ಮಲೀಕರಣ, ಪ್ರಕೃತಿ ವಿಕೋಪ, ಜನಸಂಖ್ಯೆ, ನಿರುದ್ಯೋಗ, ಬಾಲಕಾರ್ಮಿಕರು, ಬಾಲ್ಯ ವಿವಾಹ, ಬಡತನ, ವರದಕ್ಷಿಣೆ,

ಸಾವಯವ ಕೃಷಿ, ಮಳೆಕೊಯ್ಲು, ಕೃಷಿಕ್ಷೇತ್ರದ ಸಮಸ್ಯೆಗಳು ಇತ್ಯಾದಿ ವಿಷಯಗಳ ಕುರಿತು ಪ್ರಬಂಧ ರಚನೆ ಮಾಡಿಸುವುದು.

❖ ಪತ್ರಲೇಖನದ ಸ್ವರೂಪ, ಸಾಮಾನ್ಯ ರೂಪ ಹಾಗೂ ವಿಧಗಳು, ವೈಯಕ್ತಿಕ ಪತ್ರ, ವ್ಯಾವಹಾರಿಕ ಪತ್ರ, ಮನವಿ ಪತ್ರ, ನಾಗರಿಕ ಸೌಲಭ್ಯಗಳನ್ನು ಕೋರಿ ಬರೆವ ಪತ್ರ, ವರದಿ ತಯಾರಿಕೆ ಮೊದಲಾದ ವಿಚಾರಗಳನ್ನು ತಿಳಿಸುವುದು.

❖ ಸೃಜನಶೀಲ ಅಭಿವ್ಯಕ್ತಿಗೆ ಅವಕಾಶವಿರುವಂತೆ ಹಾಗೂ ವಿಶೇಷವಾಗಿ ಸ್ವಂತ ಅನುಭವಗಳನ್ನು ದಾಖಲಿಸಬಹುದಾದ ಅಂಶಗಳಿರುವ ಪದ್ಯಗಳ ಭಾವಾರ್ಥಗಳನ್ನು ಬರೆಸುವುದು.

❖ ಗಾದೆ ಮಾತುಗಳ ವಿಸ್ತರಣೆ, ನುಡಿಗಟ್ಟುಗಳ ಪ್ರಯೋಗಗಳ ಕುರಿತು ತಿಳಿಸುವುದು.

❖ ಪ್ರವಾಸಕಥನ, ಅನುಭವ, ವೀಕ್ಷಣಾ ಅಂಶಗಳ ಸೃಜನಶೀಲ ರಚನೆ, ಸ್ವಂತವಾಕ್ಯ ರಚನೆ, ಸಣ್ಣಕಥೆ, ಕವಿತೆ, ಪ್ರಬಂಧಗಳ ರಚನೆಗಳನ್ನು ಮಾಡಿಸುವುದು.

## ಇ) ವ್ಯಾಕರಣ ಬೋಧನಾ ಪ್ರಕ್ರಿಯೆ ಮತ್ತು ಪಠ್ಯವಸ್ತು

ಯಾವುದೇ ವ್ಯಾಕರಣ ವಿಚಾರಗಳನ್ನು ಅಭ್ಯಾಸ ಮಾಡಿಸುವ ಮೊದಲು ಆ ಪ್ರಕ್ರಿಯೆಗಳಿಗೆ ಸಂಬಂಧಿಸಿದ ಎಲ್ಲಾ ವ್ಯಾಕರಣ ನಿಯಮಗಳೂ ವಿದ್ಯಾರ್ಥಿಗಳಿಗೆ ಕರಗತವಾಗುವಂತೆ ನೋಡಿಕೊಳ್ಳಬೇಕು. ಇದಕ್ಕಾಗಿಯೇ ಕೆಲವು ಅವಧಿಗಳನ್ನು ತೆಗೆದುಕೊಳ್ಳಬಹುದು. ಪಾಠದ ಮಧ್ಯದಲ್ಲಿ ವ್ಯಾಕರಣವಿಚಾರಗಳು ಬಂದರೆ, ಸಾಂದರ್ಭಿಕವಾಗಿ ಸ್ವಲ್ಪ ವಿವರಿಸಿ, ಸಮಗ್ರ ವಿವರಣೆಯನ್ನು ಪ್ರತ್ಯೇಕವಾಗಿ ಪಾಠದ ಕೊನೆಯಲ್ಲಿಯೇ ಹೇಳಬೇಕು. ಇಲ್ಲದಿದ್ದರೆ ಪಾಠದ ರಸಭಂಗವಾಗುವ ಸಾಧ್ಯತೆಗಳಿರುತ್ತವೆ.

ಹಿಂದಿನ ತರಗತಿಯಲ್ಲಿ ಕಲಿಸಿದ ವ್ಯಾಕರಣಾಂಶಗಳ ಪುನರಾವರ್ತನೆಯನ್ನು ಮಾಡಿಕೊಂಡು ವರ್ಣಮಾಲೆ, ಸಂಯುಕ್ತಾಕ್ಷರಗಳು, ಸಂಧಿ, ಪದ, ವಿಭಕ್ತಿ, ಸಮಾಸ, ಛಂದಸ್ಸು, ಅಲಂಕಾರ, ಕ್ರಿಯಾಪದ, ಕಾಲ, ವಿಭಕ್ತಿ ಪಲ್ಲಟ ವಿಚಾರಗಳನ್ನು ಪಠ್ಯಗಳಲ್ಲಿ ಅಳವಡಿಸಬೇಕು. ಪಠ್ಯಪುಸ್ತಕದ ಕೊನೆಯಲ್ಲಿ ಅರ್ಥಸಹಿತ ಪದಕೋಶಿಯಲ್ಲಿ ಅಕಾರಾದಿಯಾಗಿ ಪದಗಳನ್ನು ಜೋಡಿಸಬೇಕು. ಎಂಟನೆಯ ತರಗತಿಗೆ ೪೦೦ ಪದಗಳನ್ನು, ಒಂಭತ್ತನೆಯ ತರಗತಿಗೆ ೬೦೦ ಪದಗಳನ್ನು ಹಾಗೂ ಹತ್ತನೆಯ ತರಗತಿಗೆ ೮೦೦ ಪದಗಳನ್ನು ಏರಿಕೆಯ ಕ್ರಮದಲ್ಲಿ ನೀಡಬೇಕು ಎಂದು ಪಠ್ಯವಸ್ತು ರಚನಾ ಸಮಿತಿಯು ಪಠ್ಯಗಳ ಚೌಕಟ್ಟನ್ನು ನಿರ್ದೇಶಿಸಿದೆ.

ಪೂರ್ವ ಸಿದ್ಧತೆ, ನಿರೂಪಣೆ, ಕೇಂದ್ರೀಕೃತ ಅಭ್ಯಾಸ, ಸಂವಹನಾತ್ಮಕ ಅಭ್ಯಾಸ, ಕಲಿಕೆಯ ಸ್ಥಿರೀಕರಣದ ಕುರಿತು ಮಾಹಿತಿ ಸಂಗ್ರಹಣೆ, ಇದರ ಆಧಾರದ ಮೇಲೆ ಸಾಂದರ್ಭಿಕವಾಗಿ ಬೋಧನಾ ವಿಧಾನಗಳ ಸೂಕ್ತ ಬದಲಾವಣೆಗಳು ಈ ಹಂತಗಳಲ್ಲಿಯೇ

ಬೋಧನೆಯನ್ನು ಮಾಡಬೇಕು. ಕಥೆ, ನಾಟಕಾತ್ಮಕ ಚಟುವಟಿಕೆ, ಚಿತ್ರ, ಹಾಡು, ಸುತ್ತಮುತ್ತಲಿನ ವಸ್ತು ವಿಷಯ, ಆಟಗಳು, ನಕ್ಷೆಗಳು, ಸಮಸ್ಯಾ ಪೂರಣ, ಪಠ್ಯಾಧಾರಿತ ಚಟುವಟಿಕೆಗಳ ವಿಧಾನಗಳನ್ನು ಗದ್ಯ, ಕಾವ್ಯ, ವ್ಯಾಕರಣ ಹಾಗೂ ಲೇಖನದ ಬೋಧನೆಯ ಸಂದರ್ಭಗಳಲ್ಲಿ ಅನುಸರಿಸಬೇಕೆಂದು ಶಿಕ್ಷಣ ಇಲಾಖೆಯು ಭಾಷಾ ಬೋಧನಾ ಪ್ರಕ್ರಿಯೆಯ ಕುರಿತು ಶಿಕ್ಷಕರಿಗೆ ನಿರ್ದೇಶಿಸಿದೆ. ಶಿಕ್ಷಕರ ತರಬೇತಿಯ ಸಮಯದಲ್ಲಿಯೂ ಈ ಕುರಿತು ಶಿಕ್ಷಕರಿಗೆ ತಿಳಿಸಲಾಗುತ್ತದೆ.

ಕಲಿಕೆಯ ಸ್ವರೂಪವನ್ನು ಬೋಧನೆಯ ಪ್ರಕ್ರಿಯೆಗಳು ನಿರ್ಧರಿಸುತ್ತವೆ. ಶಿಕ್ಷಕರ ಆಸಕ್ತಿ, ಪೂರ್ವತಯಾರಿ, ಸೃಜನಶೀಲತೆ, ಬೋಧನಾ ವಿಧಾನಗಳನ್ನು ಅಳವಡಿಸಿಕೊಳ್ಳುವ ರೀತಿ, ವಿದ್ಯಾರ್ಥಿಗಳನ್ನು ಕಲಿಕೆಯಲ್ಲಿ ತೊಡಗಿಸಿಕೊಳ್ಳುವಿಕೆ, ಆಧುನಿಕ ದೃಕ್ ಶ್ರವಣೋಪಕರಣಗಳನ್ನು ಬಳಸಿಕೊಳ್ಳುವಿಕೆ, ಭಾಷಾ ಬೋಧನಾ ಉದ್ದೇಶಗಳನ್ನು ಸಾಧಿಸುವಲ್ಲಿನ ಪ್ರಾಮಾಣಿಕ ಪ್ರಯತ್ನ ಇವೆಲ್ಲವೂ ಕೂಡ ನಿರೀಕ್ಷಿತ ಗುರಿಗಳನ್ನು ಕಲಿಕೆಯ ಸ್ವರೂಪವನ್ನಾಗಿಸಲು ಮಹತ್ವದ ಪಾತ್ರವನ್ನು ವಹಿಸುತ್ತವೆ.

### ೨.೫ ಪಠ್ಯಗಳಲ್ಲಿ ಭಾಷಾ ಕೌಶಲಗಳ ಕುರಿತ ನಿರೀಕ್ಷೆಗಳು.

ಪಠ್ಯಪುಸ್ತಕ ಸಮಿತಿಯ ವಿದ್ವಾಂಸರು ಪ್ರೌಢಶಾಲಾ ಪ್ರಥಮ ಭಾಷಾ ಪಠ್ಯಗಳಲ್ಲಿ ಪಾಠ–ಪದ್ಯಗಳ ಅಭ್ಯಾಸದ ಬಳಿಕ ವಿದ್ಯಾರ್ಥಿಗಳಿಗೆ ಕೆಲವು ಚಟುವಟಿಕೆಗಳನ್ನು ನೀಡಿದ್ದಾರೆ. ಪಠ್ಯಪುಸ್ತಕವು ವಿದ್ಯಾರ್ಥಿಗಳಿಂದ ಅಂತಹ ಚಟುವಟಿಕೆಗಳನ್ನು ನಿರೀಕ್ಷಿಸುತ್ತದೆ.
"ಹಿಂದೂಸ್ಥಾನಕ್ಕೆ ಹಿಂದಿರುಗಿದುದು' ಗದ್ಯವನ್ನು ನಾಟಕ ರೂಪಕ್ಕೆ ಪರಿವರ್ತಿಸಿ.
ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿ, ಇತಿಹಾಸ ಇವುಗಳ ಮೇಲಿನ ಅಭಿಮಾನ ವ್ಯಕ್ತಪಡಿಸುವ ಕವಿತೆ ರಚಿಸುವ ಪ್ರಯತ್ನ ಮಾಡಿರಿ.
ಆಲೂರು ವೆಂಕಟರಾಯರ 'ಕರ್ನಾಟಕ ಗತ ವೈಭವ' ಚಿದಾನಂದ ಮೂರ್ತಿಯವರ 'ಕರ್ನಾಟಕ ಸಂಸ್ಕೃತಿ' ಕೃತಿಗಳನ್ನು ಓದಿ ಹೆಚ್ಚು ವಿಷಯಗಳನ್ನು ತಿಳಿಯಿರಿ.
'ಉತ್ತರನ ಪೌರುಷ'ವನ್ನು ಸಂಭಾಷಣಾ ರೂಪದಲ್ಲಿ ಬರೆದು ಅಭಿನಯಿಸಿರಿ.
ತ.ಸು. ಶ್ಯಾಮರಾಯರ 'ವಚನಭಾಗವತ' ಕೃತಿಯನ್ನು ಓದಿ.
ರಾಷ್ಟ್ರಕವಿ ಕುವೆಂಪು ಅವರ 'ಮಲೆನಾಡಿನ ಚಿತ್ರಗಳು' ಗದ್ಯ ಚಿತ್ರಗಳ ಸಂಕಲನವನ್ನು ಓದಿ.
ಡಾ.ಕೆ.ಸಿ.ಶಿವಾರೆಡ್ಡಿ ಅವರು ಸಂಪಾದಿಸಿರುವ 'ಕುವೆಂಪು ಸಮಗ್ರ ಗದ್ಯ' –ಸಂಪುಟ ೧ ಕೃತಿಯನ್ನು ಓದಿ. ಪ್ರೊ.ಜಿ.ವೆಂಕಟಸುಬ್ಬಯ್ಯ ಅವರು ಸಂಪಾದಿಸಿರುವ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮುದ್ರಿಸಿರುವ 'ಮುದ್ದಣ ಭಂಡಾರ'–ಸಂಪುಟ ೧ ಮತ್ತು ೨ ಕೃತಿಯನ್ನು ಓದಿ.
'ಕರುಣಾಳು ರಾಘವನಲ್ಲಿ ತಪ್ಪಿಲ್ಲ' ಭಾಗದ ಲಕ್ಷ್ಮಣ ಮತ್ತು ಸೀತೆಯರ ನಡುವೆ ನಡೆದ ಸಂಭಾಷಣೆಯನ್ನು ಸಂಗ್ರಹಿಸಿ, ಸೀತೆಯ ಮಾತುಗಳಲ್ಲಿನ ವ್ಯಂಗ್ಯ ಮತ್ತು ಪ್ರತಿಭಟನೆಯ ಅಂಶಗಳನ್ನು ಗುರುತಿಸಿ. ರಾಜಧರ್ಮವನ್ನು ಮರೆಸಲು ರಾಮನು ಕೌಟುಂಬಿಕ ಧರ್ಮವನ್ನು

ಕಡೆಗಣಿಸಿದನೆ? ಪರಿಶೀಲಿಸಿ. 'ಟಾಲ್‌ಸ್ಟಾಯ್ ಮಹರ್ಷಿಯ ಭೂರ್ಜ ವೃಕ್ಷಗಳು' ಕಥೆಯನ್ನು ನಾಟಕವಾಗಿ ರೂಪಾಂತರಿಸಿ. ಶಿವರಾಮಕಾರಂತರ "ಅಬೂವಿನಿಂದ ಬರಾಮಕ್ಕೆ" "ಅಪೂರ್ವ ಪಶ್ಚಿಮ", ವಿ.ಸೀ.ಯವರ "ಪಂಪಾಯಾತ್ರೆ" ಪ್ರಭುಶಂಕರರ "ಅಮೇರಿಕದಲ್ಲಿ ನಾನು ಮತ್ತು ಶಾಂತಿ" ಪ್ರವಾಸ ಕಥನಗಳನ್ನು ಓದಿರಿ.

'ಪರಿವರ್ತನೆ' ಪಾಠವನ್ನು ನಾಟಕ ಮಾಡಿ ಅಭಿನಯಿಸಿರಿ.

ಆರ್.ಸಿ.ಹಿರೇಮಠರು ಸಂಪಾದಿಸಿದ 'ಕನ್ನಡಕ್ಕೆ ಕಿಟೆಲ್ಲರ ಕೊಡುಗೆ' ಎಂಬ ಗ್ರಂಥವನ್ನು ಓದಿರಿ ಯಾವುದಾದರೊಂದು ದೊಡ್ಡಾಟದ ಪ್ರಸಂಗವನ್ನು ಮಾಡಿ ಪ್ರದರ್ಶಿಸಿರಿ.

ಗಂಗೆಯಂ ಮೀವಲ್ಲಿ ಎಂಬ ಮಾತಿಗೆ ಗಂಗೆಯಲ್ಲಿ ಮೀಯುವಾಗ ಎಂದು ಅರ್ಥ. ಇಲ್ಲಿ ಅಂ, ಎಂ ಹಳಗನ್ನಡದ ದ್ವಿತೀಯ ವಿಭಕ್ತಿಯು ಸಪ್ತಮಿಯ ಬದಲಿಗೆ ಬಳಕೆಯಾಗಿದೆ. ಈ ರೀತಿ ಒಂದು ವಿಭಕ್ತಿಯ ಸ್ಥಾನದಲ್ಲಿ ಇನ್ನೊಂದು ಪ್ರತ್ಯಯ ಬಳಕೆಯಾಗುವುದನ್ನು ವಿಭಕ್ತಿ ಪಲ್ಲಟ ಎಂದು ಕರೆಯುತ್ತಾರೆ. ಹೀಗೆ ಪಲ್ಲಟಗೊಂಡ ಪ್ರತ್ಯಯಗಳನ್ನು ಗುರುತಿಸಿ. ಪದ್ಯದಲ್ಲಿನ 'ಯೋಧ ಮತ್ತು ಹೆಂಗಸು' ನಡುವೆ ನಡೆದ ಸಂಭಾಷಣೆಯನ್ನು ನಾಟಕ ರೂಪದಲ್ಲಿ ಬರೆಯಿರಿ ಮತ್ತು ಅಭಿನಯಿಸಿ.

ಅಂಗಲೀ ಮಾಲಾ ಮತ್ತು ಬುದ್ಧನ ಸಂಭಾಷಣೆಯನ್ನು ಗದ್ಯರೂಪದಲ್ಲಿ ಬರೆಯಿರಿ. ನಾಟಕದ ಈ ದೃಶ್ಯವನ್ನು ಶಾಲಾ ಕಾರ್ಯಕ್ರಮದಲ್ಲಿ ಅಭಿನಯಿಸಿ.

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ 'ಭಾವ' ಹಾಗೂ ಕುವೆಂಪುರವರ 'ನೆನಪಿನ ದೋಣಿಯಲ್ಲಿ' ಕೃತಿಯನ್ನು ಓದಿ.

ದುರ್ಗಸಿಂಹನ 'ಪಂಚತಂತ್ರ'ದ ಮೂಲ ಕಥೆಗಳನ್ನು ಓದಿ.

ಗುಂಡ್ಮಿ ಚಂದ್ರಶೇಖರ ಐತಾಳರ 'ದುರ್ಗಸಿಂಹ ಕವಿಯ ಕರ್ಣಾಟಕ ಪಂಚತಂತ್ರದ ಗದ್ಯಾನುವಾದವನ್ನು ಓದಿ. ಎಸ್.ವಿ.ರಂಗಣ್ಣ ಅವರ 'ರಂಗಭಿನ್ನಪ' ಡಿ.ವಿ.ಜಿಯವರ 'ಉಮರನ ಒಸಗೆ' ಭರ್ತೃಹರಿಯ ಶತಕಗಳನ್ನು ಅರವಿಂದ ಮಾಲಗತ್ತಿಯವರ 'ನಾದ–ನಿನಾದ' ಕವನ ಸಂಕಲನವನ್ನು ಓದಿ.

ಅಂಬಳೆ ರಾಮಕೃಷ್ಣ ಶಾಸ್ತ್ರಿ ಅವರ 'ವಚನ ಭಾರತ': ಭಾರತ ದರ್ಶನ ಪ್ರಕಾಶನದವರ 'ಶ್ರೀಮನ್ಮಹಾಭಾರತ'ದ ಎಂಟನೆಯ ಸಂಪುಟದಲ್ಲಿ ಬರುವ 'ಯಕ್ಷ ಪ್ರಶ್ನೆ' ಭಾಗವನ್ನು ಓದಿ.

ದೇ.ಜವರೇಗೌಡ ಅವರು ಸಂಗ್ರಹಿಸಿ ಸಂಪಾದಿಸಿರುವ 'ಜನಪದ ಗೀತಾಂಜಲಿ', ವಿನೋಬ ವೆಂಕನಾಯಕ ಅವರು ಸಂಗ್ರಹಿಸಿ ಸಂಪಾದಿಸಿರುವ 'ಹಳ್ಳಿಯ ಹಾಡುಗಳು' ಗ್ರಂಥಗಳನ್ನು ಸಂಗ್ರಹಿಸಿ ಓದಿ.

'ನಿನಗೇಕೆಸಾಹಸದಾಡಂಬರ'ದ ಕಥೆಯನ್ನು ಹೊಸಗನ್ನಡದಲ್ಲಿ ಸಂಕ್ಷಿಪ್ತವಾಗಿ ಬರೆಯರಿ.

ಕುಮಾರವ್ಯಾಸ ಭಾರತದ ಅರಣ್ಯಪರ್ವ–ಆರನೆಯ ಸಂಧಿಯನ್ನು ಓದಿರಿ. ಕನ್ನಡ ಸಂಸ್ಕೃತಿ ಇಲಾಖೆ ಪ್ರಕಟಿಸಿರುವ 'ಸಮಗ್ರ ವಚನ ಸಂಪುಟ'ಗಳನ್ನು ಗ್ರಂಥಾಲಯದಲ್ಲಿ ಅವಲೋಕಿಸಿ.

'ಕಾಲಾಗ್ನಿರುದ್ರಂ ಪೊರಮಡುವವೋಲ್' ಪದ್ಯವನ್ನು ನಾಟಕವನ್ನಾಗಿ ಅಭಿನಯಿಸಿ.

ಭೀಮ-ದುರ್ಯೋಧನರ ಗದಾಯುದ್ಧದ ಸನ್ನಿವೇಶವನ್ನು ಕುಮಾರವ್ಯಾಸ ಹಾಗೂ ಪಂಪನ ಕಾವ್ಯಗಳಲ್ಲಿ ಓದಿ. ರನ್ನನ 'ಗದಾಯುದ್ಧ'ದ ಗದ್ಯಾನುವಾದವನ್ನು ಓದಿ.
ಕನ್ನಡ ನಾಡಿನ ಶಾಸನಗಳನ್ನು ಪಟ್ಟಿಮಾಡಿ.
ನಾಡು-ನುಡಿ-ಸಂಸ್ಕೃತಿಯ ಅಧ್ಯಯನ ಮಾಡಿ. ಪಂಪ ಭಾರತದಲ್ಲಿನ ಕನ್ನಡ ನಾಡಿನ ವರ್ಣನಾಭಾಗವನ್ನು ಸಂಗ್ರಹಿಸಿ ಓದಿ.
ಶಾಸನ ಸಂಗ್ರಹ ಪುಸ್ತಕದಲ್ಲಿನ ಶಾಸನಗಳ ಹೊಸಗನ್ನಡ ರೂಪಗಳನ್ನು ಅವಲೋಕಿಸಿ.
'ವಿಕ್ರಮಾರ್ಜುನ ವಿಜಯ', 'ಕವಿರಾಜಮಾರ್ಗ', 'ಶಾಸನ ಪದ್ಯ ಮಂಜರಿ' ಕೃತಿಗಳನ್ನು ಗಮನಿಸಿ. 'ಹಿರಣ್ಯಾಕ್ಷವಧೆ'ಯನ್ನು ನಾಟಕರೂಪವಾಗಿ ಪ್ರಯೋಗಿಸಿ.
ಸುಭಾಶ್‌ಚಂದ್ರ ಬೋಸರ ಜಯಂತಿಯಂದು ಬೋಸರ ಕುರಿತು ಚರ್ಚಾಗೋಷ್ಠಿ ಏರ್ಪಡಿಸಿ.
ಈ ಪಾಠವನ್ನು ಆಧರಿಸಿ ಸುಭಾಸರ ಬಗ್ಗೆ ಒಂದು ಕಿರುನಾಟಕ ಆಡಿರಿ.
ನಮ್ಮ ಬಲ' – ಈ ಪದ್ಯವನ್ನು ಹಾಡಿ ನೃತ್ಯಕ್ಕೆ ಅಳವಡಿಸಿ.
ಪ್ರಕೃತ 'ತ್ಯಾಗಮಯಿ' ಕಥೆಯಲ್ಲಿ ಬರುವ ಗೌರಿ ಪಾತ್ರವನ್ನು ಆಧರಿಸಿ ಸಂವಾದ ರಚಿಸಿ.
'ತಿಪ್ಪೇನಹಳ್ಳಿಯ ಮೇಷ್ಟ್ರು' ಪ್ರಸಂಗವನ್ನು ಏಕಾಂಕ ನಾಟಕವನ್ನಾಗಿ ರಚಿಸಿ, ಅಭಿನಯಿಸಿ.
'ಮಿತ್ರಪ್ರೇಮ' ಕಥೆಯನ್ನು ನಾಟಕರೂಪದಲ್ಲಿ ಬರೆದು ಅಭಿನಯಿಸಿ.
ದ.ರಾ.ಬೇಂದ್ರೆ, ಚಂದ್ರಶೇಖರ ಕಂಬಾರರ ಕವನಗಳನ್ನು ಓದಿ, ಹಾಡಿ, ಅಭಿನಯಿಸಿ.
ಕುವೆಂಪು, ಚೆನ್ನವೀರ ಕಣವಿ, ಹುಯಿಲಗೋಳ ನಾರಾಯಣರಾಯರು ರಚಿಸಿರುವ ಕನ್ನಡ ನಾಡಿನ ಕುರಿತಾದ ಕವಿತೆಗಳನ್ನು ಓದಿರಿ, ಹಾಡಿರಿ.
ಕುವೆಂಪುರವರ ಪ್ರಕೃತಿ ಗೀತೆಗಳನ್ನು ಸಂಗ್ರಹಿಸಿ ಶಾಲಾ ಸಮಾರಂಭಗಳಲ್ಲಿ ಹಾಡಿರಿ.
'ಕುರುಡು ಕಾಂಚಾಣ' ಪದ್ಯವನ್ನು ಹಾಡಿಕೊಂಡು ಅಭಿನಯಿಸಿ.
ವಚನಗಳ ಧ್ವನಿ ಸುರುಳಿಯನ್ನು ಆಲಿಸಿ, ರಾಗವಾಗಿ ಹಾಡಲು ಕಲಿಯಿರಿ.
'ಪ್ರಾರ್ಥನೆ ಗೀತೆ'ಗೆ ರಾಗ ಸಂಯೋಜಿಸಿ ಗುಂಪಿನಲ್ಲಿ ಹಾಡಿ.
'ನಮ್ಮ ಬಲ' – ಈ ಪದ್ಯವನ್ನು ಹಾಡಿ ನೃತ್ಯಕ್ಕೆ ಅಳವಡಿಸಿ.
'ಕುಣಿಗಲ್ ಕೆರೆ' ಪದ್ಯವನ್ನು ಸುಶ್ರಾವ್ಯವಾಗಿ ಹಾಡಿರಿ
'ಜಯಭಾರತ ಪುತ್ರಿ' ಕವಿತೆಯನ್ನು ಸಾಮೂಹಿಕವಾಗಿ ಹಾಡಿ.
'ಮಂಕುತಿಮ್ಮನ ಕಗ್ಗ' ದ ಧ್ವನಿ ಸುರುಳಿ ಕೇಳಿ.
ಎಸ್.ವಿ.ರಂಗಣ್ಣರ 'ರಂಗಭಿನ್ನಪ' ಡಿ.ವಿ.ಜಿಯವರ 'ಉಮರನ ಒಸಗೆ' ಭರ್ತೃಹರಿಯ ಶತಕಗಳನ್ನು ಓದಿ. ಅರವಿಂದ ಮಾಲಗತ್ತಿಯವರ 'ನಾದ-ನಿನಾದ' ಕವನ ಸಂಕಲನವನ್ನು ಓದಿ. ಪುರಂದರದಾಸರ ಕೃತಿಗಳನ್ನು, ಕನಕದಾಸರ ಕೀರ್ತನೆಗಳನ್ನು ಓದಿ. ದೇ.ಜವರೇಗೌಡ ಅವರು ಸಂಗ್ರಹಿಸಿ ಸಂಪಾದಿಸಿರುವ 'ಜನಪದ ಗೀತಾಂಜಲಿ', ವಿನೋಬ ವೆಂಕನಾಯಕ ಅವರು ಸಂಗ್ರಹಿಸಿ ಸಂಪಾದಿಸಿರುವ 'ಹಳ್ಳಿಯ ಹಾಡುಗಳು' ಗ್ರಂಥಗಳನ್ನು ಸಂಗ್ರಹಿಸಿ. ಕನ್ನಡ ಸಂಸ್ಕೃತಿ ಇಲಾಖೆ ಪ್ರಕಟಿಸಿರುವ 'ಸಮಗ್ರ ವಚನ ಸಂಪುಟ'ಗಳನ್ನು

ಗ್ರಂಥಾಲಯದಲ್ಲಿ ಅವಲೋಕಿಸಿ.
ಶಿವಶರಣೆಯರ ವಚನ ಸಂಪುಟದಿಂದ ಹೆಚ್ಚಿನ ವಚನಗಳನ್ನು ಸಂಗ್ರಹಿಸಿ.
ರಾಮಚಂದ್ರಶರ್ಮ ಅವರ ಇತರ ಕವಿತೆಗಳನ್ನು ಓದಿರಿ.
ಅಲ್ಲಮನ ಬೇರೆ ವಚನಗಳನ್ನು ಓದಿರಿ.
ಬೇರೆ ಬೇರೆ ವಚನಕಾರರ ವಚನಗಳನ್ನು ಓದಿರಿ.
ಸು.ರಂ.ಎಕ್ಕುಂಡಿಯವರ ಇನ್ನಿತರ ಕಥನ ಕವನಗಳನ್ನು ಸಂಗ್ರಹಿಸಿ ಓದಿರಿ.
ಕೈವಾರ ನಾರಾಯಣಪ್ಪನವರು ರಚಿಸಿರುವ ಕನ್ನಡದ ತತ್ವ ಪದಗಳನ್ನು ಸಂಗ್ರಹಿಸಿ ಓದಿ.
ಸಂತ ಶಿಶುನಾಳ ಷರೀಫರು ರಚಿಸಿರುವ ತತ್ವ ಪದಗಳನ್ನು ಸಂಗ್ರಹಿಸಿ ಓದಿ.
ದಲಿತ ಸಂವೇದನೆಗಳನ್ನೊಳಗೊಂಡ ಇತರ ಕವಿಗಳ ಪದ್ಯಗಳನ್ನು ಓದಿರಿ.
ವಚನಗಳ ಧ್ವನಿ ಸುರುಳಿಯನ್ನು ಆಲಿಸಿ, ರಾಗವಾಗಿ ಹಾಡಲು ಕಲಿಯಿರಿ.
ಮಲ್ಲಿಕಾರ್ಜುನ ಮನಸೂರರ ಧ್ವನಿ ಮುದ್ರಿಕೆಗಳನ್ನು ಕೇಳಿರಿ ಇನ್ನಷ್ಟು ಜನಪದ ತ್ರಿಪದಿಗಳನ್ನು ಓದಿ"[೩].

ಪಠ್ಯಪುಸ್ತಕ ನಿರ್ದೇಶನಾಲಯವು ಕನ್ನಡ ಭಾಷಾ ಕಲಿಕೆಯಲ್ಲಿ ವಿದ್ಯಾರ್ಥಿಗಳಿಂದ ಈ ಕೌಶಲಗಳನ್ನು ನಿರೀಕ್ಷಿಸುತ್ತದೆ ಮತ್ತು ಅಧ್ಯಾಪಕರು ವಿದ್ಯಾರ್ಥಿಗಳನ್ನು ಈ ಮಟ್ಟಕ್ಕೆ ತರಬೇಕೆಂದು ತಿಳಿಸಿದೆ. ಪಠ್ಯಪುಸ್ತಕ ನಿರ್ದೇಶನಾಲಯವು ಪ್ರೌಢಶಾಲಾ ಕನ್ನಡ ಪಠ್ಯಗಳಲ್ಲಿ ನಿರ್ದೇಶಿಸಿರುವ ಹಲವು ಚಟುವಟಿಕೆಗಳು ಹಾಗೂ ಶಿಕ್ಷಣ ಇಲಾಖೆಯು ನಿರ್ದೇಶಿಸಿರುವ ಕನ್ನಡ ಭಾಷಾ ಬೋಧನೆಯ ಉದ್ದೇಶಗಳು ಜೊತೆಗೆ ಬಿ.ಎಡ್ ತರಬೇತಿಯಲ್ಲಿ ಕನ್ನಡ ಅಧ್ಯಾಪಕರು ಕಲಿತಿರುವ ಬೋಧನಾ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ವಿದ್ಯಾರ್ಥಿಗಳಿಗೆ ಓದು, ಬರಹ, ಆಶುಭಾಷಣ, ಅಭಿನಯ ಹಾಗೂ ಗಾಯನ ಚಟುವಟಿಕೆಗಳನ್ನು ಕೈಗೊಳ್ಳಲಾಗಿದೆ.

ಬಿ.ಎಡ್ ಪಠ್ಯಗಳಲ್ಲಿಯೂ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಚಟುವಟಿಕೆಗಳನ್ನು ಹಮ್ಮಿಕೊಳ್ಳುವಾಗ, ಪಾಠ ಯೋಜನೆಯನ್ನು ಸಿದ್ಧಪಡಿಸಿಕೊಳ್ಳುವಾಗ ವಿದ್ಯಾರ್ಥಿಯನ್ನು ಅತ್ಯಂತ ಭಾಷಾ ಸಾಮರ್ಥ್ಯವನ್ನು ಹೊಂದಿದವನೆಂಬ ಹಿನ್ನೆಲೆಯಲ್ಲಿ ಉದ್ದಿಷ್ಟ ನಿರ್ದಿಷ್ಟಗಳನ್ನು ಹಾಕಿಕೊಳ್ಳಲಾಗುತ್ತದೆ. ಶಿಕ್ಷಣ ಇಲಾಖೆಯು ಕನ್ನಡ ಭಾಷಾ ಬೋಧನೆಯ ಉದ್ದೇಶಗಳ ಹಿನ್ನೆಲೆಯಲ್ಲಿ ಮಾತು, ಅಭಿನಯ, ಗಾಯನ ಕೌಶಲಗಳಲ್ಲಿ ವಿದ್ಯಾರ್ಥಿಗಳನ್ನು ಪಳಗಿಸಬೇಕು ಎಂಬ ನಿಲುವನ್ನೇ ಹೊಂದಿದೆ. ಕಲ್ಪಿತ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಹಾಗೂ ವಿದ್ಯಾರ್ಥಿಗಳು ಕನ್ನಡ ಭಾಷೆಯ ಆಲಿಸುವಿಕೆ, ಮಾತನಾಡುವಿಕೆ, ಓದು ಹಾಗೂ ಬರಹಗಳ ಕೌಶಲಗಳನ್ನು ಸಂಪೂರ್ಣವಾಗಿ ಕರಗತಮಾಡಿಕೊಂಡಿದ್ದಾರೆಂಬ ಕಲ್ಪನೆಯ ಆಧಾರದ ಮೇಲೆ ಇವುಗಳನ್ನು ರಚಿಸಲಾಗಿದೆ. ಈ ಉದ್ದೇಶಗಳು ಎಷ್ಟರಮಟ್ಟಿಗೆ ತರಗತಿಯ ವಾಸ್ತವದಲ್ಲಿ ನಡೆಯುತ್ತಿವೆ ಎಂಬುದನ್ನು ತಿಳಿದುಕೊಳ್ಳಲು ಮೇಲಿನ ಚಟುವಟಿಕೆಗಳನ್ನು ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಶಾಲೆಗಳಲ್ಲಿ ನಿರ್ವಹಿಸಲಾಗಿದೆ.

## ೨.೬ ಚಟುವಟಿಕೆಗಳ ತರಗತಿವಾರು ವಿಶ್ಲೇಷಣೆ:

ಪ್ರೌಢಶಾಲಾ ವಿದ್ಯಾರ್ಥಿಗಳು ಕನ್ನಡ ಭಾಷಾ ಕಲಿಕೆಯ ಸಂದರ್ಭದಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಗುರುತಿಸುವುದು ಹಾಗೂ ರಾಷ್ಟ್ರೀಯ ಶಿಕ್ಷಣ ನೀತಿಯು ನಿರ್ದೇಶಿಸಿದ ಭಾಷಾ ಉದ್ದೇಶಗಳಲ್ಲಿ, ಕನ್ನಡ ಭಾಷಾ ಬೋಧನೆಯ ಉದ್ದೇಶಗಳು ಎಷ್ಟರಮಟ್ಟಿಗೆ ಸಾಧಿತವಾಗುತ್ತಿವೆ ಎಂಬುದನ್ನು ತಿಳಿದುಕೊಳ್ಳುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದ್ದುದರಿಂದ, ಈ ಉದ್ದೇಶ ಸಾಧನೆಗೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೆಲವು ಚಟುವಟಿಕೆಗಳನ್ನು ಕೈಗೊಳ್ಳಲಾಗಿದೆ. ಅಧ್ಯಯನಕ್ಕೆ ಕರ್ನಾಟಕದ ೨೧ ಜಿಲ್ಲೆಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಪ್ರತೀ ಜಿಲ್ಲೆಯ ೨ ಸರ್ಕಾರಿ ಕನ್ನಡ ಮಾಧ್ಯಮ ಪ್ರೌಢಶಾಲೆಗಳನ್ನು ಹಾಗೂ ೧ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಒಟ್ಟು ೬೩ ಪ್ರೌಢಶಾಲೆಗಳ ೧೫೦೦ ವಿದ್ಯಾರ್ಥಿಗಳನ್ನು ಓದು, ಬರಹ, ಆಶುಭಾಷಣ, ಗೀತಗಾಯನ, ಅಭಿನಯಗಳ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲಾಗಿದೆ.

ಚಟುವಟಿಕೆಗಳಲ್ಲಿ ಪಾಲ್ಗೊಂಡ ಮಕ್ಕಳನ್ನು ಸೂಕ್ಷ್ಮವಾಗಿ ಗಮನಿಸಿ, ಮೌಲ್ಯಮಾಪನ ಮಾಡಿ ಕನ್ನಡ ಭಾಷಾ ಕಲಿಕೆ ಹಾಗೂ ಬೋಧನೆಯ ಕುರಿತಾದ ಕೆಲವು ಸಮಸ್ಯೆಗಳನ್ನು ಗುರುತಿಸಲಾಗಿದೆ. ಕನ್ನಡ ಕಲಿಕೆಯ ವಿಚಾರವಾಗಿ ತರಗತಿಯ ಆಧ್ಯಾಪಕರೊಂದಿಗೆ, ಭಾಷಾ ಶಿಕ್ಷಕರೊಂದಿಗೆ ಹಾಗೂ ಮುಖ್ಯೋಪಾಧ್ಯಾಯರೊಂದಿಗೆ ಚರ್ಚೆಯನ್ನು ನಡೆಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಸಾಂದರ್ಭಿಕವಾಗಿ ಅವಲೋಕನ ವಿಧಾನವನ್ನೂ ಅಳವಡಿಸಿಕೊಳ್ಳಲಾಗಿದೆ. ಇವೆಲ್ಲವುಗಳ ಆಧಾರದ ಮೇಲೆ ಚಟುವಟಿಕೆಗಳ ವಿವರವಾದ ವಿಶ್ಲೇಷಣೆಯನ್ನು ನಡೆಸಲಾಗಿದೆ. ಈ ವಿಶ್ಲೇಷಣೆಯ ಆಧಾರದ ಮೇಲೆ ಕೆಲವು ನಿರ್ಧಾರಗಳಿಗೆ ಬರಲಾಗಿದೆ. ಸಮಸ್ಯೆಗಳನ್ನು ವಿಶ್ಲೇಷಿಸಿ ಕಾರಣಗಳನ್ನು ಗುರುತಿಸಲಾಗಿದೆ. ಹಾಗೂ ಕೆಲವು ಪರಿಹಾರಗಳನ್ನು ಕಂಡುಕೊಳ್ಳಲಾಗಿದೆ.

ನೂತನ ಶಿಕ್ಷಣ ನೀತಿಯಲ್ಲಿನ ಪ್ರಥಮಭಾಷೆ ಕನ್ನಡದ ಬೋಧನೆಯ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ಓದುವಿಕೆ, ಬರವಣಿಗೆ, ಆಶುಭಾಷಣ, ಅಭಿನಯ ಹಾಗೂ ಗಾಯನದ ಚಟುವಟಿಕೆಗಳನ್ನು ಪ್ರೌಢಶಾಲಾ ತರಗತಿಗಳಲ್ಲಿ ನಡೆಸಿ, ಆ ಚಟುವಟಿಕೆಗಳ ವಿಶ್ಲೇಷಣೆಯನ್ನು ಇಲ್ಲಿ ಮಾಡಲಾಗಿದೆ. ಎಂಟು, ಒಂಭತ್ತು ಹಾಗೂ ಹತ್ತನೆಯ ತರಗತಿಗಳಿಗೆ ನಡೆಸಿದ ಚಟುವಟಿಕೆಗಳ ವಿಶ್ಲೇಷಣೆಯನ್ನು ತರಗತಿವಾರು ಪ್ರತ್ಯೇಕವಾಗಿ ವಿಶ್ಲೇಷಣೆಯನ್ನು ಮಾಡಲಾಗಿದೆ. ವಿಶ್ಲೇಷಣೆಯ ಅಗತ್ಯಕ್ಕೆ ಅನುಗುಣವಾಗಿ ಸಂಖ್ಯಾವಿವರಗಳನ್ನು ವಿವರಿಸಲು ನಕ್ಷೆಯ ಮಾದರಿಗಳನ್ನು ಬಳಸಿಕೊಳ್ಳಲಾಗಿದೆ. ಶೇಕಡಾವಾರು ಪ್ರಮಾಣಗಳನ್ನು ವಿಶ್ಲೇಷಿಸಲು ಆಯ್ಕೆಮಾಡಿಕೊಂಡ ವಿದ್ಯಾರ್ಥಿಗಳ ಗುಂಪನ್ನು ಶೇಕಡಾವಾರು ಪ್ರಮಾಣಗಳಿಗೆ ಪರಿವರ್ತಿಸಿ ನಕ್ಷೆಗಳ ಮೂಲಕ ತಿಳಿಸಲಾಗಿದೆ.

## ೨.೭ ಓದುವಿಕೆ.

ಅಮೂರ್ತ ರೂಪದ ಭಾಷೆಗೆ ಮೂರ್ತರೂಪ ಬರುವುದು ಲಿಪಿಸಂಕೇತಗಳಿಂದ. ಲಿಪಿ ಸಂಕೇತಗಳನ್ನು ಗ್ರಹಿಸಿ ಉಚ್ಚರಿಸುವುದೇ ಓದುವಿಕೆ. ಧ್ವನ್ಯಂಗಗಳಿಗೆ ಕ್ರಮಬದ್ಧವಾದ ತರಬೇತಿಯನ್ನು ನೀಡಿ, ಲಿಪಿ ಗ್ರಹಿಕೆಯನ್ನು ಸೂಕ್ತ ರೀತಿಯ ಬೋಧನೆಯ ಮೂಲಕ ವಿದ್ಯಾರ್ಥಿಗಳಿಗೆ ನೀಡಿದಲ್ಲಿ ಓದುವಿಕೆ ಪಕ್ವವಾಗುತ್ತದೆ. ೧೯೮೬ ರ ರಾಷ್ಟ್ರೀಯ ಶಿಕ್ಷಣನೀತಿಯ ಆಧಾರದ ಮೇಲೆ ಜಾರಿಗೆ ಬಂದಿರುವ ಹೊಸ ಪಠ್ಯವಸ್ತುವಿನ ಪ್ರಕಾರ ಪ್ರಥಮಭಾಷೆ ಕನ್ನಡದ ಬೋಧನೆಯ ಉದ್ದೇಶಗಳಲ್ಲಿ ಓದುವಿಕೆಗೆ ಸಂಬಂಧಿಸಿದಂತೆ ಈ ಕೆಳಗಿನ ಉದ್ದೇಶಗಳಿವೆ.

❖ ಮಕ್ಕಳಲ್ಲಿ ಆಲಿಸುವ, ಗ್ರಹಿಸುವ ಮತ್ತು ವೇಗವಾಗಿ ಓದುವ ಸಾಮರ್ಥ್ಯವನ್ನು ಅಭಿವೃದ್ಧಿಗೊಳಿಸುವುದು.

❖ ಮೌಖಿಕ ಮತ್ತು ಲಿಖಿತ ಅಭಿವ್ಯಕ್ತಿಯ ಸಾಮರ್ಥ್ಯವನ್ನು ಬೆಳೆಸುವುದು.

❖ ಜ್ಞಾನಾರ್ಜನೆಗಾಗಿ, ಸಾಹಿತ್ಯಾಭಿರುಚಿಗಾಗಿ, ಅಂತರ್ ದೃಷ್ಟಿಗಾಗಿ, ಆನಂದಕ್ಕಾಗಿ ಮಕ್ಕಳು ಸ್ವತಂತ್ರವಾಗಿ ಓದಲು ಸಮರ್ಥರಾಗುವಂತೆ ಮಾಡುವುದು.

❖ ವಾಕ್ಯಬಂಧಗಳನ್ನು ಅರ್ಥಮಾಡಿಕೊಂಡು, ಪದಸಂಪತ್ತಿಯನ್ನು ವೃದ್ಧಿಸಿಕೊಂಡು, ಉಚ್ಚಾರಣೆಯನ್ನು ಸ್ಪಷ್ಟಗೊಳಿಸಿಕೊಂಡು ಭಾಷೆಯನ್ನು ದೋಷರಹಿತವಾಗಿ, ನಿಖರವಾಗಿ ಮತ್ತು ಪರಿಣಾಮಕಾರಿಯಾಗಿ ಬಳಸುವ ಸಾಮರ್ಥ್ಯವನ್ನು ಹೆಚ್ಚಿಸುವುದು.

ಪ್ರೌಢಶಾಲಾ ಶಿಕ್ಷಕರನ್ನು ರೂಪಿಸುವ ಶಿಕ್ಷಕ-ಶಿಕ್ಷಣ ಮಹಾವಿದ್ಯಾಲಯಗಳಲ್ಲಿ ಡಾ. ಬೆಂಜಮಿನ್ ಬ್ಲೂಮ್ ರವರು ಪ್ರತಿಪಾದಿಸಿದ ಬೋಧನ ಉದ್ದಿಷ್ಟಗಳನ್ನು ಅಳವಡಿಸಿಕೊಳ್ಳಲಾಗಿದೆ. ಬಿ.ಎಡ್ ತರಬೇತಿಯಲ್ಲಿ ಇದೇ ವಿಧಾನವನ್ನು ಸಾಂಪ್ರದಾಯಿಕ ಪದ್ಧತಿಯಲ್ಲಿಯೇ ಕಲಿಸಲಾಗುತ್ತಿದೆ. ಇಲ್ಲಿನ ಕಲಿಕೆಯ ಪ್ರಕಾರ ಉದ್ದೇಶಗಳು ವ್ಯಾಪಕವಾದವು. ಈ ಉದ್ದೇಶಗಳ ಸಾಧನೆಗಾಗಿ ಅವುಗಳನ್ನು 'ಉದ್ದಿಷ್ಟ'ಗಳೆಂದು ವಿಭಾಗಿಸಿಕೊಳ್ಳಲಾಗಿದೆ. ಉದ್ದಿಷ್ಟಗಳನ್ನು ಮತ್ತಷ್ಟು ಸ್ಪಷ್ಟವಾಗಿ, ಖಚಿತವಾದ ಚಟುವಟಿಕೆಗಳ ಮೂಲಕ ತಿಳಿಸುವ ಪದಗಳನ್ನು 'ನಿರ್ದಿಷ್ಟ'ಗಳೆಂದು ಕರೆಯಲಾಗಿದೆ. ಬಿ.ಎಡ್ ಪಠ್ಯಗಳ ಪ್ರಕಾರ ಓದುವಿಕೆಯ ನಿರ್ದಿಷ್ಟಗಳು ಹೀಗಿವೆ.

❖ "ಕಥೆ-ಕಾದಂಬರಿ-ನಾಟಕ-ಕವಿತೆ-ಪ್ರಬಂಧಗಳು-ಜೀವನಚರಿತ್ರೆ-ಆತ್ಮಚರಿತ್ರೆ-ವ್ಯಕ್ತಿಚಿತ್ರ-ಪ್ರವಾಸಕಥನ-ಪತ್ರಗಳು-ವಾರ್ತಾಪತ್ರಗಳು-ಮೆರವಣಿಗೆಗಳು-ನಿರ್ದೇಶನಗಳು-ಸೂಚನೆಗಳು-ಜಾಹೀರಾತುಗಳು ಇತ್ಯಾದಿಗಳನ್ನು ತಾಳ್ಮೆ ಮತ್ತು ಏಕಾಗ್ರತೆಯಿಂದ ಓದುತ್ತಾನೆ.

- ಸ್ಪಷ್ಟ ಉಚ್ಚಾರ, ಸೂಕ್ತ ಸ್ವರಭಾರ, ಒತ್ತು, ವೇಗ ಹಾಗೂ ನಿಲುಗಡೆಯಿಂದ ಗಟ್ಟಿಯಾಗಿ ಓದುತ್ತಾನೆ.
- ವಾಕ್ಯ ಚಿಹ್ನೆಗಳನ್ನು ಗುರುತಿಸಿ ಓದುತ್ತಾನೆ.
- ವಸ್ತುವಿನಲ್ಲಿ ವ್ಯಕ್ತವಾದ ಭಾವನೆಗಳಿಗೆ ತಕ್ಕಂತೆ ಗಟ್ಟಿಯಾಗಿ-ಮೌನವಾಗಿ ಓದುತ್ತಾನೆ.
- ಪದಗಳು, ಗಾದೆಗಳು, ವಾಗ್ರೂಢಿಗಳು ಹಾಗು ಮಾತಿನ ರೀತಿಗಳ ಅರ್ಥವನ್ನು ಗ್ರಹಿಸುತ್ತಾನೆ.
- ವಾಚನ ಸಾಮಗ್ರಿಗೆ ಸೂಕ್ತ ಶೀರ್ಷಿಕೆ ಕೊಡುತ್ತಾನೆ.
- ಮುಖ್ಯಾಭಿಪ್ರಾಯಗಳು, ವಿಚಾರಗಳು ಹಾಗೂ ಸಂಗತಿಗಳನ್ನು ಗ್ರಹಿಸುತ್ತಾನೆ.
- ವಿವಿಧ ವಿಚಾರ, ಸಂಗತಿಗಳ ನಡುವೆ ಸಂಬಂಧ ಕಲ್ಪಿಸುತ್ತಾನೆ.
- ಲೇಖಕನ ಇಂಗಿತವನ್ನು ಗ್ರಹಿಸುತ್ತಾನೆ.
- ಅಭಿವ್ಯಕ್ತಿ ಕ್ರಮವನ್ನು ಪ್ರಶಂಸಿಸುತ್ತಾನೆ.
- ಸಂಗತಿಗಳು, ಭಾವನೆಗಳು ಹಾಗೂ ವಿಚಾರಗಳ ಬೆಲೆ ಕಟ್ಟುತ್ತಾನೆ.
- ತಾನು ಈ ಹಿಂದೆ ಓದಿದ ಸಾಮಗ್ರಿಯನ್ನು ಈಗ ಓದಿದ ಸಾಮಗ್ರಿಯೊಂದಿಗೆ ಹೋಲಿಸುತ್ತಾನೆ"[೬].

ವಿದ್ಯಾರ್ಥಿಗಳು ಕನ್ನಡ ಭಾಷೆಯಲ್ಲಿ ಸಂಪೂರ್ಣ ಹಿಡಿತಸಾಧಿಸಿದ್ದಾರೆಂಬ ಕಲ್ಪನೆಯ ಆಧಾರದ ಮೇಲೆ ಮೇಲಿನ ಉದ್ದಿಷ್ಟ ನಿರ್ದಿಷ್ಟಗಳನ್ನು ರೂಪಿಸಲಾಗಿದೆ. ಪಠ್ಯಪುಸ್ತಕ ನಿರ್ದೇಶನಾಲಯವು ಕಲ್ಪಿತ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪಠ್ಯಗಳನ್ನು ತಯಾರಿಸುತ್ತಿದೆ. ವಿದ್ಯಾರ್ಥಿಗಳು ಕನ್ನಡ ಭಾಷೆಯ ಕೌಶಲಗಳಲ್ಲಿ ಪ್ರಭುತ್ವಸಾಧಿಸಿದ್ದಾರೆಂಬ ಕಲ್ಪನೆಯಿಂದ ಪಠ್ಯಪುಸ್ತಕಗಳನ್ನು ಹಾಗೂ ಚಟುವಟಿಕೆಗಳನ್ನು ರಚಿಸಲಾಗುತ್ತಿದೆ. ವಾಸ್ತವ ಚಿತ್ರಣವು ಇದಕ್ಕೆ ಸಂಪೂರ್ಣವಾಗಿ ಭಿನ್ನವಾಗಿದ್ದು ವಾಸ್ತವದ ವಿದ್ಯಾರ್ಥಿಗಳಿಗೂ ಕಲ್ಪಿತ ವಿದ್ಯಾರ್ಥಿಗಳಿಗೂ ಬಹಳಷ್ಟು ವ್ಯತ್ಯಾಸಗಳಿರುವುದರಿಂದ ತರಗತಿಯಲ್ಲಿನ ಪಠ್ಯ ಬೋಧನೆಯು ವಿದ್ಯಾರ್ಥಿಗಳಲ್ಲಿ ಅಪೇಕ್ಷಿತ ಸಾಧನೆಯನ್ನು ತರಲು ವಿಫಲವಾಗುತ್ತಿದೆ.

ಏಳು-ಎಂಟು ವರ್ಷಗಳ ನಿರಂತರ ಹಾಗೂ ಸಮಗ್ರ ಕಲಿಕೆಯ ಪರಿಣಾಮಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪಾಠಯೋಜನೆಯ ಸಂದರ್ಭಗಳಲ್ಲಿ ಮತ್ತು ಶಿಕ್ಷಕರ ಸೇವಾಪೂರ್ವ ಹಾಗೂ ಸೇವಾಂತರ್ಗತ ತರಬೇತಿಗಳಲ್ಲಿ ಇಂತಹ ನಿರ್ದಿಷ್ಟಗಳನ್ನು ಬಳಸಿಕೊಳ್ಳಬೇಕಾಗುತ್ತದೆ. ಇಷ್ಟು ದೀರ್ಘ ಅವಧಿಯ ಬೋಧನೆಯಿಂದ ಆ ಮಟ್ಟದ ಜ್ಞಾನ ಸಿದ್ಧಿಸಬೇಕಾಗಿರುವುದು ಅವಶ್ಯವಾಗುತ್ತದೆ. ಏಳು ವರ್ಷಗಳ ನಿರಂತರ ಕಲಿಕೆಯ ದೃಷ್ಟಿಯ ಹಿನ್ನೆಲೆಯಲ್ಲಿ ಪ್ರಸ್ತುತ ನಿರ್ದಿಷ್ಟಗಳು ಸಕಾಲಿಕವೆನಿಸುತ್ತವೆ. ಆದರೆ ವಾಸ್ತವದಲ್ಲಿ ವಿದ್ಯಾರ್ಥಿಗಳು ನಿರೀಕ್ಷಿತ ಮಟ್ಟವನ್ನು ತಲುಪಿಲ್ಲದಿರುವುದು ಅಧ್ಯಯನದ ಸಂದರ್ಭದಲ್ಲಿ ಕಂಡುಬಂದಿದೆ.

### ೨.೭.೧ ತರಗತಿಯ ವಾಸ್ತವ:

ಸಾರ್ವಜನಿಕ ಶಿಕ್ಷಣ ಇಲಾಖೆಯು ನಿಗದಿಪಡಿಸಿದ ಓದುವಿಕೆಯ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ರಾಜ್ಯದ ವಿವಿಧ ಜಿಲ್ಲೆಗಳ ಎಂಟು, ಒಂಭತ್ತು ಹಾಗೂ ಹತ್ತನೆಯ ತರಗತಿಯ ವಿದ್ಯಾರ್ಥಿಗಳನ್ನು ಕ್ಷೇತ್ರಕಾರ್ಯದ ಪ್ರಯೋಗಕ್ಕಾಗಿ ಬಳಸಿಕೊಳ್ಳಲಾಗಿದೆ. ಒಂದು ತರಗತಿಯಿಂದ ಐದು ವಿದ್ಯಾರ್ಥಿಗಳನ್ನು ಯಾದೃಚ್ಛಿಕವಾಗಿ ಆಯ್ಕೆ ಮಾಡಿಕೊಂಡು ಆಯಾ ತರಗತಿಯ ಪಠ್ಯದಿಂದ ಆಯ್ದ ಐದು ವಾಕ್ಯಗಳನ್ನು ಓದಿಸಲಾಗಿದೆ. ವಾಕ್ಯಗಳನ್ನು ಸ್ವರ, ವ್ಯಂಜನ, ಅರ್ಧಸ್ವರ, ಗುಣಿತಾಕ್ಷರ, ಒತ್ತಕ್ಷರ, ಅಲ್ಪಪ್ರಾಣ, ಮಹಾಪ್ರಾಣ, ಅನುನಾಸಿಕ, ಹಳಗನ್ನಡ ಇತ್ಯಾದಿ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಲಾಗಿದೆ.

ಭಾಷಾಕಲಿಕೆಗೆ ಪಠ್ಯಪುಸ್ತಕ ಸಹಜ. ಪಠ್ಯವಿದ್ದಮೇಲೆ ಅದರೊಳಗೆ ನಿಗದಿಪಡಿಸಿರುವ ಪಾಠ, ಪದ್ಯ, ವ್ಯಾಕರಣಗಳನ್ನು ನಿಗದಿತ ಅವಧಿಯೊಳಗೆ ಅಧ್ಯಾಪಕರು ಬೋಧಿಸಬೇಕೆಂಬುದೂ ಸಹಜ ಮತ್ತು ವಾಸ್ತವ. ಬೋಧನೆಯ ಬಳಿಕ ಮೌಲ್ಯಮಾಪನ ಮಾಡುವುದೂ ಸಹಜ ಮತ್ತು ವಾಸ್ತವ. ನೂರು ಅಂಕಗಳಿಗೆ ಮೂವತ್ತೈದು ಅಂಕ ತೆಗೆದರೂ ಸಾಕು ಅದು ಉತ್ತೀರ್ಣತೆಗೆ ಮಾನದಂಡವೆಂಬುದೂ ಸಹಜ ಮತ್ತು ವಾಸ್ತವ. ಪಠ್ಯದಿಂದಾಚೆಯ ಯಾವ ವಿಚಾರಗಳನ್ನೂ ವಿದ್ಯಾರ್ಥಿಯ ಮೌಲ್ಯಮಾಪನಕ್ಕೆ ಬಳಸಬೇಕಾಗಿಲ್ಲವೆಂಬುದೂ ಸಹಜ ಮತ್ತು ವಾಸ್ತವ. ಈ ಎಲ್ಲಾ ವಿಚಾರಗಳನ್ನು ಸಹಜ ಮತ್ತು ವಾಸ್ತವವೆಂದು ಸರ್ಕಾರ, ಇಲಾಖೆ ಮತ್ತು ಸಮಾಜಗಳು ಒಪ್ಪಿಕೊಂಡಿರುವ ಕಾರಣ ಇದರೊಳಗಿರುವ ಅನೇಕ ಮೂಲಭೂತ ಸಮಸ್ಯೆಗಳು ಕಾಣದೇ ಇರುವುದೂ ಅಷ್ಟೇ ಸಹಜ ಮತ್ತು ವಾಸ್ತವ. ಅಂತಹ ವಾಸ್ತವದ ಹಾಗೂ ತುರ್ತಾಗಿ ಬಗೆಹರಿಸಬೇಕಾದ ಸಮಸ್ಯೆಗಳನ್ನು ಕಂಡುಕೊಳ್ಳುವ ಉದ್ದೇಶದ ಹಿನ್ನೆಲೆಯಲ್ಲಿ ಚಟುವಟಿಕೆಗಳ ವಿಶ್ಲೇಷಣೆಯನ್ನು ಮಾಡಲಾಗಿದೆ.

ಓದುವಿಕೆಯ ಚಟುವಟಿಕೆಯಲ್ಲಿ ನಿಖರತೆಯನ್ನು ಕಾಯ್ದುಕೊಳ್ಳಲು, ಆಯಾ ತರಗತಿಯ ಕನ್ನಡ ಪಠ್ಯಪುಸ್ತಕಗಳಿಂದ ವಿವಿಧ ರೀತಿಯ ಇಪ್ಪತ್ತೈದು ವಾಕ್ಯಗಳನ್ನು ಆಯ್ದುಕೊಂಡು, ಐದು ಪ್ರತ್ಯೇಕ ಕಾಗದಗಳಲ್ಲಿ ಬರೆದಿಟ್ಟುಕೊಳ್ಳಲಾಗಿತ್ತು. ಯಾದೃಚ್ಛಿಕವಾಗಿ ಆಯ್ಕೆ ಮಾಡಿಕೊಂಡ ವಿದ್ಯಾರ್ಥಿಗಳಿಗೆ ಒಂದೊಂದು ಕಾಗದವನ್ನು ನೀಡಿ ಅದರಲ್ಲಿರುವ ಐದು ವಾಕ್ಯಗಳನ್ನು ಓದಿಸಲಾಗಿದೆ. ಅರವತ್ತ ಮೂರು ಶಾಲೆಗಳಿಂದ ಮುನ್ನೂರು ವಿದ್ಯಾರ್ಥಿಗಳನ್ನು ಈ ಕೌಶಲಕ್ಕಾಗಿ ಬಳಸಿಕೊಳ್ಳಲಾಗಿದೆ. ವಿದ್ಯಾರ್ಥಿಗಳು ಓದುತ್ತಿರುವಾಗ ಮಾಡುತ್ತಿದ್ದ ವ್ಯತ್ಯಾಸಗಳನ್ನು ಪ್ರತ್ಯೇಕವಾಗಿ ಮೌಲ್ಯಮಾಪನ ತಖ್ತೆಯಲ್ಲಿ ಗುರುತಿಸಿಕೊಳ್ಳಲಾಗಿದೆ. ನಂತರ ವಿದ್ಯಾರ್ಥಿಗಳ ಓದುವಿಕೆಯ ಚಟುವಟಿಕೆಯನ್ನು ಅವರು ಮಾಡಿದ ಭಾಷಾ ವ್ಯತ್ಯಾಸದ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ವಿಶ್ಲೇಷಣೆಯ ವಿವರ ಹೀಗಿದೆ.

ಅ) ಎಂಟನೆಯ ತರಗತಿ. ಆಯ್ಕೆ ಮಾಡಿದ ವಿದ್ಯಾರ್ಥಿಗಳ ಸಂಖ್ಯೆ ೩೦೦




ಯಾದೃಚ್ಚಿಕವಾಗಿ ತರಗತಿಯಿಂದ ತಲಾ ಐದು ವಿದ್ಯಾರ್ಥಿಗಳಂತೆ ಒಟ್ಟು ೩೦೦ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿಕೊಂಡು ಪ್ರತ್ಯೇಕ ಕಾಗದಗಳಲ್ಲಿ ಬರೆದಿರುವ ಐದು ವಾಕ್ಯಗಳನ್ನು ಓದಿಸಿದಾಗ, ಕೊಟ್ಟ ವಾಕ್ಯಗಳಲ್ಲಿ

| | |
|---|---|
| ೫ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ೨೦ |
| ೪ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ೩೨ |
| ೩ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ೭೮ |
| ೨ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ೬೦ |
| ೧ ವಾಕ್ಯವನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ೫೦ |
| ೫ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರ ಸಂಖ್ಯೆ | ೬೦ |

ಎಂಟನೆಯ ತರಗತಿಯಲ್ಲಿ ಬಹಳಷ್ಟು ವಿದ್ಯಾರ್ಥಿಗಳು ಲಿಪಿ ಗ್ರಹಿಕೆಯ ಹಂತದಲ್ಲಿಯೇ ಸಮಸ್ಯೆಗಳನ್ನೆದುರಿಸುತ್ತಿದ್ದಾರೆ. ಅಕ್ಷರಗಳನ್ನು ಗುರುತಿಸುವಲ್ಲಿ ವಿಫಲರಾಗುತ್ತಿದ್ದಾರೆ. ಭಾಷೆಯ ಮೂಲಭೂತ ಕೌಶಲವಾದ ಓದುವಿಕೆಯಲ್ಲಿ ವಿದ್ಯಾರ್ಥಿಗಳು ಹಿಂದುಳಿದಿದ್ದಾರೆ. ಮುನ್ನೂರು ವಿದ್ಯಾರ್ಥಿಗಳಲ್ಲಿ ನೂರಾ ಎಪ್ಪತ್ತು ವಿದ್ಯಾರ್ಥಿಗಳು ವ್ಯತ್ಯಾಸ ಮಾಡದೆ ನಿರರ್ಗಳವಾಗಿ ಓದಲಾರರು. ಎಂಟನೆಯ ತರಗತಿಯ ಕನ್ನಡ ಪಠ್ಯವನ್ನು ಸ್ವಕಲಿಕೆಯಲ್ಲಿ ಅರಿತುಕೊಳ್ಳಲು ಬಹುತೇಕ ವಿದ್ಯಾರ್ಥಿಗಳು ವಿಫಲರಾಗುತ್ತಿದ್ದಾರೆ.

ಎಂಟನೆಯ ತರಗತಿ. ಓದುವಿಕೆಯ ಶೇಕಡಾವಾರು ಲೆಕ್ಕಾಚಾರ




| | |
|---|---|
| ೫ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೬.೬೬ |
| ೪ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೧೦.೬೬ |
| ೩ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೨೬ |
| ೨ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೨೦ |
| ೧ ವಾಕ್ಯವನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೧೬.೬೬ |
| ೫ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರ ಸಂಖ್ಯೆ | ಶೇಕಡಾ ೨೦ |

ಎಂಟನೆಯ ತರಗತಿಯ ಶೇಕಡಾ ೫೬.೬೬ ರಷ್ಟು ವಿದ್ಯಾರ್ಥಿಗಳು ಅವರದ್ದೇ ತರಗತಿಯ ಕನ್ನಡ ಪಠ್ಯದ ಆಯ್ದ ಐದು ವಾಕ್ಯಗಳಲ್ಲಿ ಎರಡು ವಾಕ್ಯಗಳನ್ನೂ ಕೂಡ ವ್ಯತ್ಯಾಸ ಮಾಡದೆ ಓದಲು ಬಾರದವರಿದ್ದಾರೆ. ಕೆಲವು ವಿದ್ಯಾರ್ಥಿಗಳು ಸ್ವರಾಕ್ಷರ ಹಾಗೂ ವ್ಯಂಜನಾಕ್ಷರಗಳನ್ನು ಗುರುತಿಸುವಲ್ಲಿಯೂ ಗೊಂದಲವನ್ನು ಮಾಡಿಕೊಳ್ಳುತ್ತಾರೆ. ಶೇಕಡಾ ೫೦ ಕ್ಕಿಂತಲೂ ಹೆಚ್ಚಿನ ವಿದ್ಯಾರ್ಥಿಗಳು ಪಠ್ಯ ಪುಸ್ತಕವನ್ನು ಸ್ವಕಲಿಕೆಯ ಮೂಲಕ ಅಭ್ಯಾಸ ಮಾಡಲು ಅಶಕ್ತರಾಗಿದ್ದಾರೆ. ಶೇಕಡಾ ೬.೬೬ ರಷ್ಟು ವಿದ್ಯಾರ್ಥಿಗಳು ಮಾತ್ರ ನಿರರ್ಗಳವಾಗಿ ಓದಬಲ್ಲವರಿದ್ದಾರೆ. ಶೇಕಡಾ ಎಂಭತ್ತರಷ್ಟು ವಿದ್ಯಾರ್ಥಿಗಳು ಪಠ್ಯಪುಸ್ತಕದಲ್ಲಿನ ಓದುವಿಕೆಯ ಕೌಶಲದ ಹಿನ್ನೆಲೆಯಲ್ಲಿ ನಿರ್ದೇಶಿತವಾದ ಚಟುವಟಿಕೆಗಳನ್ನು ಮಾಡಲಾರದ ಸ್ಥಿತಿಯಲ್ಲಿದ್ದಾರೆ. ಒಟ್ಟಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಕನ್ನಡ ಭಾಷಾ ಬೋಧನಾ ಉದ್ದೇಶಗಳು ತರಗತಿಯಲ್ಲಿ ಫಲವನ್ನು ಕಾಣುತ್ತಿಲ್ಲ.

ಆ) ಒಂಭತ್ತನೆಯ ತರಗತಿ. ಆಯ್ಕೆ ಮಾಡಿದ ವಿದ್ಯಾರ್ಥಿಗಳ ಸಂಖ್ಯೆ ३೦೦




ಯಾದೃಚ್ಛಿಕವಾಗಿ ತರಗತಿಯಿಂದ ತಲಾ ಐದು ವಿದ್ಯಾರ್ಥಿಗಳಂತೆ ಒಟ್ಟು ३೦೦ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿಕೊಂಡು ಕಾಗದದಲ್ಲಿ ಬರೆದಿರುವ ಐದು ವಾಕ್ಯಗಳನ್ನು ಓದಿಸಿದಾಗ, ಕೊಟ್ಟ ವಾಕ್ಯಗಳಲ್ಲಿ

| | |
|---|---|
| ೫ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ೧೨ |
| ೪ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ೨೧ |
| ३ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ೧೦೯ |
| ೨ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ೪೦ |
| ೧ ವಾಕ್ಯವನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ೬೭ |
| ೫ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರ ಸಂಖ್ಯೆ | ೫೧ |

ಒಂಭತ್ತನೆಯ ತರಗತಿಯಲ್ಲಿ ಆಯ್ಕೆ ಮಾಡಿದ ३೦೦ ವಿದ್ಯಾರ್ಥಿಗಳಲ್ಲಿ ೫೦ ವಿದ್ಯಾರ್ಥಿಗಳು ಕನ್ನಡವನ್ನು ನಿರರ್ಗಳವಾಗಿ ಓದಲು ಬಾರದವರಿದ್ದಾರೆ. ಅವರದ್ದೇ ತರಗತಿಯ ಕನ್ನಡ ಪಠ್ಯದ ಆಯ್ದ ಐದು ವಾಕ್ಯಗಳಲ್ಲಿ ಎರಡು ವಾಕ್ಯಗಳನ್ನೂ ಕೂಡ ವ್ಯತ್ಯಾಸ ಮಾಡದೆ ಓದಲು ಬಾರದಿದ್ದ ವಿದ್ಯಾರ್ಥಿಗಳಿಗೆ ಸ್ವಕಲಿಕೆಯು ಕನಸಿನ ಮಾತು. ಪಠ್ಯ ವಿಚಾರಕ್ಕಾಗಿ ಸಂಪೂರ್ಣವಾಗಿ ಶಿಕ್ಷಕರ ಮೇಲೆ ಅವಲಂಬಿತರಾದವರ ಸಂಖ್ಯೆಯೇ ಈ ತರಗತಿಗಳಲ್ಲಿ ಹೆಚ್ಚಿದೆ. ಒಂಭತ್ತನೆಯ ತರಗತಿಯಲ್ಲಿಯೂ ಕೂಡ ಕೆಲವು ವಿದ್ಯಾರ್ಥಿಗಳು ಸ್ವರಾಕ್ಷರ ಹಾಗೂ ವ್ಯಂಜನಾಕ್ಷರಗಳನ್ನು ಗುರುತಿಸುವಲ್ಲಿ ಗೊಂದಲವನ್ನು ಮಾಡಿಕೊಳ್ಳುತ್ತಾರೆ. ३೦೦ ವಿದ್ಯಾರ್ಥಿಗಳಲ್ಲಿ ೧೫೮ ವಿದ್ಯಾರ್ಥಿಗಳು ಲಿಪಿಸಂಕೇತಗಳನ್ನು ಗ್ರಹಿಸುವಲ್ಲಿ ಬಹಳಷ್ಟು ಗೊಂದಲ ಎದುರಿಸುತ್ತಿದ್ದಾರೆ.

ಒಂಭತ್ತನೆಯ ತರಗತಿ. ಓದುವಿಕೆಯ ಶೇಕಡಾವಾರು ಲೆಕ್ಕಾಚಾರ




| | |
|---|---|
| ೫ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೪ |
| ೪ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೭ |
| ೩ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೩೦ |
| ೨ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೨೦ |
| ೧ ವಾಕ್ಯವನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೨೨.೩೩ |
| ೫ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರ ಸಂಖ್ಯೆ | ಶೇಕಡಾ ೧೭ |

ಓದುವಿಕೆಯ ಕೌಶಲದಲ್ಲಿ ಒಂಭತ್ತನೆಯ ತರಗತಿಯ ಶೇಕಡಾ ೪೯.೩೩ ರಷ್ಟು ವಿದ್ಯಾರ್ಥಿಗಳು ಅವರದ್ದೇ ತರಗತಿಯ ಕನ್ನಡ ಪಠ್ಯದ ಆಯ್ದ ಐದು ವಾಕ್ಯಗಳಲ್ಲಿ ಎರಡು ವಾಕ್ಯಗಳನ್ನೂ ಕೂಡ ವ್ಯತ್ಯಾಸ ಮಾಡದೆ ಓದಲು ಬಾರದವರಿದ್ದಾರೆ. ಈ ತರಗತಿಯಲ್ಲಿ ಶೇಕಡಾ ೪ ರಷ್ಟು ವಿದ್ಯಾರ್ಥಿಗಳು ಮಾತ್ರ ನಿರರ್ಗಳವಾಗಿ ಕನ್ನಡವನ್ನು ಓದಬಲ್ಲವರಿದ್ದಾರೆ. ಎಂಟು ವರ್ಷಗಳ ಕನ್ನಡ ಬೋಧನೆಯು ಸಂಪೂರ್ಣವಾಗಿ ವ್ಯರ್ಥವಾಗಿದೆಯಲ್ಲದೆ, ಶಿಕ್ಷಣಕ್ಕಾಗಿ ಮಾಡಿರುವ ವೆಚ್ಚಗಳೂ ಕೂಡ ನಿರರ್ಥಕವಾಗಿದೆ. ಶೇಕಡಾ ೬೦ಕ್ಕೂ ಹೆಚ್ಚಿನ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವು ಸ್ವಕಲಿಕೆಯ ಸಾಧನವಾಗಿಲ್ಲ. ಅವರು ಪಾಠ-ಪದ್ಯ-ವ್ಯಾಕರಣಾಂಶಗಳಿಗಾಗಿ ಶಿಕ್ಷಕರನ್ನು ಸಂಪೂರ್ಣವಾಗಿ ಅವಲಂಬಿಸಿದ್ದಾರೆ. ಸಾರ್ವಜನಿಕ ಶಿಕ್ಷಣ ಇಲಾಖೆಯು ನಿಗದಿಪಡಿಸಿರುವ ಕನ್ನಡ ಭಾಷಾ ಬೋಧನಾ ಉದ್ದೇಶಗಳು ಈ ತರಗತಿಯಲ್ಲಿ ಸಾಧಿತವಾಗುತ್ತಿಲ್ಲ.

ಇ) ಹತ್ತನೆಯ ತರಗತಿ. ಆಯ್ಕೆ ಮಾಡಿದ ವಿದ್ಯಾರ್ಥಿಗಳ ಸಂಖ್ಯೆ ३೦೦




ಹತ್ತನೆಯ ತರಗತಿಯಿಂದ ಯಾದೃಚ್ಛಿಕವಾಗಿ ತಲಾ ಐದು ವಿದ್ಯಾರ್ಥಿಗಳಂತೆ ಒಟ್ಟು ३೦೦ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿಕೊಂಡು ಪ್ರತ್ಯೇಕ ಕಾಗದಗಳಲ್ಲಿ ಬರೆದಿರುವ ಐದು ವಾಕ್ಯಗಳನ್ನು ಓದಿಸಿದಾಗ, ಕೊಟ್ಟ ವಾಕ್ಯಗಳಲ್ಲಿ

| | |
|---|---|
| ೫ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ३೭ |
| ೪ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ३೫ |
| ३ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ೮೦ |
| ೨ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ೭३ |
| ೧ ವಾಕ್ಯವನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ३೨ |
| ೫ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರ ಸಂಖ್ಯೆ | ೪३ |

ಆಯ್ಕೆ ಮಾಡಿದ ३೦೦ ವಿದ್ಯಾರ್ಥಿಗಳಲ್ಲಿ ೪३ ವಿದ್ಯಾರ್ಥಿಗಳು ಕನ್ನಡ ಪಠ್ಯಭಾಗವನ್ನು ಓದುವಲ್ಲಿ ಸಂಪೂರ್ಣ ವ್ಯತ್ಯಾಸ ಮಾಡುತ್ತಾರೆ. ಅವರದ್ದೇ ತರಗತಿಯ ಕನ್ನಡ ಪಠ್ಯದ ಆಯ್ದ ಐದು ವಾಕ್ಯಗಳಲ್ಲಿ ಎರಡು ವಾಕ್ಯಗಳನ್ನೂ ಕೂಡ ವ್ಯತ್ಯಾಸ ಮಾಡದೆ ಓದಲು ಬಾರದಿದ್ದ ವಿದ್ಯಾರ್ಥಿಗಳ ಸಂಖ್ಯೆಯೂ ದೊಡ್ಡದಿದೆ. ಆಯ್ಕೆ ಮಾಡಿಕೊಂಡ ३೦೦ ವಿದ್ಯಾರ್ಥಿಗಳಲ್ಲಿ ३೭ ವಿದ್ಯಾರ್ಥಿಗಳು ಮಾತ್ರ ಕನ್ನಡವನ್ನು ಸ್ಪಷ್ಟವಾಗಿ ಹಾಗೂ ನಿರರ್ಗಳವಾಗಿ ಓದುತ್ತಾರೆ. ಒಂಭತ್ತು ವರ್ಷಗಳ ನಿರಂತರವಾದ ಕನ್ನಡದ ಬೋಧನೆಯಿದ್ದರೂ ವಿದ್ಯಾರ್ಥಿಗಳು ಕನ್ನಡ ಭಾಷೆಯ ಅಕ್ಷರಗಳನ್ನು ಗುರುತಿಸುವಲ್ಲಿ ಗೊಂದಲಕ್ಕೊಳಗಾಗುತ್ತಿದ್ದಾರೆ.

ಹತ್ತನೆಯ ತರಗತಿ. ಓದುವಿಕೆಯ ಶೇಕಡಾವಾರು ಲೆಕ್ಕಾಚಾರ




| | |
|---|---|
| ೫ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೧೨.೩೩ |
| ೪ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೧೧.೬೬ |
| ೩ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೨೭ |
| ೨ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೨೪ |
| ೧ ವಾಕ್ಯವನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೧೦.೬೬ |
| ೫ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರ ಸಂಖ್ಯೆ | ಶೇಕಡಾ ೧೪ |

ಹತ್ತನೆಯ ತರಗತಿಯಲ್ಲಿ ಶೇಕಡಾ ೪೮.೬೬ ರಷ್ಟು ವಿದ್ಯಾರ್ಥಿಗಳು ಅವರದ್ದೇ ತರಗತಿಯ ಕನ್ನಡ ಪಠ್ಯದ ಆಯ್ದ ಐದು ವಾಕ್ಯಗಳಲ್ಲಿ ಎರಡು ವಾಕ್ಯಗಳನ್ನೂ ಕೂಡ ವ್ಯತ್ಯಾಸ ಮಾಡದೆ ಓದಲು ಬಾರದವರಿದ್ದಾರೆ. ಅಕ್ಷರಗಳ ಗ್ರಹಿಕೆಯ ಹಂತದಲ್ಲಿಯೇ ಗೊಂದಲಗೊಳ್ಳುವ ವಿದ್ಯಾರ್ಥಿಗಳ ಸಂಖ್ಯೆ ದೊಡ್ಡದಿದೆ. ಹತ್ತು ವರ್ಷಗಳ ಕನ್ನಡ ಬೋಧನೆಯು ವಿದ್ಯಾರ್ಥಿಗಳ ಮೇಲೆ ಬೀರಿದ ಪ್ರಭಾವವು ಪರಿಣಾಮಕಾರಿಯಾಗಿಲ್ಲ. ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು, ಕನ್ನಡ ಪರಿಸರದ ವಿದ್ಯಾರ್ಥಿಗಳು ಕನ್ನಡ ಕಲಿಕೆಯಲ್ಲಿ ಬಹಳಷ್ಟು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಬೋಧನಾ ವಿಧಾನ ಸಂಪೂರ್ಣ ಬದಲಾಗಬೇಕಿದೆ. ಒಂಭತ್ತು ವರ್ಷಗಳ ನಿರಂತರ ಬೋಧನೆಯಿದ್ದರೂ ಹತ್ತನೆಯ ತರಗತಿಯ ಶೇಕಡಾ ೫೦ ರಷ್ಟು ವಿದ್ಯಾರ್ಥಿಗಳು ಪಠ್ಯಪುಸ್ತಕವನ್ನು ಸ್ವಾಧ್ಯಾಯದ ಮೂಲಕ ಕಲಿಯಲಾಗದ ಸ್ಥಿತಿಯಲ್ಲಿದ್ದಾರೆ. ಸರಕಾರವು ಈ ವಿಚಾರಗಳನ್ನು ಗಮನಿಸಿ ಸೂಕ್ತ ಬದಲಾವಣೆಗಳನ್ನು ಕನ್ನಡ ಭಾಷಾ ಶಿಕ್ಷಣದ ಸನ್ನಿವೇಶದಲ್ಲಿ ತುರ್ತಾಗಿ ತರಬೇಕಾದ ಅನಿವಾರ್ಯತೆಯಿದೆ.

## ೮, ೯ ಹಾಗೂ ೧೦ ನೆಯ ತರಗತಿಗಳ ಓದುವಿಕೆಯ ಶೇಕಡಾವಾರು ಲೆಕ್ಕಾಚಾರ




| | |
|---|---|
| ೫ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರ ಸಂಖ್ಯೆ | ಶೇಕಡಾ ೧೭ |
| ೧ ವಾಕ್ಯವನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೧೬.೫೫ |
| ೨ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೨೧ |
| ೩ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೨೮ |
| ೪ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೯.೭೭ |
| ೫ ವಾಕ್ಯಗಳನ್ನು ಯಾವುದೇ ವ್ಯತ್ಯಾಸ ಮಾಡದೆ ಓದಿದವರ ಸಂಖ್ಯೆ | ಶೇಕಡಾ ೭.೬೬ |

ರಾಜ್ಯದ ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಗಳ ಶೇಕಡಾ ೫೪.೫೫ ರಷ್ಟು ವಿದ್ಯಾರ್ಥಿಗಳು ಕನ್ನಡ ಬಾಷಾ ಕಲಿಕೆಯ ಮೂಲ ಕೌಶಲವಾದ ಓದುವಿಕೆಯಲ್ಲಿ ನಿರೀಕ್ಷಿತ ಸಾಮರ್ಥ್ಯವನ್ನು ಗಳಿಸಿಕೊಂಡಿಲ್ಲ. ಅವರದ್ದೇ ತರಗತಿಯ ಐದು ವಾಕ್ಯಗಳಲ್ಲಿ ಎರಡು ವಾಕ್ಯಗಳನ್ನೂ ಸ್ಪಷ್ಟವಾಗಿ ಓದಲು ಬಾರದವರಿದ್ದಾರೆ. ನಿರರ್ಗಳವಾಗಿ ಹಾಗೂ ಸ್ಪಷ್ಟವಾಗಿ ಓದುವವರ ಸಂಖ್ಯೆ ಶೇಕಡಾ ೭.೬೬ ರಷ್ಟು ಮಾತ್ರ. ಶೇಕಡಾ ೫೦ಕ್ಕೂ ಹೆಚ್ಚಿನ ವಿದ್ಯಾರ್ಥಿಗಳು ಕನ್ನಡ ಭಾಷಾ ಪಠ್ಯಪುಸ್ತಕದ ವಿಚಾರಗಳಿಗಾಗಿ ಶಿಕ್ಷಕರನ್ನು ಸಂಪೂರ್ಣವಾಗಿ ಅವಲಂಬಿಸಿದ್ದಾರೆ. ಅಕ್ಷರಗಳನ್ನು ಗುರುತಿಸುವ ಹಂತದಲ್ಲಿಯೇ ಬಹಳಷ್ಟು ವಿದ್ಯಾರ್ಥಿಗಳು ಗೊಂದಲವನ್ನು ಎದುರಿಸುತ್ತಿದ್ದಾರೆ. ಕಲಿಕೆಯಲ್ಲಿ ಸ್ವಾವಲಂಬನೆ, ಸ್ವಾಧ್ಯಾಯ ಸಾಧ್ಯವಾಗದ ಸ್ಥಿತಿಯಲ್ಲಿದ್ದಾರೆ. ಪ್ರಾಥಮಿಕ ಶಾಲಾ ಶಿಕ್ಷಣದ ಲಿಪಿಗ್ರಹಿಕೆಯ ಸಂದರ್ಭಗಳಲ್ಲಿನ ಬೋಧನಾ ವಿಧಾನಗಳಲ್ಲಿ ಗುರುತರ ಬದಲಾವಣೆಗಳನ್ನು ತರಬೇಕಾದ ಅನಿವಾರ್ಯತೆಯಿದೆ.

ರಾಷ್ಟ್ರೀಯ ಶಿಕ್ಷಣ ನೀತಿಯ ಗುರಿಗಳು, ಅದನ್ನಾಧರಿಸಿ ರೂಪಿಸಿದ ರಾಜ್ಯದ ಶಿಕ್ಷಣ ಇಲಾಖೆಯ ಪ್ರಥಮ ಭಾಷಾ ಕನ್ನಡದ ಬೋಧನಾ ಉದ್ದೇಶಗಳು, ಬಿ.ಎಡ್ ತರಬೇತಿಗಲ್ಲಿ ಬೋಧಿಸಲಾಗುತ್ತಿರುವ ಭಾಷಾ ಬೋಧನಾ ಉದ್ದಿಷ್ಟ, ನಿರ್ದಿಷ್ಟಗಳು ಎಲ್ಲವೂ ಸಿದ್ಧಾಂತಗಳ

ರೂಪದಲ್ಲಿ ಪುಸ್ತಕಗಳಲ್ಲಿವೆ. ಆದರೆ ತರಗತಿಯ ವಾಸ್ತವ ಚಿತ್ರಣ ಇವೆಲ್ಲವುಗಳಿಗೆ ತದ್ವಿರುದ್ಧವಾದ ರೀತಿಯಲ್ಲಿರುವುದು ಅಧ್ಯಯನದಲ್ಲಿ ಕಂಡು ಬಂದಿರುವ ಅಂಶವಾಗಿದೆ.

### ೨.೭.೨ ಅಧ್ಯಯನದಲ್ಲಿ ಕಂಡುಬಂದಂತೆ ವಿದ್ಯಾರ್ಥಿಗಳ ಓದುವಿಕೆಯಲ್ಲಿನ ಸಮಸ್ಯೆಗಳು

- ಅಕ್ಷರಗಳನ್ನು ಗುರುತಿಸುವಲ್ಲಿ ವಿಫಲತೆ
- ಅಕ್ಷರಗಳನ್ನು ಗುರುತಿಸುವಲ್ಲಿ ಹೆಚ್ಚಿನ ಸಮಯ ತೆಗೆದುಕೊಳ್ಳುವುದು
- ದೀರ್ಘಾಕ್ಷರಗಳನ್ನು ಹ್ರಸ್ವವನ್ನಾಗಿ ಓದುವುದು
- ದ್ವಿತ್ವಗಳನ್ನು ಗ್ರಹಿಸುವಲ್ಲಿ ಗೊಂದಲ
- ಅಲ್ಪಪ್ರಾಣ, ಮಹಾಪ್ರಾಣಗಳನ್ನು ಗುರುತಿಸದೆ ಓದುವುದು
- ಮಹಾಪ್ರಾಣಗಳನ್ನು ಅಲ್ಪಪ್ರಾಣಗಳನ್ನಾಗಿ ಓದುವುದು
- ಮಹಾಪ್ರಾಣಗಳನ್ನು ದೀರ್ಘಾಕ್ಷರಗಳನ್ನಾಗಿ ಓದುವುದು
- ಏತ್ವ, ಓತ್ವ, ಐತ್ವಗಳನ್ನು ಗುರುತಿಸುವಿಕೆಯಲ್ಲಿ ಗೊಂದಲ
- ಸ್ಪಷ್ಟವಾಗಿ, ಸರಾಗವಾಗಿ ಓದುವಲ್ಲಿ ವಿಫಲತೆ
- ಭಾವಪೂರ್ಣವಾಗಿ ಓದಲು ಬರದಿರುವುದು
- ವೇಗದ ಓದು ಸಿದ್ಧಿಸದಿರುವುದು
- ಅರ್ಥಗ್ರಹಿಸದೆ ಯಾಂತ್ರಿಕವಾಗಿ ಓದುವುದು
- ಲೇಖನ ಚಿಹ್ನೆಗಳನ್ನು ಅನುಸರಿಸದೆ ಓದುವುದು
- ಹಳಗನ್ನಡ ಪಾಠ ಪದ್ಯಗಳನ್ನು ಓದುವಲ್ಲಿ ಬಹಳಷ್ಟು ಪ್ರಯಾಸಪಡುವುದು
- ಹಳಗನ್ನಡ ಪಾಠ ಪದ್ಯಗಳನ್ನು ಅರ್ಥಕ್ಕನುಗುಣವಾಗಿ ಪದಗಳನ್ನು ಬಿಡಿಸಿ ಓದಲು ವಿಫಲರಾಗುವುದು
- ಸಂತಸದಿಂದ ಓದದೆ ಮ್ಲಾನವದನರಾಗಿ ಓದುವುದು
- ಭಯ, ಕೀಳರಿಮೆ, ನಾಚಿಕೆಗಳಿಂದ ಓದುವುದು
- ಅಕ್ಷರಗಳನ್ನು ಬಿಟ್ಟು ಬಿಟ್ಟು ಓದುವುದು
- ಸಂಯುಕ್ತಾಕ್ಷರಗಳನ್ನು ವ್ಯತ್ಯಾಸ ಮಾಡಿ ಓದುವುದು
- ಒತ್ತುಗಳನ್ನು ಬಿಟ್ಟು ಓದುವುದು

## ೨.೮ ಬರವಣಿಗೆ

ಭಾಷೆಯೊಂದನ್ನು ನಿರ್ದಿಷ್ಟ ರೇಖಾವಿನ್ಯಾಸಗಳ ಮೂಲಕ ಕಲಿಸುವುದೇ ಬರವಣಿಗೆ. ಅಮೂರ್ತ ರೂಪದ ಭಾಷೆ ಚಾಕ್ಷುಷ ರೂಪಿಯಾಗಿ ಮೂರ್ತರೂಪಕ್ಕೆ ಬರುವುದೇ ಲಿಪಿಯ ಮೂಲಕ. ಉಚ್ಚಾರಣೆ ಮಾಡುವ ಪ್ರತಿಯೊಂದು ಧ್ವನಿಗೆ ನಿರ್ದಿಷ್ಟವಾದ ರೇಖಾವಿನ್ಯಾಸವನ್ನು ನೀಡಿದಾಗ ಅದು ಆ ಭಾಷೆಯ ಬರವಣಿಗೆಯಾಗುತ್ತದೆ. ಈ ರೇಖಾವಿನ್ಯಾಸವನ್ನೇ ಲಿಪಿ ಎನ್ನುತ್ತೇವೆ.

ಕನ್ನಡವು ಶಾಸ್ತ್ರಬದ್ಧ, ವೈಜ್ಞಾನಿಕ ರೂಪಿತ ಹಾಗೂ ಲಿಪಿಸಮೃದ್ಧವಾದ ಭಾಷೆ. ಉಚ್ಚಾರಣೆ ಮಾಡುವ ಧ್ವನಿಯನ್ನು ಲಿಪಿಯ ಮೂಲಕ ಸುಲಭವಾಗಿ ಬರೆಯಬಹುದಾದ ಸೌಲಭ್ಯವನ್ನು ಹೊಂದಿರುವ ಭಾಷೆ. ಆಂಗ್ಲಭಾಷೆಯಲ್ಲಿರುವಂಥಹ ಲಿಪಿ ಹಾಗೂ ಉಚ್ಚಾರಣೆಗೆ ಸಂಬಂಧಿಸಿದಂತೆ ಯಾವುದೇ ರೀತಿಯ ಗೊಂದಲಗಳು ಕನ್ನಡದ ಲಿಪಿ ಹಾಗೂ ಉಚ್ಚಾರಣೆಯಲ್ಲಿ ಇಲ್ಲ. ಪ್ರಾದೇಶಿಕ ಭಿನ್ನತೆಗೆ ಸಂಬಂಧಿಸಿದಂತೆ ಗ್ರಾಮ್ಯ ಉಚ್ಚಾರಣೆಗಳಲ್ಲಿ ಭಿನ್ನತೆಯಿದ್ದರೂ ಗ್ರಂಥಸ್ಥ ಕನ್ನಡದಲ್ಲಿ ಈ ಯಾವುದೇ ಗೊಂದಲಗಳಿಲ್ಲ. ಲಿಪಿ ಗ್ರಹಿಕೆಯು ಸ್ಪಷ್ಟವಾದಲ್ಲಿ ಭಾಷೆಯಲ್ಲಿರುವ ಸಾಹಿತ್ಯ ಹಾಗೂ ಜ್ಞಾನವನ್ನು ಯಾರ ನೆರವಿಲ್ಲದೆಯೇ ಗಳಿಸಬಹುದಾದ ಸೌಲಭ್ಯವಿದೆ. ಮಕ್ಕಳಿಗೆ ಪ್ರಾಥಮಿಕ ಹಂತದಲ್ಲಿ ಅಕ್ಷರಗಳನ್ನು ಪರಿಚಯಿಸುವಾಗ ಉಚ್ಚಾರಣಾ ವಿಧಾನದ ಜೊತೆಯಲ್ಲಿ ಲಿಪಿ ಸಂಕೇತಗಳನ್ನು ಬರೆಯಲು ತರಬೇತಿ ನೀಡಲಾಗುತ್ತದೆ. ಕನ್ನಡ ಮಾತೃಭಾಷೆಯಾದ ಮಕ್ಕಳಿಗೆ ಭಾಷೆಯ ಆಲಿಸುವಿಕೆ ಹಾಗೂ ಮಾತನಾಡುವಿಕೆಯ ಕೌಶಲಗಳ ಪ್ರಾಥಮಿಕ ಕಲಿಕೆಯು ಮನೆಯಲ್ಲಿಯೇ ಆಗಿರುತ್ತದೆ. ಅನೌಪಚಾರಿಕ ಶಿಕ್ಷಣ ಕೇಂದ್ರವಾದ ಮನೆಯಲ್ಲಿ ಮಕ್ಕಳು ನಿರರ್ಗಳವಾಗಿ, ವ್ಯಾಕರಣಬದ್ಧವಾಗಿ ಮಾತನಾಡುವ ಕೌಶಲವನ್ನು ಕಲಿತಿರುತ್ತಾರೆ. ಶಾಲೆಯಲ್ಲಿ ಅವರು ಕಲಿತಿರುವ ಭಾಷೆಯ ಲಿಪಿ ಸಂಕೇತಗಳನ್ನು ಸ್ಪಷ್ಟವಾಗಿಸಿ ಓದು ಮತ್ತು ಬರಹಗಳ ಕೌಶಲಗಳನ್ನು ನಿಗದಿತ ಮಾದರಿಯಲ್ಲಿ ಕಲಿಸಲಾಗುತ್ತದೆ.

ವಾಸ್ತವವಾಗಿ ಕನ್ನಡ ಭಾಷೆಯ ಪರಿಚಯವಿರುವ ಹಾಗೂ ಕನ್ನಡ ಮನೆಮಾತಾದ ಮಕ್ಕಳಿಗೆ ಲಿಪಿ ಸಂಕೇತಗಳನ್ನು ಕಲಿಸಲು ಒಂದು ಅಥವಾ ಎರಡು ವರ್ಷಗಳ ಅವಧಿ ಸಾಕಾಗುತ್ತದೆ. ತಾವು ಉಚ್ಚರಿಸಿದ್ದನ್ನು ನಿರ್ದಿಷ್ಟವಾದ ಲಿಪಿ ಸಂಕೇತಗಳನ್ನು ಬಳಸಿ ಲಿಖಿತ ರೂಪಕ್ಕಿಳಿಸುವಲ್ಲಿ ಯಾವುದೇ ರೀತಿಯ ಗೊಂದಲಗಳು ಇಲ್ಲದಿರುವುದರಿಂದ ಅಂದರೆ ಕನ್ನಡ ಭಾಷೆಯಲ್ಲಿ ಲಿಪಿ ಸಂಕೇತಗಳ ಕುರಿತು ಸ್ಪಷ್ಟತೆಯಿರುವುದರಿಂದ, ಉಚ್ಚರಿಸಿದ ಧ್ವನಿಗೆ ಅದರದ್ದೇ ಆದ ಲಿಪಿಯ ಸಂಕೇತವಿರುವುದರಿಂದ ಒಂದೆರಡು ವರ್ಷಗಳಲ್ಲಿ ವಿದ್ಯಾರ್ಥಿಗಳಿಗೆ ಲಿಪಿ ಗ್ರಹಿಕೆಯನ್ನು ಮಾಡಿಸಬಹುದಾಗಿದೆ. ಬೋಧನಾ ವಿಧಾನಗಳಲ್ಲಿ ದೋಷವಿರುವುದರಿಂದ ಏಳು ಎಂಟು ವರ್ಷಗಳ ಕಾಲ ಕನ್ನಡ ಭಾಷಾ ಬೋಧನೆಯಿದ್ದರೂ ವಿದ್ಯಾರ್ಥಿಗಳಿಗೆ ಕನ್ನಡ ಭಾಷೆಯ ಲಿಪಿ ಗ್ರಹಿಕೆ ಸ್ಪಷ್ಟವಾಗಿಲ್ಲದಿರುವುದು ಅಧ್ಯಯನದ ಸಂದರ್ಭಗಳಲ್ಲಿ ಕಂಡುಬಂದಿದೆ.

ಲಿಪಿಯ ಗ್ರಹಿಕೆಯು ವಿದ್ಯಾರ್ಥಿಗಳಿಗೆ ಬಹುಮುಖ್ಯವಾದ ವಿಚಾರವಾಗಿದೆ. ಲಿಪಿಯನ್ನು ಸ್ಪಷ್ಟವಾಗಿ ಗ್ರಹಿಸಿದ ವಿದ್ಯಾರ್ಥಿಗಳು ಯಾವುದೇ ವಿಚಾರಗಳನ್ನು ನಿರರ್ಗಳವಾಗಿ ಓದಬಲ್ಲವರಾಗುತ್ತಾರೆ. ಓದು ಸ್ಪಷ್ಟವಾದಾಗ ಓದುವ ವಿಚಾರಗಳ ಕುರಿತ ಚಿಂತನೆಯೂ ಬೆಳೆಯುತ್ತದೆ. ಕಲಿಕೆಯ ಹಾಗೂ ಬೋಧನೆಯ ಗುರಿ, ಉದ್ದೇಶಗಳು ಸಾಧಿತವಾಗುತ್ತವೆ.

ಬಿ.ಎಡ್ ತರಬೇತಿಗಳಲ್ಲಿ, ಶಿಕ್ಷಕರ ಕಾರ್ಯಾಗಾರಗಳಲ್ಲಿ ಪ್ರೌಢಶಾಲಾ ವಿದ್ಯಾರ್ಥಿಗಳ ಬರವಣಿಗೆಯ ಕೌಶಲದ ಕುರಿತು ಹೇಳುವಾಗ,

- "ಪತ್ರ, ಅರ್ಜಿ, ಪ್ರಬಂಧ, ಜೀವನ ಚರಿತ್ರೆ, ಕಥೆ, ಸಂಭಾಷಣೆ, ಸೂಚನೆಗಳು, ನಿರ್ದೇಶನಗಳು, ಸಂಕ್ಷೇಪೀಕರಣ, ಸಾರವಿಸ್ತಾರ ಇತ್ಯಾದಿ ವಿಚಾರವಾಗಿ ಸ್ವಚ್ಛತೆ ಹಾಗೂ ಹಿತಮಿತ ವೇಗದಿಂದ ಸ್ಪಷ್ಟವಾಗಿ, ಅಂದವಾಗಿ, ತಪ್ಪಿಲ್ಲದೆ ಬರೆಯುತ್ತಾನೆ.
- ಲೇಖನ ಚಿಹ್ನೆಗಳನ್ನು ಬಳಸುತ್ತಾನೆ. ವಾಕ್ಯವೃಂದಗಳನ್ನು ಜೋಡಿಸುತ್ತಾನೆ
- ಹೊಸ ಪದಗಳು, ವಾಗ್ರೂಢಿಗಳು, ಗಾದೆಮಾತುಗಳು ಮುಂತಾದವುಗಳನ್ನು ಸಂದರ್ಭಾನುಸಾರ ಬಳಸಿಕೊಳ್ಳುತ್ತಾನೆ.
- ಸರಳ, ಸುಂದರ ವ್ಯಾಕರಣ ಬದ್ಧ ಭಾಷೆಯನ್ನು ಬಳಸುತ್ತಾನೆ. ಸುಸಂಗತ ಮಾಹಿತಿಯನ್ನು ಮಾತ್ರ ಬರವಣಿಗೆಗೆ ಬಳಸಿಕೊಳ್ಳುತ್ತಾನೆ.
- ಲಿಖಿತ ಅಭಿವ್ಯಕ್ತಿಯ ವಿವಿಧ ರೂಪಗಳ ಮೂಲಕ ತನ್ನನ್ನು ಪ್ರಕಟಪಡಿಸಿಕೊಳ್ಳುತ್ತಾನೆ.
- ತನ್ನ ತೀವ್ರ ಅನುಭವಗಳಿಗೆ ಹೊಸ ರೂಪವನ್ನು ಬರಹದ ಮೂಲಕ ನೀಡುತ್ತಾನೆ"[2].

ಎನ್ನುವ ವಾಕ್ಯಗಳನ್ನು ಬಳಸಲಾಗುತ್ತದೆ. ವಿದ್ಯಾರ್ಥಿಯು ಬರವಣಿಗೆಯ ಕೌಶಲದಲ್ಲಿ ಅತ್ಯಂತ ಪಳಗಿದ್ದಾನೆನ್ನುವ ದೃಷ್ಟಿಯ ವಾಕ್ಯಗಳು ಸೈದ್ಧಾಂತಿಕವಾಗಿ ಸರಿಯೆನಿಸುತ್ತದೆ. ಆದರೆ ವಾಸ್ತವ ಚಿತ್ರಣ ಸಂಪೂರ್ಣ ಭಿನ್ನವಾಗಿರುವುದು ಅಧ್ಯಯನದಲ್ಲಿ ಕಂಡುಬಂದಿದೆ.

ಕಲ್ಪಿತ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಶಿಕ್ಷಕ ಶಿಕ್ಷಣ ಮಹಾವಿದ್ಯಾಲಯಗಳಲ್ಲಿ ಬೋಧನಾ ವಿಧಾನಗಳನ್ನು ತಿಳಿಸಲಾಗುತ್ತದೆ. ಪಠ್ಯ ಪುಸ್ತಕ ರಚನೆಯ ಸಂದರ್ಭಗಳಲ್ಲಿಯೂ ಕಲ್ಪಿತ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಳ್ಳಲಾಗುತ್ತಿದೆ. ಪಠ್ಯಗಳಲ್ಲಿನ ಚಟುವಟಿಕೆಗಳನ್ನು ಸಿದ್ಧಪಡಿಸುವಾಗ ಮತ್ತು ಮೌಲ್ಯಮಾಪನದ ಮಾಪಕಗಳನ್ನು ಸಿದ್ಧಪಡಿಸುವಾಗಲೂ ಕೂಡ ಕಲ್ಪಿತ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಳ್ಳಲಾಗುತ್ತಿದೆ. ಅಲ್ಲದೇ ಕಲ್ಪಿತ ವಿದ್ಯಾರ್ಥಿಗಳು ಕನ್ನಡ ಭಾಷೆಯನ್ನು ಮತ್ತು ಭಾಷಾ ಕೌಶಲಗಳನ್ನು ಸಂಪೂರ್ಣವಾಗಿ ಕರಗತಮಾಡಿಕೊಂಡಿದ್ದಾರೆನ್ನುವ ಆಧಾರದಲ್ಲಿ ರಚಿಸಲಾಗುತ್ತಿದೆ. ಕಲ್ಪಿತ ವಿದ್ಯಾರ್ಥಿಗಳಿಗೂ ವಾಸ್ತವದ ವಿದ್ಯಾರ್ಥಿಗಳಿಗೂ ಅಂತರವು ಹೆಚ್ಚಾಗಿರುವುದರಿಂದ ಕನ್ನಡ ಭಾಷಾ ಕಲಿಕೆಯ ಉದ್ದೇಶಗಳು ಸಾಧಿತವಾಗುತ್ತಿಲ್ಲದಿರುವುದನ್ನು ಅಧ್ಯಯನದ ಸಂದರ್ಭಗಳಲ್ಲಿ ಕಂಡುಕೊಳ್ಳಲಾಗಿದೆ.

### ೨.೮.೧ ತರಗತಿಯ ವಾಸ್ತವ

ಬರವಣಿಗೆಯ ಕೌಶಲದ ಕುರಿತು ಶಿಕ್ಷಣ ಇಲಾಖೆಯ ಧ್ಯೇಯೋದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು, ತರಗತಿಯೊಳಗಿನ ವಾಸ್ತವವನ್ನು ನೋಡುವುದು ಈ ನಿಟ್ಟಿನಲ್ಲಿ ಮುಖ್ಯವಾಗುತ್ತದೆ. ಲಿಪಿಗ್ರಹಿಕೆಯಲ್ಲಿನ ಕೌಶಲವನ್ನು ತಿಳಿದುಕೊಳ್ಳುವ ದೃಷ್ಟಿಯಿಂದ ಕ್ಷೇತ್ರಕಾರ್ಯದಲ್ಲಿ ವಿದ್ಯಾರ್ಥಿಗಳಿಗೆ ಕೈಗೊಂಡ ಚಟುವಟಿಕೆಯ ವಿಶ್ಲೇಷಣೆ ಹೀಗಿದೆ.




೫೦೦ ವಿದ್ಯಾರ್ಥಿಗಳಲ್ಲಿ

| | |
|---|---|
| ೧೦ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರು | ೧೨೬ |
| ೧ ರಿಂದ ೨ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೯೮ |
| ೩ ರಿಂದ ೪ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೧೩೨ |
| ೫ ರಿಂದ ೬ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೯೦ |
| ೭ ರಿಂದ ೮ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೩೪ |
| ೯ ರಿಂದ ೧೦ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೨೦ |

ಎಂಟನೆಯ ತರಗತಿಯ ಯಾದೃಚ್ಛಿಕವಾಗಿ ಆಯ್ದುಕೊಂಡ ೫೦೦ ವಿದ್ಯಾರ್ಥಿಗಳಲ್ಲಿ ೩೫೦ ಕ್ಕೂ ಹೆಚ್ಚಿನ ವಿದ್ಯಾರ್ಥಿಗಳು ಕನ್ನಡ ಬರವಣಿಗೆಯ ವಿಚಾರದಲ್ಲಿ ಅನೇಕ ವ್ಯತ್ಯಾಸಗಳನ್ನು ಮಾಡುತ್ತಾರೆ. ಲಿಪಿಗ್ರಹಿಕೆಯ ಹಂತದಲ್ಲಿಯೇ ಈ ವಿದ್ಯಾರ್ಥಿಗಳು ಗೊಂದಲವನ್ನು ಅನುಭವಿಸುತ್ತಿದ್ದಾರೆ.ಅವರದ್ದೇ ತರಗತಿಯ ವಾಕ್ಯಗಳನ್ನು ಬರೆಯಲಾಗದ ಸ್ಥಿತಿಯಲ್ಲಿದ್ದಾರೆ. ವರ್ಣಮಾಲೆಯ ಅಕ್ಷರಗಳನ್ನು ಗುರುತಿಸುವಲ್ಲಿ ವಿಫಲವಾಗುತ್ತಿದ್ದಾರೆ. ಎಂಟು ವರ್ಷಗಳಿಂದ ತಿದ್ದಿಸುತ್ತಿದ್ದ ಬರವಣಿಗೆಯ ವಿಧಾನವು ಈ ವಿದ್ಯಾರ್ಥಿಗಳ ಮೇಲೆ ಯಾವ ಪ್ರಭಾವವನ್ನೂ ಬೀರಿಲ್ಲ. ಕಲಿಕೆ ಮತ್ತು ಬೋಧನೆ ಯಾಂತ್ರಿಕವಾಗಿ ನಡೆದುಬಂದಿದೆಯಷ್ಟೆ. ಅದರ ಫಲಗಳು ಸಿದ್ಧಿಸಿಲ್ಲ.

ಎಂಟನೆಯ ತರಗತಿ. ಬರೆಯುವಿಕೆಯ ಶೇಕಡಾವಾರು ಲೆಕ್ಕಾಚಾರ




| | |
|---|---|
| ೧೦ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರು | ಶೇಕಡಾ ೨೫.೨೦ |
| ೧ ರಿಂದ ೨ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೧೯.೬೦ |
| ೩ ರಿಂದ ೪ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೨೬.೪೦ |
| ೫ ರಿಂದ ೬ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೧೮ |
| ೭ ರಿಂದ ೮ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೬.೮೦ |
| ೯ ರಿಂದ ೧೦ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೪ |

ಸಾರ್ವಜನಿಕ ಶಿಕ್ಷಣ ಇಲಾಖೆಯು ವಿದ್ಯಾರ್ಥಿಗಳ ಕಲಿಕಾ ಸಾಮರ್ಥ್ಯವನ್ನು ಹೆಚ್ಚಿಸಲು ಪ್ರಾಥಮಿಕ ಶಾಲೆಗಳಲ್ಲಿ ತಿಂಗಳಿಗೊಂದೆಂಬಂತೆ ಯೋಜನೆಗಳನ್ನು ತರುತ್ತಿದೆ. ಆದರೆ ಫಲಿತಾಂಶ ಮಾತ್ರ ಗಣನೀಯ ಪ್ರಮಾಣದಲ್ಲಿ ಏರಿಕೆಯಾಗಿಲ್ಲವೆಂಬುದು ಅಧ್ಯಯನದ ಸಂದರ್ಭದಲ್ಲಿ ತಿಳಿದುಬಂದಿದೆ. ಎಂಟನೆಯ ತರಗತಿಯಲ್ಲಿ ಶೇಕಡಾ ೪೪.೮೦ ರಷ್ಟು ವಿದ್ಯಾರ್ಥಿಗಳು ಬರವಣಿಗೆಯ ಕೌಶಲದಲ್ಲಿ ಶೇಕಡಾ ೨೦ ಕ್ಕಿಂತ ಕಡಿಮೆ ಅಂಕಗಳನ್ನು ಪಡೆದುಕೊಂಡಿದ್ದಾರೆ. ಅವರದ್ದೇ ತರಗತಿಯ ೧೦ ವಾಕ್ಯಗಳಲ್ಲಿ ೨ ವಾಕ್ಯಗಳನ್ನೂ ಸರಿಯಾಗಿ ಬರೆಯಲು ಬಾರದ ಸ್ಥಿತಿಯಲ್ಲಿದ್ದಾರೆ. ವ್ಯಂಜನಾಕ್ಷರ, ಸಂಯುಕ್ತಾಕ್ಷರ, ಕಾಗುಣಿತದ ಗ್ರಹಿಕೆಗಳು ಏಳು ವರ್ಷಗಳ ನಿರಂತರ ಬೋಧನೆಯಿದ್ದರೂ ಸಿದ್ಧಿಸದಿರುವ ಸನ್ನಿವೇಶವಿದೆ. ಲಿಪಿ ಸಂಕೇತಗಳ ಗ್ರಹಿಕೆಯಲ್ಲಿಯೇ ಸಮಸ್ಯೆಗಳಿರುವುದರಿಂದ ಪಠ್ಯಪುಸ್ತಕವು ನಿರೀಕ್ಷಿಸುವ ಬರವಣಿಗೆಯ ಕೌಶಲಗಳು ವಿದ್ಯಾರ್ಥಿಗಳಲ್ಲಿ ಸಾಧಿತವಾಗುತ್ತಿಲ್ಲ. ಶೇಕಡಾ ೪ರಷ್ಟು ವಿದ್ಯಾರ್ಥಿಗಳು ಮಾತ್ರ ೧೦ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆಯುತ್ತಾರೆ.

## ೯ ನೆಯ ತರಗತಿ–ವಿದ್ಯಾರ್ಥಿಗಳ ಸಂಖ್ಯೆ ೫೦೦




| | |
|---|---|
| ೧೦ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರು | ೯೮ |
| ೧ ರಿಂದ ೨ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೧೦೪ |
| ೩ ರಿಂದ ೪ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೧೩೨ |
| ೫ ರಿಂದ ೬ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೧೦೩ |
| ೭ ರಿಂದ ೮ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೩೨ |
| ೯ ರಿಂದ ೧೦ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೩೧ |

ಭಾಷಾ ಕೌಶಲದ ಮೂಲ ಕೌಶಲಗಳಲ್ಲಿ ಒಂದಾದ ಬರವಣಿಗೆಯ ಕೌಶಲದಲ್ಲಿ ಒಂಭತ್ತನೆಯ ತರಗತಿಯ ವಿದ್ಯಾರ್ಥಿಗಳಲ್ಲಿಯೂ ನಿರೀಕ್ಷಿತ ಮಟ್ಟದ ಸಾಮರ್ಥ್ಯ ಸಿದ್ಧಿಸಿಲ್ಲ. ಅವರದ್ದೇ ತರಗತಿಯ ೧೦ ವಾಕ್ಯಗಳಲ್ಲಿ ೨ ವಾಕ್ಯಗಳನ್ನೂ ಸರಿಯಾಗಿ ಬರೆಯಲು ಬಾರದ ವಿದ್ಯಾರ್ಥಿಗಳ ಸಂಖ್ಯೆ ೫೦೦ ರಲ್ಲಿ ೨೦೨ ಇದೆ. ಅನುಸ್ವಾರ, ವಿಸರ್ಗ, ಅಲ್ಪಪ್ರಾಣ, ಮಹಾಪ್ರಾಣ, ದೀರ್ಘಾಕ್ಷರಗಳು ಮತ್ತು ಸಂಯುಕ್ತಾಕ್ಷರಗಳನ್ನು ಬರೆಯಬೇಕಾದಾಗ ಗೊಂದಲಕ್ಕೀಡಾಗುವ ಹೆಚ್ಚಿನ ವಿದ್ಯಾರ್ಥಿಗಳ ಗಮನ ಪಕ್ಕದಲ್ಲಿ ಕುಳಿತವರು ಬರೆಯುತ್ತಿರುವ ಅಕ್ಷರಗಳ ಮೇಲೆ ಹೋಗುತ್ತದೆ. ಎಂಟು ವರ್ಷಗಳ ಬೋಧನೆಯಿಂದ ಸಿದ್ಧಿಸಬಹುದಾದ ಕ್ಷಮತೆ ಸಿದ್ಧಿಸದಿರುವುದು ಬೋಧನಾ ವಿಧಾನದ ದೋಷಗಳನ್ನು ಹೇಳುತ್ತದೆ. ವಿದ್ಯಾರ್ಥಿಗಳ ಸ್ವಾಧ್ಯಾಯದ ಸಮಸ್ಯೆಗೆ ಲಿಪಿ ಗ್ರಹಿಕೆಯ ತೊಡಕು ಬಹುದೊಡ್ಡ ಕಾರಣವಾಗಿದೆ.

ಒಂಭತ್ತನೆಯ ತರಗತಿ. ಬರೆಯುವಿಕೆಯ ಶೇಕಡಾವಾರು ಲೆಕ್ಕಾಚಾರ




| | |
|---|---|
| ೧೦ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರು | ಶೇಕಡಾ ೧೯.೬೦ |
| ೧ ರಿಂದ ೨ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೨೦.೮೦ |
| ೩ ರಿಂದ ೪ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೨೬.೪೦ |
| ೫ ರಿಂದ ೬ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೨೧ |
| ೭ ರಿಂದ ೮ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೬.೪೦ |
| ೯ ರಿಂದ ೧೦ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೬ |

ಒಂಭತ್ತನೆಯ ತರಗತಿಯ ಶೇಕಡಾ ೧೯.೬೦ ವಿದ್ಯಾರ್ಥಿಗಳು ಅವರದ್ದೇ ತರಗತಿಯ ಕನ್ನಡ ವಾಕ್ಯಗಳನ್ನು ಬರೆಯಲು ಬಾರದವರಾಗಿದ್ದಾರೆ. ಶೇಕಡಾ ೬ ರಷ್ಟು ವಿದ್ಯಾರ್ಥಿಗಳು ಮಾತ್ರ ತಾವು ಆಲಿಸಿದ ಧ್ವನಿಯನ್ನು ಸ್ಪಷ್ಟವಾಗಿ ಲಿಪಿಯ ರೂಪಕ್ಕೆ ಇಳಿಸಬಲ್ಲವರಾಗಿದ್ದಾರೆ. ಉಳಿದವರಲ್ಲಿ ಲಿಪಿ ಜ್ಞಾನ ಅತ್ಯಂತ ಕಳಪೆಯಾಗಿದೆ. ಶೇಕಡಾ ೪೦ ರಷ್ಟು ವಿದ್ಯಾರ್ಥಿಗಳು ಬರಹ ಕೌಶಲದಲ್ಲಿ ಶೇಕಡಾ ೨೦ ಕ್ಕಿಂತಲೂ ಕಡಿಮೆ ಅಂಕಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಉಚ್ಚರಿತ ಧ್ವನಿಯನ್ನು ನಿರ್ದಿಷ್ಟವಾದ ಬರವಣಿಗೆಯ ರೂಪದಲ್ಲಿ ಅಭಿವ್ಯಕ್ತಿಗೊಳಿಸಲು ಅಸಾಧ್ಯವಾಗಿರುವ ಸನ್ನಿವೇಶದಿಂದಾಗಿ ಕನ್ನಡ ಭಾಷಾ ಬೋಧನೆಯ ಉದ್ದೇಶಗಳು ನಿರೀಕ್ಷಿತ ಮಟ್ಟದಲ್ಲಿ ಅನುಷ್ಠಾನಗೊಳ್ಳುತ್ತಿಲ್ಲ. ಎಂಟು ವರ್ಷಗಳ ಬರಹದ ಕುರಿತಾದ ಬೋಧನೆಯು ಗ್ರಹಿಸುವಿಕೆಯಾಗಿಲ್ಲ ಎಂಬುದನ್ನು ಈ ಅಂಕಿ ಅಂಶಗಳು ತಿಳಿಸುತ್ತವೆ.

## ೧೦ ನೆಯ ತರಗತಿ ವಿದ್ಯಾರ್ಥಿಗಳ ಸಂಖ್ಯೆ ೫೦೦




| | |
|---|---|
| ೧೦ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರು | ೫೩ |
| ೧ ರಿಂದ ೨ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೪೯ |
| ೩ ರಿಂದ ೪ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೧೮೧ |
| ೫ ರಿಂದ ೬ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೧೧೭ |
| ೭ ರಿಂದ ೮ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೪೮ |
| ೯ ರಿಂದ ೧೦ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೫೨ |

ಹತ್ತನೆಯ ತರಗತಿಯ ವಿದ್ಯಾರ್ಥಿಗಳೂ ಕೂಡ ಬರವಣಿಗೆಯ ಕೌಶಲದಲ್ಲಿ ಅತ್ಯಂತ ಹಿಂದುಳಿದಿದ್ದಾರೆ. ಯಾದೃಚ್ಛಿಕವಾಗಿ ಆಯ್ದುಕೊಂಡ ೫೦೦ ವಿದ್ಯಾರ್ಥಿಗಳಲ್ಲಿ ೧೦೨ ಕ್ಕೂ ಹೆಚ್ಚಿನ ವಿದ್ಯಾರ್ಥಿಗಳು ಕನ್ನಡ ಬರವಣಿಗೆಯ ಕೌಶಲದಲ್ಲಿ ಶೇಕಡಾ ೨೦ ಕ್ಕಿಂತಲೂ ಕಡಿಮೆ ಅಂಕಗಳನ್ನು ಪಡೆದುಕೊಂಡಿದ್ದಾರೆ. ಲಿಪಿಗ್ರಹಿಕೆಯ ಹಂತದಲ್ಲಿಯೇ ಹಲವಾರು ವಿದ್ಯಾರ್ಥಿಗಳು ಗೊಂದಲವನ್ನು ಅನುಭವಿಸುತ್ತಿದ್ದಾರೆ. ಒಂಭತ್ತು ವರ್ಷಗಳ ನಿರಂತರ ಬೋಧನೆಯು ವಿದ್ಯಾರ್ಥಿಗಳ ಬರವಣಿಗೆಯ ಕೌಶಲದ ಮೇಲೆ ಯಾವ ಪ್ರಭಾವವನ್ನೂ ಬೀರದಿರುವುದು ಅಧ್ಯಯನದಿಂದ ತಿಳಿದುಬಂದಿದೆ. ಕನ್ನಡ ಭಾಷಾ ಕೌಶಲದ ಮೂಲ ಸಾಮರ್ಥ್ಯ ಸಿದ್ಧಿಸದಿರುವುದರಿಂದ ವಿದ್ಯಾರ್ಥಿಗಳಿಗೆ ಸ್ವಾಧ್ಯಾಯವು ಸಾಧ್ಯವಾಗುತ್ತಿಲ್ಲ. ಪ್ರಾಥಮಿಕ ಶಾಲಾ ಶಿಕ್ಷಣದ ಭಾಷಾ ಬೋಧನಾ ಸನ್ನಿವೇಶದಲ್ಲಿ ಮಹತ್ತರವಾದ ಬದಲಾವಣೆಯನ್ನು ತರಬೇಕಾದ ಅನಿವಾರ್ಯತೆಯಿದೆ.

ಹತ್ತನೆಯ ತರಗತಿ. ಬರೆಯುವಿಕೆಯ ಶೇಕಡಾವಾರು ಲೆಕ್ಕಾಚಾರ




| | |
|---|---|
| ೧೦ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರು | ಶೇಕಡಾ ೧೦.೬೦ |
| ೧ ರಿಂದ ೨ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೯.೮೦ |
| ೩ ರಿಂದ ೪ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೩೬.೨೦ |
| ೫ ರಿಂದ ೬ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೨೩ |
| ೭ ರಿಂದ ೮ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೯.೬೦ |
| ೯ ರಿಂದ ೧೦ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೧೦ |

ಹತ್ತನೆಯ ತರಗತಿಯ ಬರಹ ಕೌಶಲದ ಸಾಮರ್ಥ್ಯ ಉಳಿದ ತರಗತಿಯಂತೆಯೇ ಕಳಪೆಯ ಮಟ್ಟದಲ್ಲಿದೆ. ಶೇಕಡಾ ೧೦ ರಷ್ಟು ವಿದ್ಯಾರ್ಥಿಗಳು ಮಾತ್ರ ಅವರ ತರಗತಿಯ ವಾಕ್ಯಗಳನ್ನು ಆಲಿಸಿದಂತೆ ಬರೆಯಬಲ್ಲವರಾಗಿದ್ದಾರೆ. ಶೇಕಡಾ ೨೦.೪೦ ರಷ್ಟು ವಿದ್ಯಾರ್ಥಿಗಳು ಬರಹದ ಕೌಶಲದಲ್ಲಿ ಶೇಕಡಾ ೨೦ ಕ್ಕಿಂತಲೂ ಕಡಿಮೆ ಅಂಕಗಳನ್ನು ಪಡೆದುಕೊಂಡಿದ್ದಾರೆ. ವ್ಯಂಜನಾಕ್ಷರ, ಗುಣಿತಾಕ್ಷರ, ಅನುಸ್ವಾರ, ವಿಸರ್ಗ, ದ್ವಿತ್ವಾಕ್ಷರಗಳು ಬಂದಾಗ ಹೆಚ್ಚಿನ ವಿದ್ಯಾರ್ಥಿಗಳು ಗೊಂದಲಕ್ಕೀಡಾಗುತ್ತಾರೆ. ಅಲ್ಲದೆ ಪಕ್ಕದಲ್ಲಿ ಕುಳಿತವರ ಬರಹದ ಕಡೆ ಗಮನ ಹರಿಸುತ್ತಾರೆ. ಭಾಷಾ ಬೋಧನೆಯು ಪರಿಣಾಮಕಾರಿಯಾಗಿಲ್ಲದಿರುವುದು ಹಾಗೂ ಆಧುನಿಕ ಭಾಷಾ ವಿಜ್ಞಾನದ ಹಿನ್ನೆಲೆಯನ್ನು ಬೋಧನೆಯ ಸಂದರ್ಭಗಳಲ್ಲಿ ಸಮರ್ಪಕವಾಗಿ ಬಳಸಿಕೊಳ್ಳದಿರುವ ಕಾರಣಗಳಿಂದಾಗಿ ಕಲಿಕೆಯ ಸಾಮರ್ಥ್ಯವು ನಿರೀಕ್ಷಿತ ಮಟ್ಟದಲ್ಲಿ ಸಿದ್ಧಿಸಿರುವುದಿಲ್ಲ.

೮, ೯, ೧೦ ನೆಯ ತರಗತಿಯ ೧೫೦೦ ವಿದ್ಯಾರ್ಥಿಗಳ ಬರವಣಿಗೆಯ ಕೌಶಲ




೧೫೦೦ ವಿದ್ಯಾರ್ಥಿಗಳಲ್ಲಿ

| | |
|---|---|
| ೧೦ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರು | ೨೭೭ |
| ೧ ರಿಂದ ೨ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೨೫೧ |
| ೩ ರಿಂದ ೪ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೪೪೫ |
| ೫ ರಿಂದ ೬ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೩೧೦ |
| ೭ ರಿಂದ ೮ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೧೧೪ |
| ೯ ರಿಂದ ೧೦ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ೧೦೩ |

ತರಗತಿಯೊಂದರಲ್ಲಿ ಘಂಟಾಕೃತಿಯಲ್ಲಿ ವಿದ್ಯಾರ್ಥಿಗಳ ಕಲಿಕೆಯ ಹಂದರವಿರುತ್ತದೆ ಎಂಬುದು ಶಿಕ್ಷಣ ತಜ್ಞರ ಅಭಿಪ್ರಾಯ. ಅಂದರೆ ಪ್ರತೀ ತರಗತಿಯಲ್ಲಿ ನಿಧಾನ ಕಲಿಕೆಯವರು, ಮಧ್ಯಮ ಕಲಿಕೆಯವರು ಮತ್ತು ವೇಗವಾಗಿ ಕಲಿಯುವ ವಿದ್ಯಾರ್ಥಿಗಳು ಎಂಬ ವರ್ಗವಿರುತ್ತದೆ. ಇವರ ಸಂಖ್ಯೆಗಳನ್ನು ಕ್ರೋಢೀಕರಿಸಿ ನಕ್ಷೆಯಲ್ಲಿ ತೋರಿಸಿದಾಗ ನಕ್ಷೆಯು ಘಂಟಾಕೃತಿಯಲ್ಲಿರುತ್ತದೆ. ಆದರೆ ಪ್ರೌಢಶಾಲಾ ಪ್ರಸ್ತುತ ಕನ್ನಡ ಮಾಧ್ಯಮ ಹಾಗೂ ಅನುದಾನಿತ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳ ಕನ್ನಡ ಕಲಿಕಾ ಸನ್ನಿವೇಶ ಈ ಆಕೃತಿಯಲ್ಲಿ ಇಲ್ಲದಿರುವುದು ಕಂಡುಬರುತ್ತದೆ. ೧೫೦೦ ವಿದ್ಯಾರ್ಥಿಗಳಲ್ಲಿ ೫೨೮ ವಿದ್ಯಾರ್ಥಿಗಳು ಬರವಣಿಗೆಯ ಕೌಶಲದಲ್ಲಿ ಶೇಕಡಾ ೨೦ ಕ್ಕಿಂತ ಕಡಿಮೆ ಅಂಕಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಹೆಚ್ಚಿನ ವಿದ್ಯಾರ್ಥಿಗಳು ಲಿಪಿಗ್ರಹಿಕೆ ಹಂತದಲ್ಲಿಯೇ ಎಡವುತ್ತಾರೆ. ಆಲಿಸಿದ ಧ್ವನಿಗೆ ಯಾವ ರೇಖಾ ಸಂಕೇತವನ್ನು ಬಳಸಬೇಕೆಂಬ ಗೊಂದಲ ಹಲವು ವಿದ್ಯಾರ್ಥಿಗಳನ್ನು ಕಾಡುತ್ತಿದೆ.

೮, ೯, ೧೦ ನೆಯ ತರಗತಿಯ ೧೫೦೦ ವಿದ್ಯಾರ್ಥಿಗಳ ಬರವಣಿಗೆಯ ಕೌಶಲ




| | |
|---|---|
| ೧೦ ವಾಕ್ಯಗಳಲ್ಲೂ ವ್ಯತ್ಯಾಸ ಮಾಡಿದವರು | ಶೇಕಡಾ ೧೮.೪೬ |
| ೧ ರಿಂದ ೨ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೧೬.೭೩ |
| ೩ ರಿಂದ ೪ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೨೯.೬೬ |
| ೫ ರಿಂದ ೬ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೨೧ |
| ೭ ರಿಂದ ೮ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೭.೬೦ |
| ೯ ರಿಂದ ೧೦ ವಾಕ್ಯಗಳನ್ನು ವ್ಯತ್ಯಾಸವಿಲ್ಲದೆ ಬರೆದವರು | ಶೇಕಡಾ ೭ |

ಕರ್ನಾಟಕದ, ಕನ್ನಡ ಮಾಧ್ಯಮದ, ಕನ್ನಡ ಪರಿಸರದಲ್ಲಿರುವ, ಪ್ರಥಮ ಭಾಷೆ ಕನ್ನಡ ಕಲಿಯುತ್ತಿರುವ ವಿದ್ಯಾರ್ಥಿಗಳ ಕನ್ನಡ ಬರೆಯುವ ಕೌಶಲ ಅತ್ಯಂತ ಆಘಾತಕಾರಿಯಾದ ಸ್ಥಿತಿಯಲ್ಲಿದೆ. ಕನ್ನಡ ಮಾತನಾಡಬಲ್ಲ ವಿದ್ಯಾರ್ಥಿಗಳಿಗೆ ಬರಹ ಕೌಶಲ ಕಲಿಸಲು ಎಂಟು ಹತ್ತು ವರ್ಷಗಳಾದರೂ ಸಾಧ್ಯವಾಗಿಲ್ಲ ಎಂದರೆ ಅದು ಶಿಕ್ಷಣ ಪದ್ಧತಿಯ ದೋಷ ಎಂಬುದರಲ್ಲಿ ಎರಡು ಮಾತಿಲ್ಲ. ಶಿಕ್ಷಣ ಇಲಾಖೆಯ ನೀತಿ ಹಾಗೂ ಅಧ್ಯಾಪಕರ ಬೋಧನೆಗಳಿಂದಾಗಿ ಸಮಸ್ಯೆ ಈ ರೀತಿ ಬೃಹದಾಕಾರದಲ್ಲಿ ಬೆಳೆದಿದೆ. ೧೫೦೦ ವಿದ್ಯಾರ್ಥಿಗಳಲ್ಲಿ ಶೇಕಡಾ ೭ ರಷ್ಟು ವಿದ್ಯಾರ್ಥಿಗಳು ಮಾತ್ರ ಆಲಿಸಿ, ಗ್ರಹಿಸಿದ ಧ್ವನಿಯನ್ನು ನಿರ್ದಿಷ್ಟವಾಗಿ ತಾವು ಕಲಿತುಕೊಂಡಿರುವ ರೇಖಾ ವಿನ್ಯಾಸವಾದ ಲಿಪಿಯೊಂದಿಗೆ ಹೊಂದಿಸಿಕೊಂಡು ವ್ಯತ್ಯಾಸ ಮಾಡದೆ ಬರೆಯುತ್ತಾರೆ. ಶೇಕಡಾ ೩೫.೧೯ ರಷ್ಟು ವಿದ್ಯಾರ್ಥಿಗಳು ಅವರದ್ದೇ ತರಗತಿಯ ೧೦ ವಾಕ್ಯಗಳಲ್ಲಿ ೨ ವಾಕ್ಯಗಳನ್ನೂ ಕೂಡ ಸರಿಯಾಗಿ ಬರೆಯದ ಹಂತದಲ್ಲಿದ್ದಾರೆ. ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು ಕನ್ನಡದ ಕಲಿಕೆಯಲ್ಲಿ ಎದುರಿಸುತ್ತಿರುವ ಅನೇಕ ಸಮಸ್ಯೆಗಳಿಗೆ ಶಿಕ್ಷಣ ಇಲಾಖೆ ಅಗತ್ಯ ಕ್ರಮಗಳನ್ನು ಈ ನಿಟ್ಟಿನಲ್ಲಿ ಕೈಗೊಳ್ಳಬೇಕಿದೆ.

### ೨.೮.೨ ವಿದ್ಯಾರ್ಥಿಗಳ ಬರವಣಿಗೆಯ ಕೌಶಲದಲ್ಲಿನ ಸಮಸ್ಯೆಗಳು

- ದೀರ್ಘಾಕ್ಷರಗಳ ಬಳಕೆ ತಿಳಿಯದಿರುವುದು
- ವೊ, ವೋ, ಹೊ, ಹೋ ಗುರುತಿಸುವಲ್ಲಿ ವಿಫಲತೆ
- ಸ, ಶ, ಷ ಗಳ ಬಳಕೆ ತಿಳಿಯದಿರುವುದು
- ದ್ವಿತ್ವಗಳನ್ನು ಬಳಸುವಲ್ಲಿ ವಿಫಲತೆ
- ಏತ್ವ, ಐತ್ವ, ಓತ್ವಗಳ ಬಳಕೆಯಲ್ಲಿ ಸ್ಪಷ್ಟತೆಯಿಲ್ಲದಿರುವುದು
- ಮಹಾಪ್ರಾಣಗಳನ್ನು ನಿರ್ದಿಷ್ಟ ಅಕ್ಷರಗಳಿಗೆ ಬಳಸದೆ, ಹಿಂದಿನ ಅಥವಾ ಮುಂದಿನ ಅಕ್ಷರಗಳಿಗೆ ಬಳಸುವುದು
- ಅನುಸ್ವಾರದ ಬದಲಿಗೆ ದೀರ್ಘವನ್ನು ಬಳಸುವುದು
- ಅನುಸ್ವಾರ ಮತ್ತು ವಿಸರ್ಗಗಳನ್ನು ನಿರ್ದಿಷ್ಟ ಸ್ಥಳದಲ್ಲಿ ಬಳಸದೆ, ಹಿಂದಿನ ಅಥವಾ ಮುಂದಿನ ಅಕ್ಷರಗಳಿಗೆ ಬಳಸುವುದು
- ಒತ್ತುಗಳನ್ನು ಹಿಂದಿನ ಅಥವಾ ಮುಂದಿನ ಅಕ್ಷರಗಳಿಗೆ ಕೊಡುವುದು
- ಅರ್ ಕಾರದ ಒತ್ತನ್ನು ಸಮರ್ಪಕ ಸ್ಥಳದಲ್ಲಿ ಬಳಸಲು ಬಾರದಿರುವುದು
- ೯ , ೃ , ್ರ ಚಿಹ್ನೆಗಳ ಬಳಕೆಯಲ್ಲಿ ಗೊಂದಲ
- ಲ ಮತ್ತು ಳ ಕಾರಗಳನ್ನು ಗ್ರಹಿಸುವಲ್ಲಿ ಗೊಂದಲ
- ತ ಮತ್ತು ಕ, ಅಕ್ಷರಗಳನ್ನು ಒಂದೇ ರೀತಿಯಲ್ಲಿ ಬರೆಯುವುದು
- ದ ಮತ್ತು ವ ಅಕ್ಷರಗಳನ್ನು ಒಂದೇ ರೀತಿಯಲ್ಲಿ ಬರೆಯುವುದು
- ಅಡಿವೊತ್ತುಗಳ ಆಕಾರ ವಿಭಿನ್ನವಾಗಿರುವುದು
- ಎರಡೆರಡು ದೀರ್ಘಗಳನ್ನು ಬಳಸುವುದು
- ಅಕ್ಷರಗಳನ್ನು ಸ್ಫುಟವಾಗಿ ಬರೆಯದಿರುವುದು, ತಲೆಗಟ್ಟನ್ನು ಸರಿಯಾಗಿ ಕೊಡದಿರುವುದು
- ಬರೆಯುವಾಗ ಅಕ್ಷರಗಳನ್ನು ಬಿಟ್ಟು ಬರೆಯುವುದು
- ಅಕ್ಷರ ಅಕ್ಷರ, ಪದ ಪದಗಳ ನಡುವೆ ಸ್ಥಳ ಬಿಡದಿರುವುದು
- ಒಂದು ಪದ ಅಥವಾ ವಾಕ್ಯವನ್ನು ಬರೆಯಲು ಬಹಳಷ್ಟು ಸಮಯ ತೆಗೆದುಕೊಳ್ಳುವುದು
- ಪ್ರಬಂಧ ಮಾದರಿಯ ಉತ್ತರಗಳನ್ನು ಬರೆಯಲು ಕಷ್ಟಪಡುವುದು
- ಸ್ವಂತ ರಚನೆ ಸಾಧ್ಯವಾಗದಿರುವುದು

**ಕಾರಣಗಳು:**

ಪ್ರೌಢಶಾಲಾ ವಿದ್ಯಾರ್ಥಿಗಳ ಕನ್ನಡ ಭಾಷೆಯ ಓದುವಿಕೆ ಹಾಗೂ ಬರವಣಿಗೆಯ ಕೌಶಲದ ಸಮಸ್ಯೆಗಳ ಕುರಿತು ಕನ್ನಡ ಅಧ್ಯಾಪಕರೊಂದಿಗೆ, ಮುಖ್ಯೋಪಾಧ್ಯಾಯರೊಡನೆ, ಪೋಷಕರೊಡನೆ, ವಿದ್ಯಾರ್ಥಿಗಳೊಡನೆ ನಡೆಸಿದ ಚರ್ಚೆ ಮತ್ತು ಅವಲೋಕನ ವಿಧಾನದಲ್ಲಿ ಗಮನಿಸಿದ ಅಂಶಗಳ ಆಧಾರದಲ್ಲಿ ಈ ಕೆಳಕಂಡಂತೆ ಕಾರಣಗಳನ್ನು ಗುರುತಿಸಲಾಗಿದೆ.

**೧) ವಿದ್ಯಾರ್ಥಿಗಳು ಕಾರಣ:**

- ಕಲಿಕೆಯಲ್ಲಿ ಆಸಕ್ತಿ ಇಲ್ಲದಿರುವುದು, ವಿದ್ಯೆಯ ಮಹತ್ವ ತಿಳಿಯದಿರುವುದು
- ವಿದ್ಯಾರ್ಥಿಗಳ ಅನಿಯಮಿತ ಗೈರುಹಾಜರಿ
- ವಿದ್ಯಾರ್ಥಿಗಳ ಕೌಟುಂಬಿಕ ಹಿನ್ನಲೆ, ಅನಕ್ಷರತೆ, ಬಡತನ, ಇತ್ಯಾದಿ
- ಏಕಾಗ್ರತೆಯ ಕೊರತೆ, ಕ್ರಮಬದ್ಧ ಆಲಿಸುವಿಕೆಯ ಕೊರತೆ
- ಉತ್ತಮ ಶೈಕ್ಷಣಿಕ ಪರಿಸರದ ಕೊರತೆ
- ಮಕ್ಕಳಲ್ಲಿಯೇ ಇರುವ ಕೆಲವು ಕಲಿಕಾ ದೋಷಗಳು
- ಪ್ರಾಥಮಿಕ ಶಾಲೆಗಳಲ್ಲಿ ಅಕ್ಷರ, ಪದ, ವಾಕ್ಯಗಳ ರಚನೆ ಮತ್ತು ಸ್ಪಷ್ಟವಾದ ಉಚ್ಚಾರ ಕ್ರಮವನ್ನು ಕಲಿಯದಿರುವುದು
- ಕಲಿಕೆಗೆ ಬೇಕಾದ ಶಿಸ್ತನ್ನು ವಿದ್ಯಾರ್ಥಿ ಜೀವನದಲ್ಲಿ ರೂಢಿಸಿಕೊಳ್ಳದಿರುವುದು
- ಮಾತೃಭಾಷೆ ಹಾಗೂ ಪರಿಸರದ ಭಾಷೆ ಭಿನ್ನವಾಗಿದ್ದಲ್ಲಿ ವಿದ್ಯಾರ್ಥಿ ಕನ್ನಡ ಕಲಿಕೆಯಲ್ಲಿ ತುಸು ಹಿಂದುಳಿಯಬಹುದು

**೨) ಶಿಕ್ಷಕರು ಕಾರಣ:**

- ನುರಿತ, ಪರಿಣತ, ಸೃಜನಶೀಲ ಭಾಷಾ ಶಿಕ್ಷಕರ ಕೊರತೆ
- ಭಾಷಾ ಬೋಧನೆಯ ಹಿನ್ನೆಲೆಯಲ್ಲಿ ಬೇಕಾಗುವ ಸಂಗೀತ, ಸಾಹಿತ್ಯ, ನಟನೆ, ನಾಟ್ಯ, ಗಮಕ ಮೊದಲಾದ ಸಾಂಸ್ಕೃತಿಕ ಆಸಕ್ತಿ ಇಲ್ಲದಿರುವುದು
- ಆಕರ್ಷಕ ಬೋಧನೆಯಿಲ್ಲದಿರುವುದು
- ಭಾಷಾ ಬೋಧನೆಗೆ ತಂತ್ರಜ್ಞಾನಗಳನ್ನು ಬಳಸದಿರುವುದು
- ವಿದ್ಯಾರ್ಥಿಗಳ ಮೇಲೆ ವೈಯಕ್ತಿಕ ಗಮನ ನೀಡುವುದಿಲ್ಲ
- ಬೋಧನೆಯ ಹೊರತಾದ ಹೊಣೆಗಾರಿಕೆಗಳ ಒತ್ತಡದಿಂದ ಬೋಧನೆಯಲ್ಲಿ ನಿರಾಸಕ್ತಿ
- ಆಧುನಿಕ ತಂತ್ರಜ್ಞಾನದ ಬಳಕೆ ತಿಳಿದಿರದಿರುವುದು

- ಶಿಕ್ಷಕರು ಆಕರ್ಷಕ ಬೋಧನಾ ವ್ಯಕ್ತಿತ್ವ ಹೊಂದಿಲ್ಲದಿರುವುದು
- ಅಂಕಗಳ ಅಥವಾ ಮೌಲ್ಯಮಾಪನ ಆಧಾರಿತವಾದ ಬೋಧನೆ
- ಮಕ್ಕಳಲ್ಲಿ ತರತಮ ಭಾವವನ್ನು ತೋರುವುದು
- ಶಿಕ್ಷಕರಿಂದ ವಿದ್ಯಾರ್ಥಿಗಳಿಗೆ ದೈಹಿಕ, ಮಾನಸಿಕ ಕಿರುಕುಳ
- ವಿದ್ಯಾರ್ಥಿಗಳ ಮನಃಶಾಸ್ತ್ರವನ್ನು ತಿಳಿದಿರದ ಶಿಕ್ಷಕರು
- ಅಧ್ಯಾಪಕರಲ್ಲಿ ಸ್ವಯಂಶಿಸ್ತು, ದಕ್ಷತೆ, ಸೇವಾಮನೋಭಾವಗಳು ಕಡಿಮೆಯಾಗುತ್ತಿರುವುದು
- ಶಾಲೆಗಳಲ್ಲಿ ಪ್ರೋತ್ಸಾಹದಾಯಕ ವಾತಾವರಣವಿಲ್ಲದಿರುವುದು
- ವಿದ್ಯಾರ್ಥಿಗಳ ಕಲಿಕಾ ಸಮಸ್ಯೆಗಳ ಕುರಿತು ಕಿರು ಸಂಶೋಧನೆಗಳನ್ನು ಮಾಡುವ ಆಸಕ್ತಿ ಇಲ್ಲದಿರುವುದು
- ಆಧುನಿಕ ಭಾಷಾ ವಿಜ್ಞಾನದ ಆವಿಷ್ಕಾರಗಳನ್ನು ತಿಳಿಯದಿರುವುದು
- ಕನ್ನಡ ಭಾಷಾ ಬೋಧನೆಯ ಪಠ್ಯವಸ್ತು ಮತ್ತು ಪಠ್ಯಕ್ರಮಗಳ ಆಳವಾದ ಅರಿವು ಇಲ್ಲದಿರುವುದು
- ಪಠ್ಯಪುಸ್ತಕದಲ್ಲಿರುವ ವಿಚಾರಗಳಿಗೆ ಮಾತ್ರ ಪ್ರಾಮುಖ್ಯ ಕೊಡುವವರು
- ಸಾಂಪ್ರದಾಯಿಕ ಪದ್ಧತಿಯಲ್ಲಿಯೇ ಬೋಧನೆಯನ್ನು ಮಾಡುತ್ತಿರುವುದು
- ಮರುಬೋಧನೆ, ಮರುಮೌಲ್ಯಮಾಪನ, ಅವುಗಳ ದಾಖಲೆ ನಿರ್ವಹಣೆ ತಲೆನೋವಿನ ಕೆಲಸ. ಹೇಗಾದರೂ ಮಾಡಿ ೩೫ ಅಂಕಗಳನ್ನು ನೀಡಿದರೆ ಕೆಲಸ ಸುಲಭವಾಗುತ್ತದೆ ಎಂಬ ಧೋರಣೆ
- ಹೆಚ್ಚು ರಜೆ ಸಿಗುವ ಇಲಾಖೆ ಎಂಬ ಕಾರಣ, ಸರ್ಕಾರಿ ನೌಕರಿ ಎಂಬ ಕಾರಣಕ್ಕಾಗಿ ಶಿಕ್ಷಣ ಕ್ಷೇತ್ರಕ್ಕೆ ಬರುವವರು
- ಬೈಗುಳ, ಬೆದರಿಕೆ, ಭಯದ ವಾತಾವರಣ ನಿರ್ಮಿಸುವ ಶಿಕ್ಷಕರು
- ಬೋಧನೆಗಿಂತ ಬಡ್ಡಿ ವ್ಯವಹಾರ, ಭೂ ಪರಭಾರೆ, ವ್ಯಾಪಾರ-ವಹಿವಾಟು, ಕೃಷಿ ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವವರು
- ದುಶ್ಚಟ-ದುರಭ್ಯಾಸ, ವ್ಯಸನಗಳಿಗೆ ಬಲಿಯಾದವರು

**೩) ಪ್ರಾಥಮಿಕ ಶಾಲಾ ಶಿಕ್ಷಣ ಕಾರಣ:**

- ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಬೋಧನೆಗಿಂತ ಲಿಪಿಕ ಕೆಲಸಗಳೇ ಹೆಚ್ಚಾಗಿವೆ
- ಪ್ರಾಥಮಿಕ ಶಾಲಾ ಶಿಕ್ಷಣ ಪದ್ಧತಿ ಅವೈಜ್ಞಾನಿಕವಾಗಿದೆ

- ಪ್ರಾಥಮಿಕ ಶಾಲಾ ಶಿಕ್ಷಕರಿಗೆ ತರಬೇತಿ ಕಾರ್ಯಕ್ರಮಗಳೇ ಹೆಚ್ಚು
- ಪ್ರಾಥಮಿಕ ಶಾಲಾ ಶಿಕ್ಷಕರು ಹೆಚ್ಚು ಕುಶಲಿಗರಾಗಿಲ್ಲದಿರುವುದು
- ಪ್ರಾಥಮಿಕ ಶಾಲಾ ಕನ್ನಡ ಬೋಧನೆಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಂಡಿಲ್ಲ
- ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಭಾಷಾ ಶಿಕ್ಷಕರಿಲ್ಲ
- ಆಧುನಿಕ ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ಕನ್ನಡದ ಬೋಧನೆ ಆಗುತ್ತಿಲ್ಲ
- ವರ್ಣಮಾಲೆ, ಅಕ್ಷರ ರಚನೆ, ಪದರಚನೆ, ಉಚ್ಚಾರಣೆಗಳನ್ನು ಕ್ರಮಬದ್ಧವಾಗಿ ಕಲಿಸದಿರುವುದು.
- ಭಾಷಾ ಪ್ರಯೋಗಶಾಲೆಗಳಿಲ್ಲದಿರುವುದು
- ಶಿಕ್ಷಕ ವೃತ್ತಿಯನ್ನು ಜವಾಬ್ದಾರಿಯುತವಾಗಿ ನಿರ್ವಹಿಸದಿರುವುದು
- ವಿದ್ಯಾರ್ಥಿಗಳ ಆವಶ್ಯಕತೆಗಳಿಗನುಗುಣವಾಗಿ ಬೋಧನೆ ಮಾಡದಿರುವುದು.

**೪) ಸರಕಾರದ ನಿಯಮಗಳು ಕಾರಣ:**

- ವಿದ್ಯಾರ್ಥಿಗಳನ್ನು ಅನುತ್ತೀರ್ಣಗೊಳಿಸಬಾರದೆಂಬ ಧೋರಣೆಯಿಂದಾಗಿ ಅಕ್ಷರಗಳನ್ನು ಗುರುತಿಸಲು ಬರದಿದ್ದ ವಿದ್ಯಾರ್ಥಿಗಳು ಕೂಡಾ ತೇರ್ಗಡೆಗೊಳ್ಳುತ್ತಿದ್ದಾರೆ
- ವಿದ್ಯಾರ್ಥಿಗಳನ್ನು ದಂಡಿಸಬಾರದೆಂಬ ಕಾನೂನಿನಿಂದಾಗಿ ಶಿಕ್ಷಕರು ವಿದ್ಯಾರ್ಥಿಗಳ ಕಲಿಕಾ ಹಿನ್ನೆಡೆಯನ್ನು ನಿರ್ಲಕ್ಷಿಸುತ್ತಿದ್ದಾರೆ
- ಶಾಲೆ ಮತ್ತು ವಿದ್ಯಾರ್ಥಿಗಳಿಗೆ ನೀಡುವ ಭೌತಿಕ ಸೌಲಭ್ಯಗಳನ್ನು ಮಾತ್ರ ಶಿಕ್ಷಣದ ಬೆಳವಣಿಗೆ ಎಂದು ತಿಳಿದು ಕಲಿಕಾ ಸನ್ನಿವೇಶಗಳ ಸೌಲಭ್ಯಗಳನ್ನು ಸರಕಾರ ಕಡೆಗಣಿಸಿರುವುದು
- ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಔದ್ಯೋಗಿಕ ಕ್ಷೇತ್ರಗಳಲ್ಲಿ ಮತ್ತು ತಾಂತ್ರಿಕ ಕ್ಷೇತ್ರಗಳಲ್ಲಿ ಸೂಕ್ತ ವೇದಿಕೆ ಕಲ್ಪಿಸದಿರುವುದು
- ಆಡಳಿತದಲ್ಲಿ ಕನ್ನಡವನ್ನು ಕಡ್ಡಾಯವಾಗಿ ಜಾರಿಗೆ ತರದಿರುವುದು
- ಶಾಲಾ ಸೌಲಭ್ಯಗಳು ಆಕರ್ಷಕವಾಗಿಲ್ಲದಿರುವುದರಿಂದ ಉತ್ತಮ ಗುಣಮಟ್ಟದ ಮತ್ತು ಬುದ್ಧಿವಂತ ವಿದ್ಯಾರ್ಥಿಗಳು ಆಂಗ್ಲ ಮಾಧ್ಯಮಗಳಿಗೆ ಸಾಗುತ್ತಿದ್ದಾರೆ
- ಶಿಕ್ಷಕರ ಕಿರು ಸಂಶೋಧನೆ, ಸಂಶೋಧನೆಗಳಿಗೆ ಸೌಲಭ್ಯ ಮತ್ತು ಪ್ರೋತ್ಸಾಹ ಕಲ್ಪಿಸದಿರುವುದು

- ವಸ್ತುನಿಷ್ಠ ಪ್ರಶ್ನೆಗಳ ಅಳವಡಿಕೆ
- ಅಧ್ಯಾಪಕರಿಗೆ ಹೆಚ್ಚಿನ ಬೋಧನಾ ಅವಧಿಯನ್ನು ನಿಗದಿಪಡಿಸಿರುವುದು
- ಭಾಷಾ ಕೌಶಲಗಳ ಮೌಲ್ಯಮಾಪನ ಪ್ರಕ್ರಿಯೆಯಲ್ಲಿ ಕೇವಲ ಬರಹ ಕೇಂದ್ರಿತವಾದ ಮೌಲ್ಯಮಾಪನ ಪದ್ಧತಿಯ ಅನುಷ್ಠಾನ
- ಬೋಧನಾ ವಿಚಾರಗಳನ್ನೆಲ್ಲ ವರದಿ ಮಾಡಬೇಕೆಂಬ ನಿಯಮದಿಂದ ಶಿಕ್ಷಕರು ಬೋಧನೆಗಿಂತ ವರದಿ ತಯಾರಿಕೆಗೆ, ದಾಖಲೆ ನಿರ್ವಹಣೆಗೆ ಹೆಚ್ಚು ಗಮನ ಕೊಡುತ್ತಾರೆ
- ಶಿಕ್ಷಕರಿಗೆ ಮೌಲ್ಯಮಾಪನಗಳಿಲ್ಲದಿರುವುದು ಮತ್ತು ಭಾಷಾ ಬೋಧನೆಯ ಹಿನ್ನೆಲೆಯ ಮೇಲ್ವಿಚಾರಣೆಯಿಲ್ಲದಿರುವುದು
- ಬಿ.ಎಡ್ ತರಬೇತಿಗೂ ಪ್ರೌಢಶಾಲಾ ವಾಸ್ತವಕ್ಕೂ ಹೊಂದಿಕೆ ಇಲ್ಲದಿರುವುದು
- ತರಬೇತಿ ಕಾರ್ಯಕ್ರಮಗಳು ಸಿದ್ಧಾಂತಕ್ಕೆ ಮಾತ್ರ ಸೀಮಿತವಾಗಿದ್ದು ತರಗತಿಯ ಅಳವಡಿಕೆಗೆ ಅನುಕೂಲವಾಗಿಲ್ಲದಿರುವುದು
- ಕನ್ನಡ ಕಲಿಕಾ ತರಗತಿಗಳೆಂದರೆ ನಾಲ್ಕು ಗೋಡೆಗಳಿರುವ ಕಟ್ಟಡ ಎಂಬ ಸಾಂಪ್ರದಾಯಿಕ ಧೋರಣೆ ಹೊಂದಿರುವುದು
- ಕನ್ನಡ ಭಾಷಾ ಪ್ರಯೋಗಾಲಯ, ತಾಲೀಮು ಕೊಠಡಿ, ರಂಗಸಜ್ಜಿಕೆಗಳನ್ನು ನಿರ್ಮಿಸದಿರುವುದು
- ಭಾಷಾ ಶಿಕ್ಷಣದೊಡನೆ ಮೌಲ್ಯ ಶಿಕ್ಷಣ ವಿಚಾರಗಳನ್ನು ಸೇರಿಸಿರುವುದು
- ಶಿಕ್ಷಣ ಕೇತ್ರದಲ್ಲಿ ಮೀಸಲಾತಿಯನ್ನು ಕೈಬಿಡದಿರುವುದು
- ಶಿಕ್ಷಕರ ತರಬೇತಿ ಹಾಗೂ ನೇಮಕಾತಿಯಲ್ಲಿ ನೈಪುಣ್ಯಾ ಪರೀಕ್ಷೆ, ಬೋಧನಾ ಸಾಮರ್ಥ್ಯಗಳ ಪರೀಕ್ಷೆ, ವಿದ್ಯಾರ್ಥಿಗಳ ಮನೋಭಾವಕ್ಕೆ ಪೂರಕ ಮತ್ತು ಪ್ರೇರಕವಾಗುವ ವ್ಯಕ್ತಿತ್ವದ ಗಣನೆ ಮೊದಲಾದ ವಿಚಾರಗಳನ್ನು ಗಮನಿಸದಿರುವುದು.
- ಭಾಷಾ ಬೋಧನೆಗೆ ಬೇಕಾದ ಮೂಲ ಸೌಕರ್ಯಗಳನ್ನು ಶಾಲೆಗಳಿಗೆ ಒದಗಿಸದಿರುವುದು
- ಪ್ರಾಥಮಿಕ ಶಾಲೆಗಳಿಗೆ ಲಿಪಿಕ ಹಾಗೂ ಡಿ ದರ್ಜೆಯ ನೌಕರರನ್ನು ನೇಮಿಸದಿರುವುದು.
- ಮೌಲ್ಯಶಿಕ್ಷಣವನ್ನು ಅಳವಡಿಸದಿರುವುದು

**೫) ಪೋಷಕರು ಕಾರಣ:**

- ಪೋಷಕರು ಅನಕ್ಷರಸ್ಥರಾಗಿರುವುದು
- ಮಕ್ಕಳ ವಿದ್ಯಾಭ್ಯಾಸದ ಕುರಿತು ಕಾಳಜಿ ಇಲ್ಲದಿರುವುದು
- ಬಡತನ, ಅಲೆಮಾರಿ ಜೀವನ
- ಮಕ್ಕಳ ಶಿಕ್ಷಣದ ಕುರಿತು ಪ್ರೋತ್ಸಾಹ ನೀಡದಿರುವುದು
- ಮಕ್ಕಳನ್ನು ಕೂಲಿ, ಅಂಗಡಿ ಮುಂಗಟ್ಟುಗಳಿಗೆ ಕೆಲಸಕ್ಕೆ ಕಳುಹಿಸುವುದು
- ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ಕೊಡದಿರುವುದು
- ಕುಟುಂಬ ನಿರ್ವಹಣೆಗಾಗಿ ಮಕ್ಕಳನ್ನು ಶಾಲೆಗೆ ಸರಿಯಾಗಿ ಕಳುಹಿಸದಿರುವುದು

ಪ್ರೌಢಶಾಲಾ ವಿದ್ಯಾರ್ಥಿಗಳು ಕನ್ನಡ ಕಲಿಕೆಯಲ್ಲಿ ಹಾಗೂ ಕನ್ನಡ ಭಾಷಾ ಕೌಶಲಗಳ ಗಳಿಕೆಯಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದು ಅವುಗಳಿಗೆ ಈ ಮೇಲಿನ ಕಾರಣಗಳನ್ನು ಕಂಡುಕೊಳ್ಳಲಾಗಿದೆ. ಆದಷ್ಟು ಜಾಗರೂಕತೆಯಿಂದ ಈ ಸಮಸ್ಯೆಗಳನ್ನು ಗಂಭೀರವಾಗಿ ಪರಿಗಣಿಸಬೇಕಾದ ಅನಿವಾರ್ಯತೆಯಿದೆ. ಶಿಕ್ಷಕರು, ಪೋಷಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಎಲ್ಲರೂ ಹೊಣೆಯನ್ನು ಒಬ್ಬರಮೇಲೊಬ್ಬರು ಹೊರಿಸುವುದರಲ್ಲಿ ಸಮಸ್ಯೆ ಬಗೆಹರಿಯುವುದಿಲ್ಲವೆಂಬುದನ್ನು ಮನಗಾಣಬೇಕಿದೆ. ಶಿಕ್ಷಣ ತಜ್ಞರ ಅಭಿಪ್ರಾಯದಂತೆ ಕನ್ನಡ ಮನೆಮಾತಾದ ಮಕ್ಕಳಿಗೆ ಕನ್ನಡ ಭಾಷೆಯ ಲಿಪಿಗ್ರಹಿಕೆಯನ್ನು ಮಾಡಿಸಲು ಹೆಚ್ಚು ಸಮಯ ತೆಗೆದುಕೊಳ್ಳಬೇಕಾಗಿಲ್ಲ. ಆಧುನಿಕ ಬೋಧನಾ ವಿಧಾನಗಳನ್ನು, ತಂತ್ರಗಳನ್ನು ಅಳವಡಿಸಿಕೊಂಡಲ್ಲಿ ಕಲಿಕೆಯ ಅನೇಕ ಸಮಸ್ಯೆಗಳನ್ನು ಬಗೆಹರಿಸಬಹುದಾಗಿದೆ. ಸರ್ಕಾರ, ಇಲಾಖೆ, ಶಿಕ್ಷಕರು, ಪೋಷಕರು ಹಾಗೂ ವಿದ್ಯಾರ್ಥಿಗಳು ಈ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನವನ್ನು ಮಾಡಬೇಕಿದೆ.

**೨.೯ ಆಶುಭಾಷಣ ಕೌಶಲ. ೮, ೯ ಹಾಗೂ ೧೦ ನೆಯ ತರಗತಿಗಳ ವಾಸ್ತವ ಚಿತ್ರಣ**

ವಿದ್ಯಾರ್ಥಿಗಳು ಈಗಾಗಲೇ ಕಲಿತಿರುವ ಕೆಲವು ವಿಚಾರಗಳಿಗೆ ಸಂಬಂಧಿಸಿದಂತೆ ಹಾಗೂ ವಿದ್ಯಾರ್ಥಿಗಳ ಮಟ್ಟಕ್ಕೆ ನಿಲುಕುವ ಮನೆ, ತಾಯಿ, ಗುರು, ವಿದ್ಯೆ, ಹಸು, ಶಾಲೆ, ಭಾರತ ಇತ್ಯಾದಿ ಪದಗಳನ್ನು ಆಯ್ಕೆ ಮಾಡಲಾಯಿತು. ಪ್ರತ್ಯೇಕ ಕಾಗದಗಳಲ್ಲಿ ಪದಗಳನ್ನು ಬರೆದು ಆಶುಭಾಷಣಕ್ಕಾಗಿ ವಿದ್ಯಾರ್ಥಿಗಳನ್ನು ಕರೆಯಲಾಯಿತು.

ಸ್ವಯಂ ಪ್ರೇರಣೆಯಿಂದ ವಿದ್ಯಾರ್ಥಿಗಳು ಮುಂದೆ ಬರದಿದ್ದಾಗ ಯಾದೃಚ್ಛಿಕವಾಗಿ ನಾಲ್ಕು ವಿದ್ಯಾರ್ಥಿಗಳನ್ನು ಕರೆಯಲಾಯಿತು. ವಿದ್ಯಾರ್ಥಿಗಳ ಭಾಷಾಸಾಮರ್ಥ್ಯ, ಸಭಾಕಂಪನ, ಸಮಯಪ್ರಜ್ಞೆ, ಸೃಜನಶೀಲತೆ, ಧೈರ್ಯ, ಭಾಷಾಶೈಲಿ ಇತ್ಯಾದಿ ಅಂಶಗಳನ್ನು ಗಮನಿಸಲಾಗಿದೆ. ಮೌಲ್ಯಮಾಪನಕ್ಕಾಗಿ ಸಿದ್ಧಪಡಿಸಿಕೊಂಡ ಮೌಲ್ಯಮಾಪನ ತಖ್ತೆಯಲ್ಲಿ ವಿದ್ಯಾರ್ಥಿಗಳ ಭಾಷಿಕ ವಿಚಾರಗಳನ್ನು ನಮೂದಿಸಿಕೊಳ್ಳಲಾಗಿದೆ. ನಂತರ ಅದನ್ನು ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ.




ಮೊದಲನೆಯ ಸಾಲು – ಸ್ವಪ್ರೇರಣೆಯಿಂದ ಬಂದವರು

ಎರಡನೆಯ ಸಾಲು – ನಿರರ್ಗಳವಾಗಿ ಮಾತನಾಡುವವರು

ಮೂರನೆಯ ಸಾಲು – ಸಾಧಾರಣ ಸಾಮರ್ಥ್ಯ ಉಳ್ಳವರು

ನಾಲ್ಕನೆಯ ಸಾಲು – ಒಂದೆರಡು ಮಾತುಗಳನ್ನು ಆಡಿದವರು

ಐದನೆಯ ಸಾಲು – ಸಭಾ ಕಂಪನ, ಹಿಂಜರಿಕೆ, ನಾಚಿಕೆ, ಕೀಳರಿಮೆ ಇರುವವರು

ಪ್ರತೀ ತರಗತಿಯಲ್ಲಿ ೨೦೦ ವಿದ್ಯಾರ್ಥಿಗಳನ್ನು ಆಯ್ದುಕೊಳ್ಳಲಾಗಿದ್ದು ಎಂಟನೆಯ ತರಗತಿಯಲ್ಲಿ ೧೧೭ ವಿದ್ಯಾರ್ಥಿಗಳು ಸಭಾ ಕಂಪನ, ಹಿಂಜರಿಕೆ, ನಾಚಿಕೆ, ಕೀಳರಿಮೆಯಿಂದ ಬಳಲುತ್ತಿದ್ದಾರೆ. ಒಂಭತ್ತನೆಯ ತರಗತಿಯಲ್ಲಿ ಆಯ್ದುಕೊಂಡ ೨೦೦ ವಿದ್ಯಾರ್ಥಿಗಳಲ್ಲಿ ೧೨೬ ವಿದ್ಯಾರ್ಥಿಗಳು ಸಭಾ ಕಂಪನ, ಹಿಂಜರಿಕೆ, ನಾಚಿಕೆ, ಕೀಳರಿಮೆಯಿಂದ ಬಳಲುತ್ತಿದ್ದಾರೆ. ಇನ್ನು ಹತ್ತನೆಯ ತರಗತಿಯ ೨೦೦ ವಿದ್ಯಾರ್ಥಿಗಳಲ್ಲಿ ೧೧೬ ವಿದ್ಯಾರ್ಥಿಗಳು ಸಭಾ ಕಂಪನ, ಹಿಂಜರಿಕೆ, ನಾಚಿಕೆ, ಕೀಳರಿಮೆಯ ಸ್ವಭಾವದವರಾಗಿದ್ದಾರೆ.

## ೮, ೯ ಹಾಗೂ ೧೦ನೆಯ ತರಗತಿಗಳ ಆಶುಭಾಷಣ ಸಂದರ್ಭದ ವಾಸ್ತವ ಸ್ಥಿತಿ




೧ – ಸ್ವಪ್ರೇರಣೆಯಿಂದ ಬಂದವರು

೨ – ನಿರರ್ಗಳವಾಗಿ ಮಾತನಾಡುವವರು

೩ – ಸಾಧಾರಣ ಸಾಮರ್ಥ್ಯ ಉಳ್ಳವರು

೪ – ಒಂದೆರಡು ಮಾತುಗಳನ್ನು ಆಡಿದವರು

೫ – ಸಭಾ ಕಂಪನ, ಹಿಂಜರಿಕೆ, ನಾಚಿಕೆ, ಕೀಳರಿಮೆ ಇರುವವರು

ಸರಕಾರಿ ಹಾಗೂ ಅನುದಾನಿತ ಪ್ರೌಢಶಾಲೆಗಳ ವಿದ್ಯಾರ್ಥಿಗಳಲ್ಲಿ ಕನ್ನಡ ಭಾಷೆಯಲ್ಲಿ ನಿರರ್ಗಳವಾಗಿ ಮಾತನಾಡಲಾರರು. ಪ್ರಾಥಮಿಕ ಶಾಲೆಯ ಏಳು ವರ್ಷಗಳ ಕನ್ನಡದ ಕಲಿಕೆ ವಿದ್ಯಾರ್ಥಿಗಳ ಭಾಷಾ ಕೌಶಲಗಳನ್ನು ಉತ್ತಮಪಡಿಸಿಲ್ಲ. ಪ್ರೌಢಶಾಲೆಗಳ ಶೇಕಡಾ ೨.೩೩ ರಷ್ಟು ವಿದ್ಯಾರ್ಥಿಗಳು ಮಾತ್ರ ನಿರರ್ಗಳವಾಗಿ ಮಾತನಾಡುತ್ತಾರೆ. ಶೇಕಡಾ ೪.೮೩ ರಷ್ಟು ವಿದ್ಯಾರ್ಥಿಗಳು ಸಾಧಾರಣ ಸಾಮರ್ಥ್ಯ ಹೊಂದಿದ್ದಾರೆ. ಶೇಕಡಾ ೨೨.೮೩ ರಷ್ಟು ವಿದ್ಯಾರ್ಥಿಗಳು ಒಂದೆರಡು ವಾಕ್ಯಗಳನ್ನು ಹೇಳಬಲ್ಲವರಾಗಿದ್ದಾರೆ. ಶೇಕಡಾ ೫೯.೮೩ರಷ್ಟು ವಿದ್ಯಾರ್ಥಿಗಳು ಸಭಾ ಕಂಪನ, ಹಿಂಜರಿಕೆ, ನಾಚಿಕೆ, ಕೀಳರಿಮೆಯಿಂದ ಬಳಲುತ್ತಿದ್ದಾರೆ. ಏಳು ಎಂಟು ವರ್ಷಗಳ ಕನ್ನಡ ಕಲಿಕೆಯಿಂದ ಆಗಬಹುದಾದ ಸೃಷ್ಟಿಶೀಲತೆ ಈ ವಿದ್ಯಾರ್ಥಿಗಳಲ್ಲಿ ಆಗಿಲ್ಲ. ಭಾಷಾ ಕೌಶಲಗಳು ಈ ವಿದ್ಯಾರ್ಥಿಗಳಿಗೆ ಕರಗತವಾಗಿಲ್ಲ.

ಸ್ವಪ್ರೇರಣೆಯಿಂದ ಆಶುಭಾಷಣಕ್ಕೆ ಬರುವವರಲ್ಲಿ ಎಂಟನೆಯ ತರಗತಿಯ ವಿದ್ಯಾರ್ಥಿಗಳಲ್ಲಿ ಉತ್ಸಾಹವಿದೆ. ಒಂಭತ್ತರಲ್ಲಿ ತುಸು ಕಡಿಮೆಯಾಗುತ್ತದೆ. ಹತ್ತನೆಯ ತರಗತಿಯಲ್ಲಿ ಈ ಉತ್ಸಾಹ ಮತ್ತಷ್ಟು ಕಡಿಮೆಯಾಗಿರುವುದು ಕಂಡುಬರುತ್ತದೆ. ಉದ್ದೇಶಗಳಲ್ಲಿ ಏರಿಕೆಯ ಕ್ರಮವಿದ್ದರೆ ವಾಸ್ತವದಲ್ಲಿ ಇಳಿಕೆಯ ಕ್ರಮವಿದೆ.

## ೨.೧೦ ಗಾಯನ ಕೌಶಲ. ೮, ೯ ಹಾಗೂ ೧೦ ನೆಯ ತರಗತಿಗಳ ವಾಸ್ತವ ಚಿತ್ರಣ.

ರಾಜ್ಯದ ವಿವಿಧ ಜಿಲ್ಲೆಗಳಿಂದ ಎಂಟು, ಒಂಭತ್ತು ಹಾಗೂ ಹತ್ತನೆಯ ತರಗತಿಯಲ್ಲಿನ ವಿದ್ಯಾರ್ಥಿಗಳನ್ನು ಗಾಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರತೀ ತರಗತಿಯಲ್ಲಿ ರಾಜ್ಯದ ಒಟ್ಟು ೨೦೦ ವಿದ್ಯಾರ್ಥಿಗಳನ್ನು ಬಳಸಿಕೊಳ್ಳಲಾಗಿದೆ. ಆಸಕ್ತರನ್ನು ಮೊದಲು ಕರೆಯಲಾಗಿದ್ದು ವಿದ್ಯಾರ್ಥಿಗಳು ಮುಂದೆ ಬರದಿದ್ದಾಗ ಯಾದೃಚ್ಚಿಕವಾಗಿ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲಾಗಿದೆ. ಮೌಲ್ಯ ಮಾಪನಕ್ಕಾಗಿ ಸಿದ್ಧಪಡಿಸಿಕೊಂಡ ತಖ್ತೆಗನುಗುಣವಾಗಿ ವಿದ್ಯಾರ್ಥಿಗಳ ಕೌಶಲವನ್ನು ವಿಶ್ಲೇಷಿಸಲಾಗಿದೆ.

ಪಠ್ಯದಲ್ಲಿ ಕಲಿತ ಯಾವುದೇ ತರಗತಿಯ ಗೀತೆಯೊಂದನ್ನು ಹಾಡಲು ತಿಳಿಸಲಾಯಿತು. ಹಾಡುವಲ್ಲಿ ಹಿಂಜರಿಕೆಯಿರುವ ತರಗತಿಗಳಲ್ಲಿ ಒಂದು ಚರಣವನ್ನು ಮಾತ್ರ ಹಾಡಲು ತಿಳಿಸಲಾಯಿತು. ವಿದ್ಯಾರ್ಥಿಗಳಲ್ಲಿರುವ ಸಭಾಕಂಪನ, ಧೈರ್ಯ, ಗಾಯನ ಕೌಶಲ ಇತ್ಯಾದಿ ಅಂಶಗಳನ್ನು ಗಮನಿಸಲಾಯಿತು.

**೨೦೦ ವಿದ್ಯಾರ್ಥಿಗಳು**




೧. ಸ್ವಪ್ರೇರಣೆಯಿಂದ ಬಂದವರು

೨. ರಾಗ ಬದ್ಧವಾಗಿ ಹಾಡಿದವರು

೩. ಸಾಧಾರಣವಾಗಿ ಹಾಡಿದವರು

೪. ಸಭಾಕಂಪನ, ಕೀಳರಿಮೆ, ಹಿಂಜರಿಕೆ ಇರುವ ಮಕ್ಕಳು

ಆಯ್ದ ೬೦೦ ವಿದ್ಯಾರ್ಥಿಗಳಲ್ಲಿ ಎಂಟನೆಯ ತರಗತಿಯಲ್ಲಿ ೧೦, ಒಂಭತ್ತನೆಯ ತರಗತಿಯಲ್ಲಿ ೮ ಹಾಗೂ ಹತ್ತನೆಯ ತರಗತಿಯಲ್ಲಿ ೫ ಮಂದಿ ವಿದ್ಯಾರ್ಥಿಗಳು ಮಾತ್ರ ರಾಗಬದ್ಧವಾಗಿ ಹಾಡುತ್ತಾರೆ. ಇವರು ತರಗತಿಗೆ ಹೋಗಿ ತರಬೇತಿ ಪಡೆದವರಲ್ಲ ಎಂಬುದು ಗಮನಿಸಬೇಕಾದ ವಿಚಾರ. ಪೋಷಕರ ಹಿನ್ನೆಲೆಯು ಈ ಸಂದರ್ಭದಲ್ಲಿ ಗಮನಿಸಬೇಕಾದ ವಿಚಾರ. ಜನ್ಮದತ್ತ ಪ್ರತಿಭೆಯಿದ್ದರೂ ಸರಿಯಾದ ತರಗತಿ, ತರಬೇತಿ, ಪ್ರೋತ್ಸಾಹಗಳಿಲ್ಲದೆ ಕೆಲವು ಪ್ರತಿಭೆಗಳು ಬೆಳಕಿಗೆ ಬರದಂತಾಗಿವೆ. ಎಂಟು, ಒಂಭತ್ತು ಹಾಗೂ ಹತ್ತನೆಯ ತರಗತಿಯಲ್ಲಿ ಮಕ್ಕಳ ಆಸಕ್ತಿ ಗಣನೀಯವಾಗಿ ಇಳಿಕೆ ಕ್ರಮದಲ್ಲಿ ಸಾಗುತ್ತಿದೆ.

ಗಾಯನಕ್ಕೆ ಪ್ರತೀ ತರಗತಿಯಲ್ಲಿ ೨೦೦ ವಿದ್ಯಾರ್ಥಿಗಳನ್ನು ಆಯ್ದುಕೊಳ್ಳಲಾಗಿದ್ದು ಅದರಲ್ಲಿ ಎಂಟನೆಯ ತರಗತಿಯಲ್ಲಿ ೧೪೮ ವಿದ್ಯಾರ್ಥಿಗಳು ಸಭಾ ಕಂಪನ, ಹಿಂಜರಿಕೆ, ನಾಚಿಕೆ, ಕೀಳರಿಮೆಯಿಂದ ಬಳಲುತ್ತಿದ್ದಾರೆ. ಒಂಭತ್ತನೆಯ ತರಗತಿಯಲ್ಲಿ ಆಯ್ದುಕೊಂಡ ೨೦೦ ವಿದ್ಯಾರ್ಥಿಗಳಲ್ಲಿ ೧೬೭ ವಿದ್ಯಾರ್ಥಿಗಳು ಸಭಾ ಕಂಪನ, ಹಿಂಜರಿಕೆ, ನಾಚಿಕೆ, ಕೀಳರಿಮೆಯ ಸ್ವಭಾವದವರಾಗಿದ್ದಾರೆ. ಇನ್ನು ಹತ್ತನೆಯ ತರಗತಿಯ ೨೦೦ ವಿದ್ಯಾರ್ಥಿಗಳಲ್ಲಿ ೧೮೪ ವಿದ್ಯಾರ್ಥಿಗಳು ಸಭಾ ಕಂಪನ, ಹಿಂಜರಿಕೆ, ನಾಚಿಕೆ, ಕೀಳರಿಮೆಯಿಂದ ಬಳಲುತ್ತಿದ್ದಾರೆ. ಶಿಕ್ಷಣ ಇಲಾಖೆಯು ಪಠ್ಯದ ಮೂಲಕ ನಿರ್ದೇಶಿಸಿದ ಗುರಿ ಹಾಗೂ ಉದ್ದೇಶಗಳು ಸಂಪೂರ್ಣವಾಗಿ ವಿಫಲಗೊಂಡಿರುವ ಚಿತ್ರಣವನ್ನು ಕ್ಷೇತ್ರಕಾರ್ಯ ನೀಡಿದೆ.

**೮, ೯ ಹಾಗೂ ೧೦ನೆಯ ತರಗತಿಗಳ ಗಾಯನ ಸಂದರ್ಭದ ವಾಸ್ತವ ಸ್ಥಿತಿ**




೧. ಸ್ವಪ್ರೇರಣೆಯಿಂದ ಬಂದವರು
೨. ರಾಗ ಬದ್ಧವಾಗಿ ಹಾಡಿದವರು
೩. ಸಾಧಾರಣವಾಗಿ ಹಾಡಿದವರು

೪. ಸಭಾಕಂಪನ, ಕೀಳರಿಮೆ, ಹಿಂಜರಿಕೆ ಇರುವ ಮಕ್ಕಳು

ಪ್ರೌಢಶಾಲೆಯ ಹಂತದಲ್ಲಿ ಸ್ವಪ್ರೇರಣೆಯಿಂದ ಬರುವವರ ಸಂಖ್ಯೆ ಹಾಗೂ ಸಾಧಾರಣವಾಗಿ ಹಾಡುವವರ ಸಂಖ್ಯೆ ಶೇಕಡಾ ೬.೫೦ಯಷ್ಟು ಮಾತ್ರ. ಶೇಕಡಾ ೮೩.೧೬ ರಷ್ಟು ವಿದ್ಯಾರ್ಥಿಗಳು ಸಭಾಕಂಪನ, ಕೀಳರಿಮೆ, ಹಿಂಜರಿಕೆಯಿಂದ ಬಳಲುತ್ತಿದ್ದಾರೆ. ಈ ಪ್ರಮಾಣದಲ್ಲಿ ವಿದ್ಯಾರ್ಥಿಗಳು ಹಿನ್ನಡೆಯನ್ನು ಸಾಧಿಸಿರುವುದನ್ನು ನೋಡಿದರೆ ಶಾಲಾ ದಾಖಲೆಗಳಲ್ಲಿರುವ ಲಲಿತಕಲಾ ಸಂಘಗಳು, ಶಾಲಾ ವಾರ್ಷಿಕೋತ್ಸವ, ಪ್ರತಿಭಾಕಾರಂಜಿಯಂಥ ಸಾಂಸ್ಕೃತಿಕ ಕಾರ್ಯಕ್ರಮಗಳು ವಿದ್ಯಾರ್ಥಿಗಳ ಮೇಲೆ ಬೀರಿದ ಪ್ರಭಾವದ ಪ್ರಮಾಣವನ್ನು ಈ ಹಿನ್ನೆಲೆಯಲ್ಲಿ ಅಧ್ಯಯನ ಮಾಡಬೇಕಾದ ಆವಶ್ಯಕತೆಯಿದೆ.

ಸ್ವಪ್ರೇರಣೆಯಿಂದ ಗಾಯನಕ್ಕೆ ಬರುವವರಲ್ಲಿ ಎಂಟನೆಯ ತರಗತಿಯ ವಿದ್ಯಾರ್ಥಿಗಳಲ್ಲಿ ಉತ್ಸಾಹವಿದೆ. ಒಂಭತ್ತನೆಯ ತರಗತಿಯಲ್ಲಿ ತುಸು ಕಡಿಮೆಯಾಗುತ್ತದೆ. ಹತ್ತನೆಯ ತರಗತಿಯಲ್ಲಿ ಈ ಉತ್ಸಾಹ ಮತ್ತಷ್ಟು ಕಡಿಮೆಯಾಗಿರುವುದು ಗಾಯನ ವಿಭಾಗದಲ್ಲೂ ಕಂಡುಬರುತ್ತದೆ. ವಿದ್ಯಾರ್ಥಿಗಳಲ್ಲಿನ ದೈಹಿಕ ಮಾನಸಿಕ ಬದಲಾವಣೆಗಳು ಅವರ ಆಸಕ್ತಿ, ಅಭಿರುಚಿ ಹಾಗೂ ಮನೋಭಾವಗಳಲ್ಲಿ ಗಣನೀಯವಾದ ಬದಲಾವಣೆಗಳನ್ನು ತರುತ್ತವೆ. ಈ ನಿಟ್ಟಿನಲ್ಲಿ ವಿದ್ಯಾರ್ಥಿಗಳ ಮನಃಶಾಸ್ತ್ರವನ್ನು ಅರಿತು ಬೋಧನೆಯನ್ನು ನಡೆಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಕನ್ನಡ ಅಧ್ಯಾಪಕರಿಗೆ ವಿದ್ಯಾರ್ಥಿಗಳ ಮನಃಶಾಸ್ತ್ರದ ಕುರಿತ ಆಳವಾದ ಅಧ್ಯಯನ ಹಾಗೂ ತರಬೇತಿಗಳ ಅವಶ್ಯಕತೆಯಿದೆ.

## ೨.೧೧ ಅಭಿನಯ ಕೌಶಲ. ೮, ೯ ಹಾಗೂ ೧೦ ನೆಯ ತರಗತಿಗಳ ವಾಸ್ತವ ಚಿತ್ರಣ

ವಿದ್ಯಾರ್ಥಿಗಳು ಈಗಾಗಲೇ ಗಮನಿಸಿರುವ ಕೆಲವು ವಿಚಾರಗಳಿಗೆ ಸಂಬಂಧಿಸಿದಂತೆ ಹಾಗೂ ವಿದ್ಯಾರ್ಥಿಗಳ ಮಟ್ಟಕ್ಕೆ ನಿಲುಕುವ ತರಕಾರಿ ಮಾರುವವ, ಗೊಂಬೆ ಬೇಕೆಂದು ಹಟಹಿಡಿದ ಮಗು, ಎಳನೀರು ಮಾರುವವ, ರೈತ, ಮಳೆಯಲ್ಲಿ ಕೊಡೆ ಇಲ್ಲದೆ ಮರದ ಕೆಳಗೆ ನಿಂತಿರುವ ಶ್ರೀಮಂತ ವ್ಯಕ್ತಿ. ಆಟೋ ಚಾಲಕ, ಶಾಸ್ತ್ರೀಯ ಸಂಗೀತ ಹಾಡುಗಾರ, ಭರತನಾಟ್ಯ ಮಾಡುವವಳು, ಅಡುಗೆ ಮಾಡುವ ದೃಶ್ಯ, ಚಿಕಿತ್ಸೆ ನೀಡುತ್ತಿರುವ ವೈದ್ಯ, ಕುಡಿಯುವ ನೀರಿಗಾಗಿ ಜಗಳ, ಕೋಪಗೊಂಡ ತಂದೆ, ಶಿಕ್ಷಕ...... ಇತ್ಯಾದಿಯಾಗಿ ಕೆಲವು ಅಭಿನಯ ವಿಷಯಗಳನ್ನು ಪಟ್ಟಿಮಾಡಲಾಯಿತು. ಪ್ರತ್ಯೇಕ ಚೀಟಿಗಳಲ್ಲಿ ಪದಗಳನ್ನು ಬರೆದು ಅಭಿನಯಕ್ಕಾಗಿ ವಿದ್ಯಾರ್ಥಿಗಳನ್ನು ಕರೆಯಲಾಯಿತು. ವಿದ್ಯಾರ್ಥಿಗಳ ಅಭಿನಯ ಚತುರತೆ, ಭಾಷಾಸಾಮರ್ಥ್ಯ, ಸಭಾಕಂಪನ, ಸಮಯಪ್ರಜ್ಞೆ, ಸೃಜನಶೀಲತೆ, ಧೈರ್ಯ, ಭಾಷಾಶೈಲಿ ಇತ್ಯಾದಿ ಅಂಶಗಳನ್ನು ಗಮನಿಸಲಾಯಿತು.

ಅಭಿನಯ ಕೌಶಲ ೮, ೯ ಹಾಗೂ ೧೦ನೆಯ ತರಗತಿಗಳು. ೨೦೦ ವಿದ್ಯಾರ್ಥಿಗಳು




೧. ಸ್ವಪ್ರೇರಣೆಯಿಂದ ಬಂದವರು

೨. ಸೊಗಸಾಗಿ ಅಭಿನಯಿಸಿದವರು

೩. ಸಾಧಾರಣವಾಗಿ ಅಭಿನಯಿಸಿದವರು

೪. ಸಭಾಕಂಪನ, ಕೀಳರಿಮೆ, ಹಿಂಜರಿಕೆ ಇರುವ ಮಕ್ಕಳು

ಅಭಿನಯ ವಿಚಾರದಲ್ಲಿಯೂ ಆಶುಭಾಷಣ ಹಾಗೂ ಗೀತ ಗಾಯನ ಚಟುವಟಿಕೆಯ ಫಲಿತಾಂಶಗಳೇ ಕಂಡುಬಂದಿದೆ. ಸ್ವಪ್ರೇರಣೆಯಿಂದ ಅಭಿನಯಕ್ಕೆ ಬರುವಲ್ಲಿ ಎಂಟನೆಯ ತರಗತಿಯ ವಿದ್ಯಾರ್ಥಿಗಳಿಗಿರುವ ಉತ್ಸಾಹ, ಒಂಭತ್ತನೆಯ ತರಗತಿಯ ವಿದ್ಯಾರ್ಥಿಗಳಿಗಿಲ್ಲ. ಹತ್ತನೆಯ ತರಗತಿಯಲ್ಲಿ ಈ ಉತ್ಸಾಹ ಮತ್ತಷ್ಟು ಕಡಿಮೆಯಾಗಿರುವುದು ಅಭಿನಯ ವಿಭಾಗದಲ್ಲೂ ಕಂಡುಬರುತ್ತದೆ.

ಪಠ್ಯಪುಸ್ತಕ ರಚನಾ ಸಮಿತಿಯು ಕಲ್ಪಿತ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪಠ್ಯಗಳಲ್ಲಿ ಚಟುವಟಿಕೆಗಳನ್ನು ರೂಪಿಸಿದೆ. ಈ ಚಟುವಟಿಕೆಗಳ ಕುರಿತಾಗಿ ಯಾವುದೇ ತರಬೇತಿಗಳನ್ನು ಶಿಕ್ಷಕರಿಗೆ ನೀಡುತ್ತಿಲ್ಲ. ಪಠ್ಯ ಪುಸ್ತಕ ರಚನಾ ಸಮಿತಿಯು ಪಠ್ಯಗಳಲ್ಲಿನ ಯಾವುದೇ ಚಟುವಟಿಕೆಗಳಿಗೆ ಪೂರಕವಾಗುವಂಥಹ ಕಲಿಕೋಪಕರಣಗಳನ್ನಾಗಲೀ ಬೋಧನೋಪಕರಣಗಳನ್ನಾಗಲೀ ಪೂರೈಸಿರುವುದಿಲ್ಲ. ಮೌಲ್ಯಮಾಪನಕ್ಕೆ ಈ ಚಟುವಟಿಕೆಗಳನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತಿಲ್ಲ.

## ೮, ೯ ಹಾಗೂ ೧೦ನೆಯ ತರಗತಿಗಳ ಅಭಿನಯ ಸಂದರ್ಭದ ವಾಸ್ತವ ಸ್ಥಿತಿ




೧. ಸ್ವಪ್ರೇರಣೆಯಿಂದ ಬಂದವರು

೨. ಸೊಗಸಾಗಿ ಅಭಿನಯಿಸಿದವರು

೩. ಸಾಧಾರಣವಾಗಿ ಅಭಿನಯಿಸಿದವರು

೪. ಸಭಾಕಂಪನ, ಕೀಳರಿಮೆ, ಹಿಂಜರಿಕೆ ಇರುವ ಮಕ್ಕಳು

ಅಭಿನಯಕ್ಕೆ ಪ್ರತೀ ತರಗತಿಯಲ್ಲಿ ೨೦೦ ವಿದ್ಯಾರ್ಥಿಗಳನ್ನು ಆಯ್ದುಕೊಳ್ಳಲಾಗಿದ್ದು ಅದರಲ್ಲಿ ಎಂಟನೆಯ ತರಗತಿಯಲ್ಲಿ ೧೪೪ ವಿದ್ಯಾರ್ಥಿಗಳು ಸಭಾ ಕಂಪನ, ಹಿಂಜರಿಕೆ, ನಾಚಿಕೆ, ಕೀಳರಿಮೆಯಿಂದ ಬಳಲುತ್ತಿದ್ದಾರೆ. ಒಂಭತ್ತನೆಯ ತರಗತಿಯಲ್ಲಿ ಆಯ್ದುಕೊಂಡ ೨೦೦ ವಿದ್ಯಾರ್ಥಿಗಳಲ್ಲಿ ೧೪೬ ವಿದ್ಯಾರ್ಥಿಗಳು ಸಭಾ ಕಂಪನ, ಹಿಂಜರಿಕೆ, ನಾಚಿಕೆ, ಕೀಳರಿಮೆಯಿಂದ ಬಳಲುತ್ತಿದ್ದಾರೆ. ಇನ್ನು ಹತ್ತನೆಯ ತರಗತಿಯ ೨೦೦ ವಿದ್ಯಾರ್ಥಿಗಳಲ್ಲಿ ೧೭೬ ವಿದ್ಯಾರ್ಥಿಗಳು ಸಭಾ ಕಂಪನ, ಹಿಂಜರಿಕೆ, ನಾಚಿಕೆ, ಕೀಳರಿಮೆಯಿಂದ ಬಳಲುತ್ತಿದ್ದಾರೆ.

ಅಭಿನಯ ಕೌಶಲದಲ್ಲಿಯೂ ಪಠ್ಯ ಪುಸ್ತಕವು ನಿರೀಕ್ಷಿಸುತ್ತಿರುವ ನಿರೀಕ್ಷೆಗಳು ಫಲಕಾರಿಯಾಗಿಲ್ಲ. ತರಗತಿಯ ಪಾಠದ ಸಂದರ್ಭಗಳಲ್ಲಿ, ಪಾಠದ ಕೊನೆಯಲ್ಲಿ ಪಠ್ಯ ಪುಸ್ತಕ ನಿರ್ದೇಶನಾಲಯವು ನೀಡಿದ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳನ್ನು ತೊಡಗಿಸಿಕೊಳ್ಳದ ಕಾರಣ, ವಿದ್ಯಾರ್ಥಿಗಳು ಈ ಕೌಶಲಗಳಿಕೆಯಲ್ಲಿ ವಿಫಲರಾಗಿದ್ದಾರೆ. ಶಿಕ್ಷಕರೂ ಕೂಡ ಈ ಚಟುವಟಿಕೆಗಳನ್ನು ಗಂಭೀರವಾಗಿ ಪರಿಗಣಿಸಿಲ್ಲ. ಪರೀಕ್ಷೆಗಳಿಗೆ ಈ ವಿಚಾರಗಳನ್ನು ಕೇಳುವುದಿಲ್ಲವಾದ್ದರಿಂದ ಇಂಥಹ ಅನೇಕ ಚಟುವಟಿಕೆಗಳನ್ನು ತರಗತಿಯಲ್ಲಿ ಮಾಡುತ್ತಿಲ್ಲವೆಂಬ ಮನೋಭಾವ ಹೆಚ್ಚಿನ ಶಿಕ್ಷಕರಲ್ಲಿ ಹಾಗೂ ವಿದ್ಯಾರ್ಥಿಗಳಲ್ಲಿ ಇರುವುದನ್ನು ಅಧ್ಯಯನ ಸಂದರ್ಭದಲ್ಲಿ ಗಮನಿಸಲಾಗಿದೆ.

## ೨.೧೨ ಪಠ್ಯಗಳಲ್ಲಿನ ಭಾಷಾ ಚಟುವಟಿಕೆಗಳು ಮತ್ತು ತರಗತಿಯ ವಾಸ್ತವ.

ಪ್ರೌಢಶಾಲೆಗಳ ಪ್ರಥಮ ಭಾಷಾ ಕನ್ನಡ ಪಠ್ಯ ಪುಸ್ತಕಗಳಲ್ಲಿ, ಪ್ರತೀ ಪಾಠ ಪದ್ಯಗಳಿಗೆ ಸಂಬಂಧಿಸಿದಂತೆ ಆಯಾಯ ಪಾಠ ಪದ್ಯಗಳ ಕೊನೆಯಲ್ಲಿ ಅನೇಕ ಚಟುವಟಿಕೆಗಳನ್ನು ನೀಡಲಾಗಿದೆ. ಅಧ್ಯಯನದ ಸಂದರ್ಭದಲ್ಲಿ ಕೈಗೊಂಡ ಚಟುವಟಿಕೆಗಳ ಫಲಿತಗಳಿಗೂ, ಪಠ್ಯದ ನಿರೀಕ್ಷೆಗಳಿಗೂ ಬಹಳಷ್ಟು ವ್ಯತ್ಯಾಸಗಳು ಕಂಡುಬಂದಿವೆ. ಪ್ರಸ್ತುತ ಅಧ್ಯಾಯದ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಪ್ರಶ್ನಾವಳಿಗಳ ಮೂಲಕ ಅಧ್ಯಾಪಕರಿಂದ ಹಾಗೂ ವಿದ್ಯಾರ್ಥಿಗಳಿಂದ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ.

**ಅ) ಪಠ್ಯದ ಚಟುವಟಿಕೆಗಳ ಕುರಿತು ಅಧ್ಯಾಪಕರ ಅಭಿಪ್ರಾಯ.**

- ಪಠ್ಯದ ಕೊನೆಯಲ್ಲಿರುವ ಅನೇಕ ಚಟುವಟಿಕೆಗಳು ವಿದ್ಯಾರ್ಥಿಗಳ ಮಟ್ಟವನ್ನು ಮೀರಿವೆ
- ಚಟುವಟಿಕೆಗಳನ್ನೆಲ್ಲಾ ಮಾಡಲು ಸಮಯದ ಅಭಾವವಿದೆ.
- ನಾಟಕ, ಅಭಿನಯ, ಗಾಯನ ಚಟುವಟಿಕೆಗಳ ಕೌಶಲವಿರುವ ವಿದ್ಯಾರ್ಥಿಗಳಿಲ್ಲ.
- ಪ್ರಾಥಮಿಕ ಶಾಲೆಗಳಲ್ಲಿ ಈ ಕುರಿತು ವಿದ್ಯಾರ್ಥಿಗಳಿಗೆ ಸರಿಯಾದ ತರಬೇತಿಗಳಿಲ್ಲ.
- ಪ್ರತಿಭಾವಂತ ವಿದ್ಯಾರ್ಥಿಗಳಿಂದ ಮಾತ್ರ ಈ ಚಟುವಟಿಕೆಗಳನ್ನು ಮಾಡಿಸಲು ಸಾಧ್ಯ.
- ತರಗತಿಯೊಳಗೆ ಸ್ಥಳಾವಕಾಶದ ಕೊರತೆಯಿದೆ.
- ಸರಿಯಾದ ತಾಲೀಮು ಕೊಠಡಿಗಳಿಲ್ಲ.
- ಶಾಲೆಗಳಿಗೆ ಆಧುನಿಕ ದೃಕ್ ಶ್ರವಣೋಪಕರಣಗಳ ಪೂರೈಕೆಯಿಲ್ಲ.
- ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಯಾವುದೇ ಸೌಲಭ್ಯಗಳಿಲ್ಲ.
- ತರಗತಿಯ ಕೋಣೆಗಳು ಒಂದಕ್ಕೊಂದು ಹೊಂದಿಕೊಂಡಿವೆ. ಒಂದು ತರಗತಿಯಲ್ಲಿ ಗಾಯನ ಅಥವಾ ನಾಟಕ ಚಟುವಟಿಕೆಗಳು ನಡೆಯುತ್ತಿದ್ದರೆ, ಪಕ್ಕದ ತರಗತಿಯ ವಿದ್ಯಾರ್ಥಿಗಳು ಅಲ್ಲಿನ ಪಾಠಗಳ ವಿಚಾರಗಳನ್ನು ಬಿಟ್ಟು, ಗಮನವನ್ನು ನಾಟಕ, ಗಾಯನಗಳತ್ತ ಹರಿಸುತ್ತಾರೆ.
- ತರಗತಿಯಲ್ಲಿ ೬೦-೭೦ ಮಕ್ಕಳಿರುವಾಗ ಆ ಎಲ್ಲಾ ಚಟುವಟಿಕೆಗಳನ್ನು ಮಾಡಲು ಸಾಧ್ಯವಾಗುವುದಿಲ್ಲ.
- ತರಗತಿಗಳಲ್ಲಿ ಪದೇ ಪದೇ ಇಂತಹ ಚಟುವಟಿಕೆಗಳನ್ನು ನಡೆಸಲು ಮುಖ್ಯೋಪಾಧ್ಯಾಯರು ಹಾಗೂ ಸಹ ಅಧ್ಯಾಪಕರ ಆಕ್ಷೇಪಗಳಿರುತ್ತವೆ.

- ❖ ತರಗತಿಯೊಳಗಿನ ಚಟುವಟಿಕೆಗಳಿಂದ ಶಾಲಾ ಶಿಸ್ತು ಹದಗೆಡುತ್ತದೆ. ಒಂದು ತರಗತಿಯೊಳಗಿನ ಮಾತು, ಗಾಯನ, ಸಂಗೀತ, ಅಭಿನಯ, ನಗುಗಳಿಂದ ಉಳಿದ ತರಗತಿಗಳಿಗೂ ತೊಂದರೆಯಾಗುತ್ತದೆ.
- ❖ ಬಹಳಷ್ಟು ವಿದ್ಯಾರ್ಥಿಗಳಿಗೆ ಸಭಾಕಂಪನವಿದೆ, ಹಿಂಜರಿಕೆಯಿದೆ, ನಾಚಿಕೆಯ ಸ್ವಭಾವಗಳಿವೆ.
- ❖ ಆಸಕ್ತಿಯಿಂದ ಮುಂದೆಬರುವ ವಿದ್ಯಾರ್ಥಿಗಳು ಕಡಿಮೆ.
- ❖ ಹೆಚ್ಚಿನ ಓದಿಗಾಗಿ ನೀಡಿರುವ ಪುಸ್ತಕಗಳನ್ನು ಶಾಲೆಗಳಿಗೆ ಪೂರೈಸಿರುವುದಿಲ್ಲ.
- ❖ ತರಗತಿಯ ಪಾಠಗಳನ್ನೇ ಸರಿಯಾಗಿ ಓದಲು ಬಾರದಿರುವ ವಿದ್ಯಾರ್ಥಿಗಳಿದ್ದಾರೆ. ಅಕ್ಷರಗಳನ್ನು ಗುರುತಿಸಲು ಬಾರದಿರುವ ವಿದ್ಯಾರ್ಥಿಗಳಿದ್ದಾರೆ. ಅವರ ಸಂಖ್ಯೆಯೂ ತರಗತಿಗಳಲ್ಲಿ ದೊಡ್ಡದಿದೆ. ಅವರಿಗೆ ಮೂಲ ಗ್ರಂಥಗಳನ್ನು ಕೊಟ್ಟರೆ ಏನೂ ಪ್ರಯೋಜನವಿಲ್ಲ.
- ❖ ಎಲ್ಲಾ ಪದ್ಯಗಳಿಗೆ ರಾಗ ಸಂಯೋಜನೆ ಮಾಡಲು ವಿದ್ಯಾರ್ಥಿಗಳಿಗೆ ಸಂಗೀತ ಶಿಕ್ಷಕರಿಲ್ಲ. ಸಂಗೀತ, ನೃತ್ಯ ತರಗತಿಗಳೂ ಇಲ್ಲ.
- ❖ ಹೆಚ್ಚಿನ ಓದಿಗಾಗಿ ಚಟುವಟಿಕೆಗಳಲ್ಲಿ ನೀಡಿರುವ ಹೆಚ್ಚಿನ ಪುಸ್ತಕಗಳು ವಿದ್ಯಾರ್ಥಿಗಳ ಮಟ್ಟಕ್ಕೆ ಮೀರಿದ ಪುಸ್ತಕಗಳಾಗಿವೆ.
- ❖ ಆಧುನಿಕ ಧೃಕ್ ಶ್ರವಣೋಪಕರಣಗಳನ್ನು ಉಪಯೋಗಿಸುವಂತಹ ಸೌಲಭ್ಯ ಸಲಕರಣೆಗಳನ್ನು ತರಗತಿಗಳಲ್ಲಿ ಹೊಂದಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಅಂತಹ ಸೌಲಭ್ಯಗಳಿಗೆ ಪೂರಕವಾಗುವಂತೆ ತರಗತಿಗಳನ್ನು ನಿರ್ಮಾಣ ಮಾಡಲಾಗಿಲ್ಲ,
- ❖ ವಿದ್ಯಾರ್ಥಿಗಳಿಗೆ ಕಲಿಕೆಯ ಹೊರೆಯೇ ಹೆಚ್ಚಿರುತ್ತದೆ. ಈ ಎಲ್ಲಾ ಚಟುವಟಿಕೆಗಳು ಮತ್ತಷ್ಟು ಹೊರೆಯಾಗುತ್ತವೆ.
- ❖ ಪರೀಕ್ಷೆಗೆ ಈ ಯಾವ ಚಟುವಟಿಕೆಗಳು ಕೂಡಾ ಬರುವುದಿಲ್ಲವಾದ್ದರಿಂದ ಅನಗತ್ಯವಾಗಿ ಸಮಯವನ್ನು ಹಾಳುಮಾಡುವುದಿಲ್ಲ.

**ಅ) ಪಠ್ಯದ ಚಟುವಟಿಕೆಗಳ ಕುರಿತು ವಿದ್ಯಾರ್ಥಿಗಳ ಅಭಿಪ್ರಾಯ.**

- ❖ ಪಾಠಗಳ ಕೊನೆಯಲ್ಲಿರುವ ಚಟುವಟಿಕೆಗಳನ್ನು ಅಧ್ಯಾಪಕರು ಮಾಡುವುದಿಲ್ಲ.
- ❖ ಹಿಂದೂಸ್ಥಾನಕ್ಕೆ ಹಿಂದಿರುಗಿದುದು, ಉತ್ತರನ ಪೌರುಷ, ಪರಿವರ್ತನೆ, ಯೋಧ ಮತ್ತು ಹೆಂಗಸು, ಅಂಗುಲೀಮಾಲ, ತಿಪ್ಪೇನಹಳ್ಳಿ ಮೇಷ್ಟ್ರು, ಮಿತ್ರಪ್ರೇಮ ಪಾಠಗಳನ್ನು ನಾಟಕವಾಗಿ ಅಭಿನಯಿಸಿಲ್ಲ.
- ❖ ಅಧ್ಯಾಪಕರಿಗೆ ರಾಗವಾಗಿ ಹಾಡಲು ಬರುವುದಿಲ್ಲ.

- ಚಟುವಟಿಕೆಗಳಲ್ಲಿನ ಹೆಚ್ಚಿನ ಓದಿಗಾಗಿ ನೀಡಿರುವ ಪುಸ್ತಕಗಳು ಶಾಲೆಯಲ್ಲಿ ಲಭ್ಯವಿಲ್ಲ.
- ಅಧ್ಯಾಪಕರು ಹೆಚ್ಚಿನ ಓದಿನ ಪುಸ್ತಕಗಳನ್ನು ತಂದು ಅದರ ವಿಶೇಷತೆಯನ್ನು ಕುರಿತು ತರಗತಿಯಲ್ಲಿ ವಿವರಿಸಿಲ್ಲ.
- ಪಾಠ, ಪದ್ಯ ಹಾಗೂ ಇತರ ವಿಷಯಗಳಿಗೆ ಸಂಬಂಧಿಸಿದಂತೆ ತರಗತಿಯೊಳಗೆ ಅಧ್ಯಾಪಕರು ಭಾಷಣ, ಅಭಿನಯ, ಚರ್ಚೆ, ಸಂವಾದ, ಆಶುಭಾಷಣ ಇತ್ಯಾದಿ ಚಟುವಟಿಕೆಗಳನ್ನು ಮಾಡಿರುವುದಿಲ್ಲ.
- ವ್ಯಾಕರಣ ಭಾಗವನ್ನು ಚಟುವಟಿಕೆಗಳ ಮೂಲಕ ಬೋಧಿಸುತ್ತಿಲ್ಲ. ಉಳಿದ ವಿಚಾರಗಳಂತೆ ಓದುವುದು, ವಿವರಿಸುವುದು ಹಾಗೂ ಟಿಪ್ಪಣಿ ಬರೆಸುವ ಹಂತಗಳಲ್ಲಿ ಬೋಧಿಸುತ್ತಾರೆ.
- ಅಧ್ಯಾಪಕರು ಪಾಠ, ಪದ್ಯ, ವ್ಯಾಕಣಾಂಶಗಳ ಬೋಧನೆಗೆ ಯಾವುದೇ ರೀತಿಯ ಚಾರ್ಟುಗಳನ್ನು ತಯಾರಿಸಿಲ್ಲ.
- ಪಠ್ಯ ಪುಸ್ತಕಕ್ಕೆ ಸಂಬಂಧಿಸಿದಂತೆ ಧೃಕ್ ಶ್ರವಣೋಪಕರಣಗಳನ್ನು ಬಳಸಿಕೊಂಡಿಲ್ಲ.
- ಅಧ್ಯಾಪಕರು ತರಗತಿಯಿಂದ ಹೊರಗೆ ಯಾವುದೇ ಪಾಠಗಳನ್ನು ವಿಭಿನ್ನವಾಗಿ ಬೋಧಿಸಿಲ್ಲ.
- ಅಧ್ಯಾಪಕರು ಅಭ್ಯಾಸದ ಪ್ರಶ್ನೆಗಳಿಗೆ ಟಿಪ್ಪಣಿಯನ್ನು ಬರೆಸುತ್ತಾರೆ.
- ಅಧ್ಯಾಪಕರು ಪ್ರಬಂಧ ವಿಚಾರಗಳನ್ನು ಮನೆಗೆಲಸಕ್ಕೆ ನೀಡುತ್ತಾರೆ.

ಅಧ್ಯಯನದ ಸಂದರ್ಭದಲ್ಲಿ ತರಗತಿಯಲ್ಲಿ ನಡೆಸಿದ ಚಟುವಟಿಕೆಗಳು, ಅಧ್ಯಾಪಕರೊಂದಿಗೆ ಹಾಗೂ ವಿದ್ಯಾರ್ಥಿಗಳೊಂದಿಗೆ ನಡೆಸಿದ ಚರ್ಚೆ ಹಾಗೂ ಅಭಿಪ್ರಾಯ ಸಂಗ್ರಹಣೆ ಮತ್ತು ಅವಲೋಕನಗಳಿಂದ ಸಂಗ್ರಹಿಸಿದ ಮಾಹಿತಿಗಳ ಆಧಾರದ ಮೇಲೆ ಭಾಷಾ ಕಲಿಕೆಯ ಸ್ವರೂಪದಲ್ಲಿನ ಚಟುವಟಿಕೆಗಳ ಕುರಿತು ಈ ಕೆಳಗಿನ ತೀರ್ಮಾನಕ್ಕೆ ಬರಲಾಗಿದೆ.

- ಪಠ್ಯ ಪುಸ್ತಕಗಳಲ್ಲಿರುವ ಚಟುವಟಿಕೆಗಳು ತರಗತಿಯಲ್ಲಿ ನಡೆಯುತ್ತಿಲ್ಲ.
- ಬಹಳಷ್ಟು ಅಧ್ಯಾಪಕರಿಗೆ ರಂಗಕಲೆ, ಅಭಿನಯ, ನಾಟಕಗಳ ಕೌಶಲ ತಿಳಿದಿಲ್ಲ.
- ಬಹಳಷ್ಟು ಅಧ್ಯಾಪಕರು ಕವಿತೆಗಳನ್ನು ಹಾಡಲಾರರು.
- ತರಗತಿಗಳಲ್ಲಿ ಭಾಷಾ ಪಠ್ಯಕ್ಕೆ ಸಂಬಂಧಿಸಿದಂತೆ ಧೃಕ್ ಶ್ರವಣೋಪಕರಣಗಳನ್ನು ಬಳಸಲಾಗುತ್ತಿಲ್ಲ.
- ಪಾಠ ಪದ್ಯಗಳಿಗೆ ಸಂಬಂಧಿಸಿದಂತೆ ಯಾವುದೇ ಬೋಧನಾ ಸಲಕರಣೆಗಳನ್ನು ಬಳಸುತ್ತಿಲ್ಲ.

❖ ಹೆಚ್ಚಿನ ಓದಿಗಾಗಿ ಪಠ್ಯ ಪುಸ್ತಕಗಳಲ್ಲಿ ನಿರ್ದೇಶಿಸಿದ ಹೆಚ್ಚಿನ ಪುಸ್ತಕಗಳನ್ನು ವಿದ್ಯಾರ್ಥಿಗಳು ಓದಿಲ್ಲ.

❖ ಅನೇಕ ಚಟುವಟಿಕೆಗಳು ವಿದ್ಯಾರ್ಥಿಗಳ ಮಟ್ಟವನ್ನು ಮೀರಿವೆ.

❖ ಗಾಯನ, ಅಭಿನಯ, ನಾಟಕ, ಭಾಷಣ ಮೊದಲಾದ ಕೌಶಲಗಳನ್ನು ಪ್ರಾಥಮಿಕ ಶಾಲೆಗಳಲ್ಲಿ ವ್ಯವಸ್ಥಿತವಾಗಿ ಕಲಿಕೆಯೊಂದಿಗೆ ರೂಢಿಸಿರದ ಕಾರಣ ಬಹಳಷ್ಟು ವಿದ್ಯಾರ್ಥಿಗಳು ಸಭಾಕಂಪನ, ಹಿಂಜರಿಕೆ, ಕೀಳರಿಮೆ, ನಾಚಿಕೆಯ ಸ್ವಭಾವಗಳಿಂದ ಕೂಡಿದವರಾಗಿದ್ದಾರೆ.

❖ ಅಭ್ಯಾಸದ ಪ್ರಶ್ನೆಗಳಿಗೆ ಅಧ್ಯಾಪಕರೇ ಟಿಪ್ಪಣಿ ಬರೆಸುತ್ತಿದ್ದಾರೆ. ಪ್ರಬಂಧ ವಿಚಾರಗಳನ್ನು ಹೆಚ್ಚಿನ ಶಾಲೆಗಳಲ್ಲಿ ಮನೆಗೆಲಸಕ್ಕೆ ನೀಡಲಾಗುತ್ತಿದೆ.

❖ ತರಗತಿಯ ಕೊಠಡಿಗಳು ಉಪನ್ಯಾಸ ಮಾದರಿಗೆ ಮಾತ್ರ ಸೂಕ್ತವಾಗಿದೆ.

❖ ಚಟುವಟಿಕೆಗಳಿಗೆ ಪೂರಕವಾಗುವ ಸೌಲಭ್ಯಗಳನ್ನು ತರಗತಿಯ ಕೊಠಡಿಗಳು ಹೊಂದಿಲ್ಲ.

❖ ಪ್ರೌಢಶಾಲೆಗಳಲ್ಲಿ ಶೇಕಡಾ ೬೦ಕ್ಕಿಂತಲೂ ಹೆಚ್ಚಿನ ವಿದ್ಯಾರ್ಥಿಗಳು ಲಿಪಿಗ್ರಹಿಕೆಯ ಹಂತದಲ್ಲಿಯೇ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಆದುದರಿಂದ ಇವರಿಗೆ ಮೂಲ ಆಕರ ಗ್ರಂಥಗಳನ್ನು ಓದಲು, ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತಿಲ್ಲ.

❖ ಪರೀಕ್ಷೆಗಳಿಗೆ ಅಥವಾ ಮೌಲ್ಯ ಮಾಪನಕ್ಕೆ ಈ ಚಟುವಟಿಕೆಗಳನ್ನು ಕೇಳುವುದಿಲ್ಲವಾದ್ದರಿಂದ ಇವುಗಳಿಗೆ ಹೆಚ್ಚಿನ ಗಮನ ಕೊಡಬೇಕಾಗಿಲ್ಲ ಎಂಬ ಭಾವನೆ ಅನೇಕ ಶಿಕ್ಷಕರಲ್ಲಿದೆ. ಈ ರೀತಿಯ ಪರೀಕ್ಷಾ ಕೇಂದ್ರತವಾದ ಚಿಂತನೆಯಿಂದಾಗಿ ಪಠ್ಯದಲ್ಲಿನ ಚಟುವಟಿಕೆಗಳು ನಗಣ್ಯವಾಗಿವೆ.

ಒಟ್ಟಿನಲ್ಲಿ ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಗಳ ಪ್ರಥಮ ಭಾಷಾ ಕನ್ನಡದ ಕಲಿಕೆಯ ಸ್ವರೂಪವು ಉಪನ್ಯಾಸ ಮಾದರಿಯಲ್ಲಿ ನಡೆಯುತ್ತಿದೆ; ಪಠ್ಯ ಪುಸ್ತಕ ಹಾಗೂ ಪರೀಕ್ಷಾ ಕೇಂದ್ರಿತವಾಗಿದೆ. ಪಠ್ಯ ಪುಸ್ತಕಗಳ ಬೋಧನೆಯಿಂದ ವಿದ್ಯಾರ್ಥಿಗಳಿಗೆ ನಿರೀಕ್ಷಿತ ಮಟ್ಟದಲ್ಲಿ ಭಾಷಿಕ ಕೌಶಲಗಳು ಕರಗತವಾಗುತ್ತಿಲ್ಲ. ಪಠ್ಯ ಪುಸ್ತಕ ನಿರ್ದೇಶನಾಲಯವು ವಿದ್ಯಾರ್ಥಿಗಳ ಭಾಷಾ ಸಾಮರ್ಥ್ಯವನ್ನು ಹೆಚ್ಚಿಸುವ ಉದ್ದೇಶದಿಂದ ಪಠ್ಯ ಪುಸ್ತಕಗಳಲ್ಲಿ ನಿರ್ದೇಶಿಸಿರುವ ಚಟುವಟಿಕೆಗಳು ತರಗತಿಯ ವಾಸ್ತವದಲ್ಲಿ ನಡೆಯುತ್ತಿಲ್ಲ. ರಾಷ್ಟ್ರೀಯ ಶಿಕ್ಷಣ ನೀತಿಯ ಹಾಗೂ ರಾಜ್ಯ ಶಿಕ್ಷಣ ಇಲಾಖೆಯ ಭಾಷಿಕ ಧ್ಯೇಯೋದ್ದೇಶಗಳು ತರಗತಿಗಳಲ್ಲಿ ಸಾಧಿತವಾಗುತ್ತಿಲ್ಲ.

**ಅಡಿಟಿಪ್ಪಣಿ**

೧) ಡಾ.ಕೆಂಪೇಗೌಡ.ಕೆ. **'ಭಾಷಾ ಬೋಧನಾ ವಿಧಾನ'**. ಪುಟ ೭೦-೭೧, ಗಜಾನನ ಪಬ್ಲಿಕೇಷನ್ಸ್, ಮೈಸೂರು.೨೪

೨) ಬಿ.ಪ್ರಕಾಶ. **'ದಕ್ಷಿಣ ಕನ್ನಡದ ಪ್ರಾಥಮಿಕ ಮತ್ತು ಪ್ರೌಢಶಾಲಾ ಕನ್ನಡ ಪಠ್ಯಪುಸ್ತಕಗಳ ರಾಚನಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸ್ವರೂಪಗಳ ಅಧ್ಯಯನ.'** ಮಂಗಳೂರು ವಿಶ್ವವಿದ್ಯಾನಿಲಯ. ಮಂಗಳೂರು.

೩) Government of Karnataka, Department of Public Instruction, 'EDUCATION IN KARNATAKA 2012-13' "AN ANALITICAL REPORT".

೪) ಕೆ.ವಿ.ನಾರಾಯಣ. **'ಕನ್ನಡ ಜಗತ್ತು ಅರ್ಧ ಶತಮಾನ'**. ಪುಟ ೪೮-೪೯. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫) **'ಕನ್ನಡ ಕಸ್ತೂರಿ'**- ೨೦೧೦ ಮತ್ತು ೨೦೧೧ನೆಯ ಸಾಲಿನ ೮,೯ಹಾಗೂ ೧೦ನೆಯ ತರಗತಿಗಳ ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕಗಳು.

೬) ಡಾ. ಮಹಾಬಲೇಶ್ವರ ರಾವ್. **'ಪ್ರೌಢಶಾಲೆಗಳಲ್ಲಿ ಕನ್ನಡ ಬೋಧನೆ'**. ಅಧ್ಯಾಯ ೪. (ಪುಟ ೨೯.೩೦). ನವಕರ್ನಾಟಕ ಪ್ರಕಾಶನ. ಬೆಂಗಳೂರು.

೭) ಡಾ. ಮಹಾಬಲೇಶ್ವರ ರಾವ್ **'ಪ್ರೌಢಶಾಲೆಗಳಲ್ಲಿ ಕನ್ನಡ ಬೋಧನೆ'**. (ಪುಟ ೩೦). ನವಕರ್ನಾಟಕ ಪ್ರಕಾಶನ. ಬೆಂಗಳೂರು.

# ಅಧ್ಯಾಯ – ೩

## ಪ್ರೌಢಶಾಲಾ ಕನ್ನಡ ಪ್ರಥಮ ಭಾಷಾ ಪಠ್ಯಪುಸ್ತಕಗಳ ಸ್ವರೂಪ

೩.೧. ಭಾಷಾ ಪಠ್ಯಪುಸ್ತಕ ರಚನಾ ತತ್ವಗಳು
೩.೨. ಕನ್ನಡ ಭಾಷಾ ಪುಸ್ತಕದ ಗುಣಲಕ್ಷಣಗಳು
೩.೩. ಕನ್ನಡ ಭಾಷಾ ಬೋಧನಾ ಉದ್ದೇಶಗಳು
೩.೪. ಕನ್ನಡ ಭಾಷಾ ಬೋಧನೆಯ ಉದ್ದಿಷ್ಟ–ನಿರ್ದಿಷ್ಟಗಳು
೩.೫. ಪ್ರೌಢಶಾಲೆಯ ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕಗಳು
    ೩.೫.೧ ಸಾಹಿತ್ಯದ ಪ್ರಕಾರಗಳು
    ೩.೫.೨ ಹೊಸ ಪದಗಳು
    ೩.೫.೩ ಲೇಖಕ – ಕವಿ – ಕೃತಿಗಳು
    ೩.೫.೪ ಚಟುವಟಿಕೆಗಳು
    ೩.೫.೫ ಪಠ್ಯದ ಆಶಯಗಳು
    ೩.೫.೬ ವ್ಯಾಕರಣಾಂಶಗಳು
    ೩.೫.೭ ಛಂದಸ್ಸು
    ೩.೫.೮ ಅಲಂಕಾರ
೩.೬. 'ಸಿರಿ ಕನ್ನಡ' ೮ನೆಯ ತರಗತಿಯ ನೂತನ ಪ್ರಥಮ ಭಾಷಾ ಕನ್ನಡ ಪಠ್ಯ ೨೦೧೨
    ೩.೬.೧ ಪಠ್ಯದಲ್ಲಿರುವ ಮುನ್ನುಡಿ
    ೩.೬.೨ ಬೋಧನೆಗೆ ಮುನ್ನ ಬೋಧಕರೊಂದಿಗೆ ಸಮಾಲೋಚನೆ
    ೩.೬.೩ ಪರಿವಿಡಿ
    ೩.೬.೪ ಪಠ್ಯದ ಗದ್ಯ ಭಾಗದ ಭಾವ
    ೩.೬.೫ ಪಠ್ಯದ ಪದ್ಯ ಭಾಗದ ಭಾವ
    ೩.೬.೬ ಪದವಿಚಾರಗಳು
    ೩.೬.೭ ಹೆಚ್ಚಿನಓದು
    ೩.೬.೮ ಭಾಷಾಭ್ಯಾಸ
೩.೭. ಪಠ್ಯಪುಸ್ತಕಗಳ ಕುರಿತು ಶಿಕ್ಷಕರ ಅಭಿಪ್ರಾಯ
೩.೮. ಪಠ್ಯಪುಸ್ತಕಗಳ ಕುರಿತು ವಿದ್ಯಾರ್ಥಿಗಳ ಅಭಿಪ್ರಾಯ
೩.೯. ೮ನೆಯ ತರಗತಿಯ ಹಳೆಯ ಪಠ್ಯ ಹಾಗೂ ನೂತನ ಪಠ್ಯ
೩.೧೦. ವಿದ್ಯಾರ್ಥಿಗಳ ಭಾಷಿಕ ಸಾಮರ್ಥ್ಯ ಹಾಗೂ ಪಠ್ಯಪುಸ್ತಕಗಳು
    ೩.೧೦.೧ ಪಠ್ಯಗಳಲ್ಲಿ ವ್ಯಾಕರಣ,ಛಂದಸ್ಸು ಹಾಗೂ ಅಲಂಕಾರಗಳು
    ೩.೧೦.೨ ಮಕ್ಕಳ ಗ್ರಹಿಕೆಗೆ ಮೀರಿದ ವ್ಯಾಕರಣ ಭಾಗಗಳು

೩

# ಪ್ರೌಢಶಾಲಾ ಪ್ರಥಮ ಭಾಷಾ ಕನ್ನಡ ಪಠ್ಯ ಪುಸ್ತಕಗಳ ಸ್ವರೂಪ

ಕಲಿಕಾ ಪ್ರಕ್ರಿಯೆಯಲ್ಲಿನ ಹಲವು ಸಾಧನಗಳಲ್ಲಿ ಪಠ್ಯಪುಸ್ತಕವೂ ಒಂದು ಸಾಧನ. ಪಠ್ಯಪುಸ್ತಕವೆಂಬುದು ಕಲಿಕೆಗೆ ಪೂರಕ ಹಾಗೂ ಪ್ರೇರಕವಾಗುವ ಒಂದು ಸಲಕರಣೆ. ವಿದ್ಯಾರ್ಥಿಗಳು ಕಲಿಯಬೇಕಾದ ವಿಚಾರಗಳನ್ನು, ಪರಿಕಲ್ಪನೆಗಳನ್ನು ಅದು ಒಳಗೊಂಡಿರುತ್ತದೆ. ಬೋಧನೆ–ಕಲಿಕೆಗಳ ಗುರಿಗಳು, ಕಲಿಸುವ ವಿಧಾನ, ಸಾಧಿಸಬೇಕಾದ ಪರಿಣತಿ ಹಾಗೂ ಕಲಿಕೆಯ ಚಟುವಟಿಕೆ ಇತ್ಯಾದಿಗಳ ಸ್ಪಷ್ಟ ಚಿತ್ರಣವನ್ನು ಪಠ್ಯ ನೀಡುತ್ತದೆ. "ಪಠ್ಯಪುಸ್ತಕವು ವಿದ್ಯಾರ್ಥಿಗಳಿಗೆ ಲೋಕಜ್ಞಾನವನ್ನು, ಪ್ರಯೋಜನಕರ ಮಾಹಿತಿಯನ್ನೂ, ಜ್ಞಾನಾನುಭವಗಳನ್ನೂ ನೀಡುವ ಒಂದು ಅಧಿಕೃತ ಸಲಕರಣೆ. ಬಿಡುವಿನ ವೇಳೆಯಲ್ಲಿ ಸ್ವಾಧ್ಯಾಯ ನಡೆಸುವುದಕ್ಕೂ ಇದು ಸಹಕಾರಿ. ಪಠ್ಯಪುಸ್ತಕವು ಒಂದು ಮುಖ್ಯ ಬೋಧನಾ ಸಲಕರಣೆಯೂ ಹೌದು. ವಸ್ತು ಪ್ರತಿಪಾದನೆಯ ಕ್ರಮ, ಬೋಧನೆಯ ಉದ್ದೇಶ, ಬೋಧಿಸಬೇಕಾದ ರೀತಿ, ಪರೀಕ್ಷಿಸಬೇಕಾದ ರೀತಿ, ಬೋಧನೆಯಲ್ಲಿ ಒತ್ತು ನೀಡಬೇಕಾದ ಅಂಶಗಳು ಇವೇ ಮುಂತಾದ ಮಾರ್ಗಸೂಚಿಗಳನ್ನು ಅದು ಒಳಗೊಂಡಿರುತ್ತದೆ. ಹೀಗೆ ಪಠ್ಯ ಪುಸ್ತಕವೆಂಬುದು ಬೋಧನೆ ಹಾಗೂ ಕಲಿಕೆಯ ಹಂದರವನ್ನು ಸೂಚಿಸುವ ಶಿಕ್ಷಕರು ಹಾಗೂ ವಿದ್ಯಾರ್ಥಿಗಳಿಗೆ ಅತ್ಯವಶ್ಯಕವಾದ ಒಂದು ಪ್ರಮುಖ ಸಲಕರಣೆ"[೧]. ಶಿಕ್ಷಣ ನೀತಿಯ ನಿರ್ದೇಶನಕ್ಕನುಗುಣವಾಗಿ, ಭಾಷಾ ಪಠ್ಯದ ರಚನಾ ತತ್ವಗಳನ್ನು ಹಾಗೂ ಗುಣಲಕ್ಷಣಗಳನ್ನು ಅಳವಡಿಸಿಕೊಂಡು ಪಠ್ಯಪುಸ್ತಕಗಳು ರಚಿತವಾಗಿರುತ್ತವೆ. ಬೋಧನೆಯ ಉದ್ದೇಶಗಳ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳ ಭಾಷಾ ಕೌಶಲಗಳ ಕಲಿಕೆಗೆ ಉಪಯುಕ್ತವಾಗುವ ನಿಟ್ಟಿನಲ್ಲಿ ರೂಪಿತವಾಗಿರುತ್ತವೆ. 'ಪ್ರೌಢಶಾಲೆಗಳಲ್ಲಿ ಕನ್ನಡ ಭಾಷಾ ಕಲಿಕೆ ಒಂದು ಅಧ್ಯಯನ' ಎಂಬುದು ಅಧ್ಯಯನದ ವಿಷಯವಾದುದರಿಂದ ಪ್ರೌಢಶಾಲಾ ಕನ್ನಡ ಪ್ರಥಮ ಭಾಷಾ ಪಠ್ಯಪುಸ್ತಕಗಳನ್ನು ಸಮಗ್ರವಾಗಿ ವಿಶ್ಲೇಷಿಸುವುದು ಮುಖ್ಯವಾಗುತ್ತದೆ. ೨೦೧೨ರಲ್ಲಿ ಎಂಟನೆಯ ತರಗತಿಗೆ ನೂತನವಾಗಿ ಅಳವಡಿಸಿರುವ ಪಠ್ಯವನ್ನೂ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

## ೩.೧ ಭಾಷಾ ಪಠ್ಯಪುಸ್ತಕ ರಚನಾ ತತ್ವಗಳು

ಪಠ್ಯಪುಸ್ತಕ ರಚನಾ ಸಮಿತಿಯು ಪಠ್ಯರಚನೆಯನ್ನು ರಾಷ್ಟ್ರೀಯ ಶಿಕ್ಷಣ ನೀತಿಯ ನಿಯಮದ ಅನುಸಾರ ರಚಿಸುತ್ತದೆ. ರಾಷ್ಟ್ರೀಯ ಶಿಕ್ಷಣ ನೀತಿಯು ವಿದ್ಯಾರ್ಥಿಗಳ ಸರ್ವತೋಮುಖ ಅಭಿವೃದ್ಧಿಯನ್ನು ಕೇಂದ್ರವಾಗಿಟ್ಟುಕೊಂಡು ಭಾಷಾ ಶಿಕ್ಷಣದ ವಿಚಾರಗಳನ್ನು ಪ್ರಸ್ತಾಪಿಸುತ್ತದೆ. ಪ್ರಸ್ತುತ ಕನ್ನಡ ಭಾಷಾ ಪಠ್ಯಪುಸ್ತಕಗಳನ್ನು ರಾಷ್ಟ್ರದ ಪಠ್ಯವಸ್ತು

ಹಾಗೂ ಸಾಮರ್ಥ್ಯಾಧಾರಿತ ಕಲಿಕೆಯ ಕನಿಷ್ಟ ಮಟ್ಟಕ್ಕೆ ತಕ್ಕಂತೆ ರಚಿಸಲಾಗಿದೆ. ಎನ್.ಸಿ.ಇ.ಆರ್.ಟಿ ಮಾರ್ಗದರ್ಶನದಲ್ಲಿ ವಿದ್ಯಾರ್ಥಿ ಕೇಂದ್ರಿತ ಚಟುವಟಿಕೆ ಆಧಾರಿತ ಪಠ್ಯಗಳನ್ನು ಸೇರಿಸಲಾಗಿದೆ. ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಸೂಚಿತವಾಗಿರುವ, ಮಕ್ಕಳ ಸರ್ವತೋಮುಖ ವಿಕಾಸಕ್ಕೆ ನೆರವಾಗಬಲ್ಲ ಕೇಂದ್ರ ತತ್ವ, ೧೦ ಮೂಲಭೂತ ಅಂಶ ಹಾಗೂ ೮೪ ಮಾನವೀಯ ಮೌಲ್ಯಗಳನ್ನು ಆಧರಿಸಿ ಪಠ್ಯವಸ್ತುವನ್ನು ತಯಾರಿಸಲಾಗಿದೆ.

ಈ ಹಿನ್ನಲೆಯಲ್ಲಿ ಭಾಷಾ ಪಠ್ಯಪುಸ್ತಕ ರಚನಾ ತತ್ವಗಳನ್ನು ಈ ಮುಂದಿನಂತೆ ಗಮನಿಸಬಹುದು.

**೧. ವಿದ್ಯಾರ್ಥಿ ಕೇಂದ್ರಿತ ತತ್ವ:**

ಇಂದಿನ ಶಿಕ್ಷಣ ವಿದ್ಯಾರ್ಥಿ ಕೇಂದ್ರಿತವಾಗಿದ್ದು, ವಿದ್ಯಾರ್ಥಿಯ ಅವಶ್ಯಕತೆಗೆ ತಕ್ಕಂತೆ ಅವರ ಮಾನಸಿಕ, ಬೌದ್ಧಿಕ ಮತ್ತು ಸಂವೇದನಾತ್ಮಕ ಬೆಳವಣಿಗೆಗೆ ಸಹಾಯಕವಾಗುವಂತೆ ರಚಿತಗೊಳ್ಳಬೇಕು. ಅವರ ಅಗತ್ಯಗಳನ್ನು ಪೂರೈಸುವಂತಿರಬೇಕು. ಮಕ್ಕಳಗಾಗಿ ಪಠ್ಯಪುಸ್ತಕ ರಚನೆಯಾಗಬೇಕೇ ಹೊರತು ಪಠ್ಯಪುಸ್ತಕದಂತೆ ಮಕ್ಕಳು ತಯಾರಾಗಬೇಕಿಲ್ಲ.

**೨. ಚಟುವಟಿಕೆ ಕೇಂದ್ರಿತ ತತ್ವ:**

ಮಕ್ಕಳಿಗೆ ಹುಟ್ಟಿನಿಂದ ಬಂದ ಕ್ರಿಯಾಶೀಲತೆಯನ್ನು ಗಮನದಲ್ಲಿಟ್ಟುಕೊಂಡು ಅವರ ಮಾನಸಿಕ, ಶಾರೀರಿಕ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಅವಕಾಶ ಕಲ್ಪಿಸಬೇಕು. ಪಾಠದ ಕೊನೆಯಲ್ಲಿ ಆಯಾ ವಿಷಯಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನು ಕೊಡಬೇಕು. ಆಧಾರ ಗ್ರಂಥಗಳ ಅಧ್ಯಯನ, ಲೇಖಕರ ಪರಿಚಯ ಮತ್ತು ಅವರ ಭಾವಚಿತ್ರ ಸಂಗ್ರಹ, ಕತೆ ರಚಿಸುವುದು, ವಿಮರ್ಶೆ ಬರೆಯುವುದು, ಭಾಷಣ ಹಾಗೂ ಚರ್ಚಾ ಸ್ಪರ್ದೆಗಳಲ್ಲಿ ಭಾಗವಹಿಸುವುದು ಇತ್ಯಾದಿ.

**೩. ಸಮನ್ವಯ ತತ್ವ:**

ಪಠ್ಯಪುಸ್ತಕಗಳು ಯಾವುದೇ ಒಂದು ಅಂಶದ ಬಗ್ಗೆ ಮಾತ್ರ ವಿವರಣೆ ನೀಡದೆ, ಗದ್ಯ, ಪದ್ಯ, ವ್ಯಾಕರಣ, ನಾಟಕ, ಕತೆ, ವಿಮರ್ಶೆ ಜೀವನಚರಿತ್ರೆಗಳನ್ನು ಉಳಿದ ಕಲಿಕಾ ವಿಷಯಗಳೊಂದಿಗೆ ಸಮನ್ವಯಗೊಳಿಸಿ ರಚಿಸಬೇಕು.

**೪. ಸೃಜನಶೀಲತೆಯ ತತ್ವ:**

ಮಕ್ಕಳಲ್ಲಿ ಸೃಜನಶೀಲತೆ ಅಡಗಿರುತ್ತದೆ. ಅದು ವಿಕಾಸಗೊಂಡು ಹೊರಹೊಮ್ಮಲು ಅವಕಾಶವಿರಬೇಕು. ಪಠ್ಯಪುಸ್ತಕದ ವಿಷಯ, ಭಾಷೆ, ಕತೆ, ಕವನಗಳು ಸೃಜನಶೀಲತೆಯನ್ನು ಜಾಗೃತಗೊಳಿಸಿ ಹೊರತರುವಂತೆ ಸೇರ್ಪಡೆಯಾಗಬೇಕು.

**೫. ಸಾಂಸ್ಕೃತಿಕ ತತ್ವ:**

ಪಠ್ಯಪುಸ್ತಕಗಳು ನಮ್ಮ ದೇಶದ ವೈವಿದ್ಯಮಯ ಸಂಸ್ಕೃತಿಗಳ ನಡುವೆ ಏಕತೆ ತರಬಲ್ಲ, ಸಂಸ್ಕೃತಿ – ಪರಂಪರೆಗಳನ್ನು ಪರಿಚಯಿಸುವ ರೀತಿಯಲ್ಲಿರಬೇಕು. ಮಕ್ಕಳಲ್ಲಿ ಮಹಾನ್ ಪರಂಪರೆಯ ಅರಿವನ್ನು ಮೂಡಿಸಿ, ಮೈಗೂಡಿಸಿಕೊಳ್ಳಲು ನೆರವಾಗಬೆಕು.

**೬. ಮಾನವೀಯ ಮೌಲ್ಯಗಳ ತತ್ವ:**

ಪಠ್ಯಪುಸ್ತಕವು ಮಾನವೀಯ ಮೌಲ್ಯಗಳನ್ನು ಹೊಂದಿದ್ದು, ಅವುಗಳಿಗಾಗಿ ಶ್ರಮಿಸಬಲ್ಲ ಮಕ್ಕಳನ್ನು ತಯಾರಿಸುವಂತೆ ವಿಷಯಗಳನ್ನು ಹೊಂದಿರಬೇಕು. ನಿಸ್ವಾರ್ಥ, ಅಹಿಂಸೆ, ಕರುಣೆ, ಶಾಂತಿ, ದಯೆ, ಸಹಕಾರ, ಸ್ನೇಹ, ನ್ಯಾಯ, ನೀತಿ, ಧರ್ಮ, ಸತ್ಯ ಮತ್ತು ಪ್ರಾಮಾಣಿಕತೆ, ಅನಾಥ ಸೇವೆ, ಸಹಾಯ, ಅನುಕಂಪಗಳನ್ನು ಮಕ್ಕಳಲ್ಲಿ ಬೆಳೆಸುವಂತಿರಬೇಕು.

**೭. ನಿರಂತರತೆ ಮತ್ತು ಸಮಗ್ರತೆಯ ತತ್ವ:**

ಪಠ್ಯಪುಸ್ತಕದಲ್ಲಿ ಅಡಕವಾದ ವಿಷಯಗಳು ನಿರಂತರತೆಯನ್ನು ಹೊಂದಿದ್ದು, ಪರಸ್ಪರ ಸಂಬಂಧವನ್ನು ಹೊಂದಿರಬೇಕು. ಎಲ್ಲಾ ಪಾಠ, ಪದ್ಯಗಳು ಪಠ್ಯದಲ್ಲಿ ಏಕಸ್ವರೂಪವನ್ನು ತರುವಂತಿರಬೇಕು.

**೮. ಸಾಹಿತ್ಯ ತತ್ವ:**

ಪಠ್ಯಪುಸ್ತಕವು ವಿವಿಧ ಸಾಹಿತ್ಯ ಪ್ರಕಾರಗಳನ್ನು ಒಳಗೊಂಡಿರಬೇಕು. ಸಾಹಿತ್ಯ, ಜ್ಞಾನ, ಸಾಹಿತ್ಯ ಪ್ರೇಮಗಳನ್ನು ಬೆಳೆಸುವಂತಿರಬೇಕು. ಪ್ರಾಚೀನದಿಂದ ಆಧುನಿಕರವರೆಗೆ ಕವಿಗಳ ಲೇಖಕರ ಕೃತಿಗಳನ್ನು ಅಳವಡಿಸಿರಬೇಕು.

**೯. ಸಮಕಾಲೀನ ತತ್ವ:**

ಹಿಂದೆ ಜರುಗಿದ ಘಟನೆಗಳನ್ನು ಮಾತ್ರವಲ್ಲದೆ, ವರ್ತಮಾನದ ಹಾಗೂ ದೂರದ ಭವಿಷ್ಯದ ಘಟನೆಗಳನ್ನು ಪಠ್ಯಪುಸ್ತಕದಲ್ಲಿ ಸೇರಿಸಬೇಕು. ಪ್ರಚಲಿತ ಆಗುಹೋಗುಗಳು, ಸಾಹಿತಿಗಳ ಕೃತಿಗಳನ್ನು ಪಠ್ಯ ಒಳಗೊಂಡಿರಬೇಕು.

**೧೦. ವೈಯಕ್ತಿಕ ಭಿನ್ನತೆಯ ತತ್ವ:**

ಮಕ್ಕಳು ವೈವಿಧ್ಯಮಯ ಭಾವನೆ, ವಿಚಾರಗಳನ್ನು ಹೊಂದಿರುತ್ತಾರೆ. ಒಬ್ಬರಂತೆ ಇನ್ನೊಬ್ಬರಿರುವುದಿಲ್ಲ. ಅಂತಹ ವೈಯಕ್ತಿಕ ಭಿನ್ನತೆಗಳನ್ನು ಗುರುತಿಸಿ ಬೆಳೆಸುವಂತಿರಬೇಕು. ಆ ಮಾದರಿಯಲ್ಲಿ ಪಠ್ಯಪುಸ್ತಕವನ್ನು ಸಿದ್ಧಪಡಿಸಬೇಕು.

**೧೧. ಪ್ರಜಾಪ್ರಭುತ್ವ ಮತ್ತು ಪ್ರಗತಿಶೀಲ ತತ್ವ:**

ಪಠ್ಯಪುಸ್ತಕವು ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ, ರಾಷ್ಟ್ರೀಯತೆ, ವ್ಯಕ್ತಿಗೌರವ ಮೊದಲಾದ ಪ್ರಜಾಪ್ರಭುತ್ವದ ಆದರ್ಶ ಅಂಶಗಳನ್ನು ಒಳಗೊಂಡು ಮಕ್ಕಳನ್ನು ಯೋಗ್ಯ ಭಾವೀ ಪ್ರಜೆಗಳನ್ನಾಗಿಸಲು ಪ್ರಯತ್ನಿಸಬೇಕು. ಮೂಢನಂಬಿಕೆ, ಮಡಿ, ಮೈಲಿಗೆ ಮೊದಲಾದವುಗಳನ್ನು ಬಿಟ್ಟು ಪ್ರಗತಿಶೀಲರಾಗುವಂತೆ, ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳುವಂತೆ ಪಠ್ಯಪುಸ್ತಕವಿರಬೇಕು.

**೧೨. ಮೌಲ್ಯಮಾಪನ ತತ್ವ:**

ಪಠ್ಯಪುಸ್ತಕಗಳನ್ನು ಕೇವಲ ವಿದ್ಯಾರ್ಥಿಯ ಕಲಿಕೆಗೆ ಮಾತ್ರ ಸೀಮಿತಗೊಳಿಸಿದೆ ಕಲಿತಿದ್ದನ್ನು ಮೌಲ್ಯಮಾಪನ ಮಾಡಲು, ಎಲ್ಲರಿಗೂ ಸುಲಭವಾಗುವಂತಹ ಮೌಲ್ಯಮಾಪನ ಚಟುವಟಿಕೆಗಳನ್ನು ಒಳಗೊಂಡಿರಬೇಕು.

**೧೩. ರಾಷ್ಟ್ರೀಯ ಭಾವೈಕ್ಯತೆಯ ತತ್ವ:**

ದೇಶಪ್ರೇಮ, ಜಾತ್ಯತೀತತೆ, ಧರ್ಮನಿರಪೇಕ್ಷತೆ ಸೌಹಾರ್ದ, ನಾಡು–ನುಡಿ ಪ್ರೇಮ ಮೊದಲಾದುವುಗಳನ್ನು ಬಿಂಬಿಸುವಂತಹ ವಿಷಯಗಳನ್ನು ಒಳಗೊಂಡಿರಬೇಕು.

**೧೪. ಉಪಯುಕ್ತತೆಯ ತತ್ವ:**

ಜ್ಞಾನವೆಂಬ ನಿಧಿಯನ್ನು ಕಲಿತ ಮಕ್ಕಳು ಅದನ್ನು ತಮ್ಮ ನಿಜ ಜೀವನದಲ್ಲಿ ಅಳವಡಿಸಿಕೊಳ್ಳುವಂತೆ ಪಠ್ಯಪುಸ್ತಕ ಇರಬೇಕು. ಅವರ ನಡವಳಿಕೆಯಲ್ಲಿ ಬದಲಾವಣೆಯನ್ನು ತರುವಂತಿರಬೇಕು. ಅದರಲ್ಲಿ ವ್ಯಕ್ತಿ ಹಾಗೂ ಸಮಾಜದ ಹಿತದೃಷ್ಟಿ ಅಡಕವಾಗಿರಬೇಕು.

**೧೫. ಅಭ್ಯಾಸ ಹಾಗೂ ವ್ಯಾಕರಣ ತತ್ವ:**

ಭಾಷಾ ಕೌಶಲಗಳಾದ ಆಲಿಸುವಿಕೆ, ಮಾತು, ಓದು ಹಾಗೂ ಬರಹಗಳನ್ನು ಅಭ್ಯಾಸ ಮಾಡಲು, ಭಾಷಾ ಸಾಮರ್ಥ್ಯಗಳನ್ನು ಕಲಿಯಲು ಅವಕಾಶವಿರಬೇಕು. ಕಲಿಕಾ ಅನುಭವಗಳನ್ನು ನೀಡಬೇಕು. ಶುದ್ಧ ಭಾಷಾ ಪ್ರಯೋಗಕ್ಕಾಗಿ ಪಠ್ಯಪುಸ್ತಕವು ವ್ಯಾಕರಣ, ಅಲಂಕಾರ ಛಂದಸ್ಸುಗಳ ಕಲಿಕೆಗೆ ಅವಕಾಶ ನೀಡಬೇಕು.

**೧೬. ಜೀವನಾನುಭವ ತತ್ವ:**

ಪಠ್ಯ ಪುಸ್ತಕಗಳು ವಿದ್ಯಾರ್ಥಿಯ ಜೀವನಕ್ಕೆ ಸಂಬಂಧಿಸಿದ ಕಲ್ಪನೆಗಳನ್ನು ಮೂಡಿಸುವಂತಿರಬೇಕು. ಕುಟುಂಬ, ಸಮಾಜ, ಪರಿಸರ, ಸಾಮಾಜಿಕ, ಆರ್ಥಿಕ ಪದ್ಧತಿಗಳು, ಚರಿತ್ರಾಂಶಗಳನ್ನು ಜೀವನಾನುಭವಕ್ಕೆ ಪೂರಕವಾಗಿ ನೀಡಬೇಕು.

## ೩.೨ ಕನ್ನಡ ಭಾಷಾ ಪುಸ್ತಕದ ಗುಣಲಕ್ಷಣಗಳು

ಕನ್ನಡ ಭಾಷಾ ಪಠ್ಯಪುಸ್ತಕಗಳು ಪಠ್ಯರಚನಾ ತತ್ವಗಳಿಗೆ ಅನುಸಾರವಾಗಿ ರೂಪಿತವಾಗಿರುತ್ತವೆ. ಪಠ್ಯಪುಸ್ತಕದ ಗುಣಮಟ್ಟಕ್ಕೆ ತಕ್ಕಂತೆ ಕಲಿಯುವವನ ಕಲಿಕೆಯ ಗುಣಮಟ್ಟವು ಕಂಡು ಬರುತ್ತದೆ. ಅಲ್ಲದೆ ಭಾಷಾ ಪುಸ್ತಕಗಳಿಲ್ಲದೆ ಪಾಠಬೋಧನೆ ಸಾಧ್ಯವಿಲ್ಲ. ಲಾಭದ ದೃಷ್ಟಿಯಿಂದ ಪಠ್ಯ ಪುಸ್ತಕವನ್ನು ರಚಿಸುವುದಕ್ಕೆ ಬದಲಾಗಿ, ಮಕ್ಕಳ ಶೈಕ್ಷಣಿಕ ಬೆಳವಣಿಗೆಯನ್ನು ಮೂಲ ಉದ್ದೇಶವಾಗಿಟ್ಟುಕೊಂಡಿರಬೇಕು. ಈ ಹಿನ್ನಲೆಯಲ್ಲಿ ಭಾಷಾ ಪಠ್ಯಪುಸ್ತಕದ ಗುಣಲಕ್ಷಣಗಳು:

"೧. ಬಾಹ್ಯ ಲಕ್ಷಣಗಳು ಹಾಗೂ

೨. ಆಂತರಿಕ ಲಕ್ಷಣಗಳೆಂದು ಎರಡು ಭಾಗಗಳಲ್ಲಿ ಅಧ್ಯಯನ ಮಾಡಬಹುದು.

**ಅ) ಬಾಹ್ಯ ಲಕ್ಷಣಗಳು**

೧. ಪಠ್ಯಪುಸ್ತಕವು ಆಕರ್ಷಣೀಯವಾಗಿದ್ದು, ಮಕ್ಕಳನ್ನು ಸೆಳೆಯುವಂತಿರಬೇಕು.

೨. ಗಟ್ಟಿಯಾದ ರಕ್ಷಾ ಕವಚವಿರಬೇಕು. ಬೈಂಡಿಂಗ್ ಚೆನ್ನಾಗಿರಬೇಕು.

೩. ಪುಸ್ತಕವು ತರಗತಿ ಹಾಗೂ ಶೀರ್ಷಿಕೆಯನ್ನು ಹೊಂದಿರಬೇಕು.

೪. ಮುದ್ರಕರು, ಪ್ರಕಾಶಕರು, ಪ್ರಕಟಣಾವರ್ಷ ಮೊದಲಾದ ವಿವರಗಳಿರಬೇಕು.
೫. ಪಠ್ಯವಸ್ತುವಿಗೆ ತಕ್ಕಂತೆ, ರಕ್ಷಾಕವಚದ ಚಿತ್ರವಿರಬೇಕು.
೬. ಪುಸ್ತಕದ ಬೆಲೆಯನ್ನು ನಮೂದಿಸಿದ್ದು, ಸುಲಭ ಬೆಲೆಗೆ ದೊರೆಯುವಂತಿರಬೇಕು.
೭. ಗಾತ್ರವು ವಿದ್ಯಾರ್ಥಿಗಳ ಮಟ್ಟಕ್ಕೆ ತಕ್ಕಂತೆ, ಆಯತಾಕಾರದಲ್ಲಿರಬೇಕು.
೮. ಮುನ್ನುಡಿ, ಪರಿವಿಡಿ, ಪುಟಸಂಖ್ಯೆಗಳನ್ನು ಸೇರಿಸಿರಬೇಕು.
೯. ಆರಂಭ ಹಾಗೂ ಕೊನೆಯಲ್ಲಿ ನಾಡಗೀತೆ, ರಾಷ್ಟ್ರಗೀತೆ, ಹಕ್ಕು, ಕರ್ತವ್ಯ ವಿಶ್ವಮಾನವ ಸಂದೇಶಗಳಿರಬೇಕು.
೧೦. ಬೋಧಕರಿಗೆ ನೆರವಾಗುವಂತಹ ಸೂಚನೆಗಳಿರಬೇಕು.
೧೧. ಮುದ್ರಣವು ಸುಂದರವಾಗಿದ್ದು, ದೋಷಮುಕ್ತವಾಗಿರಬೇಕು.
೧೨. ಪುಟಗಳನ್ನು ಸುಲಭವಾಗಿ ತಿರುಗಿಸಿ, ಓದಲು ಬರುವಂತಹ ಗುಣಮಟ್ಟದ ಹಾಲುಬಿಳಿಬಣ್ಣದ ಕಾಗದವನ್ನು ಬಳಸಿರಬೇಕು.

**ಆ) ಆಂತರಿಕ ಗುಣಲಕ್ಷಣಗಳು**

೧. ಭಾಷಾ ಬೋಧನೆಯ ಗುರಿ, ಉದ್ದೇಶಗಳನ್ನು ಸಾಧಿಸುವಂತಿರಬೇಕು.
೨. ಭಾಷೆ ಹಾಗೂ ವಿಷಯಗಳು ಮಕ್ಕಳ ತರಗತಿ ಹಾಗೂ ವಯೋಮಾನಕ್ಕೆ ತಕ್ಕಂತೆ ವೈವಿಧ್ಯಮಯವಾಗಿರಬೇಕು.
೩. ವಿಷಯ ತೀರಾ ಸುಲಭ ಅಥವಾ ಕಠಿಣವಾಗಿರದೆ, ಮಧ್ಯಮ ಗುಣಮಟ್ಟದ್ದಾಗಿರಬೇಕು. ಸರಳತೆಯಿಂದ ಕಠಿಣತೆಯ ಕಡೆಗೆ ಸಾಗುವಂತಿರಬೇಕು. ಕಲಿಕೆಯ ನಿಯಮಗಳಿಗೆ ತಕ್ಕಂತಿರಬೇಕು.
೪. ಪ್ರತಿ ಪಾಠವು ತಕ್ಕ ಶಿರೋನಾಮೆ, ಉಪಶೀರ್ಷಿಕೆ, ಕವಿಕೃತಿ ಪರಿಚಯ, ಭಾಷಾಭ್ಯಾಸ, ಅಭ್ಯಾಸ ಚಟುವಟಿಕೆಗಳು, ಟಿಪ್ಪಣಿಗಳು, ಅನುಬಂಧ, ಹೊಸ ಪದ ಪರಿಚಯ ಮೊದಲಾದವುಗಳಿಂದ ಕೂಡಿರಬೇಕು.
೫. ಅಗತ್ಯವಿದ್ದರೆ ತಪ್ಪು ಒಪ್ಪು ರೂಪಗಳನ್ನು ಕೊನೆಯಲ್ಲಿ ತೋರಿಸಿರಬೇಕು.
೬. ಹೆಚ್ಚಿನ ಅಧ್ಯಯನಕ್ಕಾಗಿ ಸಂದರ್ಭ ಗ್ರಂಥಗಳನ್ನು ಸೂಚಿಸಿರಬೇಕು.
೭. ಮಕ್ಕಳ ಮಟ್ಟಕ್ಕೆ ತಕ್ಕಂತೆ ಪದಗಳು, ನುಡಿಗಟ್ಟುಗಳು, ಗಾದೆ ಮಾತುಗಳು, ಒಗಟುಗಳು, ಹೇಳಿಕೆಗಳು ಇರಬೇಕು.
೮. ಜಾನಪದ ಸಾಹಿತ್ಯ ಮೊದಲಾದ ಸಾಹಿತ್ಯ ಪ್ರಕಾರಗಳನ್ನು ಪ್ರತಿನಿಧಿಸುವಂತಿರಬೇಕು.
೯. ಪುಸ್ತಕವು ಜಾತ್ಯತೀತವಾಗಿದ್ದು, ಮಾನವೀಯ ಮೌಲ್ಯಗಳು, ಸಂಸ್ಕೃತಿ, ಸಾಹಿತ್ಯ ಪ್ರಸಾರ ಮಾಡುವಂತಿರಬೇಕು.

೧೦. ಸಾಧಾರಣ, ಬುದ್ಧಿವಂತ, ಅತೀ ಬುದ್ಧಿವಂತ ಮಕ್ಕಳೆಲ್ಲರಿಗೂ ತೃಪ್ತಿಯಿಂದ, ಸ್ವಯಂ ಕಲಿಯಲು ನೆರವಾಗುವಂತಿರಬೇಕು. ಅವರ ಆಲೋಚನಾ ಶಕ್ತಿ, ಕಲ್ಪನಾಶಕ್ತಿಗಳನ್ನು ಉತ್ತೇಜಿಸುವಂತಿರಬೇಕು.

೧೧. ವಾಕ್ಯರಚನೆ ಸರಳವಾಗಿದ್ದು, ಪಾಠಗಳು ಪರಿಚ್ಛೇದಗಳಿಂದ ಕೂಡಿರಬೇಕು, ಭಾಷಾಶೈಲಿ ಆಕರ್ಷಕವಾಗಿರಬೇಕು.

೧೨. ಆಗಾಗ್ಗೆ ಪರಿಷ್ಕಾರಗೊಳಿಸಲು ಅವಕಾಶವಿರಬೇಕು.

೧೩. ಆಕರ್ಷಕವಾದ ಚಿತ್ರಗಳಿರಬೇಕು.

೧೪. ಹಿಂದಿನ ತರಗತಿಗಳಲ್ಲಿ ಕಲಿತ ಪಾಠಗಳನ್ನು ಪುನರಾವರ್ತಿಸಬಾರದು"[೨].

## ೩.೩ ಕನ್ನಡ ಭಾಷಾ ಬೋಧನಾ ಉದ್ದೇಶಗಳು.

ರಾಷ್ಟ್ರೀಯ ಶಿಕ್ಷಣ ನೀತಿಯ ಆಧಾರದ ಮೇಲೆ ಹಾಗೂ ಅದು ರೂಪಿಸಿದ ಮಾತೃಭಾಷಾ ಬೋಧನೆಯ ಮುಖ್ಯ ಉದ್ದೇಶಗಳ ಹಿನ್ನೆಲೆಯಲ್ಲಿ, ಆಲಿಸಿ, ಗ್ರಹಿಸಿ, ವೇಗವಾಗಿ ಓದಿ, ಮೌಖಿಕ ಹಾಗೂ ಲಿಖಿತ ಅಭಿವ್ಯಕ್ತಿಗಳ ಸಾಮರ್ಥ್ಯಗಳನ್ನು ಬೆಳೆಸುವುದು ಬೋಧನೆಯ ಪ್ರಥಮ ಉದ್ದೇಶ. ಸ್ವತಂತ್ರವಾಗಿ ಓದಲು ಸಮರ್ಥರಾಗುವಂತೆ ಮಾಡುವುದು ಎರಡನೆಯ ಉದ್ದೇಶ. ಪ್ರತಿ ಬಾರಿಯೂ ಪಠ್ಯಪುಸ್ತಕ ರಚನಾ ಸಮಿತಿಯು ಭಾಷಾ ಬೋಧನೆಯ ಉದ್ದೇಶಗಳ ಕುರಿತಾಗಿ ಶಿಕ್ಷಕರ ಕೈಪಿಡಿಗಳಲ್ಲಿ ಈ ಅಂಶಗಳನ್ನು ಮುದ್ರಿಸುತ್ತದೆ. ಅಧ್ಯಯನದ ಫಲಿತಗಳ ಹಿನ್ನೆಲೆಯನ್ನು ಗಮನಿಸಿದಾಗ ವಾಸ್ತವ ಪರಿಸ್ಥಿತಿ ಇದಕ್ಕೆ ತದ್ವಿರುದ್ಧವಿದೆ ಎಂಬಂತಿದೆ.

ಪ್ರೌಢಶಾಲೆಗಳ ಕನ್ನಡ ಬೋಧನೆಗೆ ಉದ್ದೇಶವಿರುವಂತೆ ಪ್ರಾಥಮಿಕ ಶಾಲಾ ಬೋಧನೆಗೂ ಗುರಿ ಉದ್ದೇಶಗಳಿವೆ. ಈ ಗುರಿ ಉದ್ದೇಶ ಸಾಧನಗಳನ್ನು, ಮೌಲ್ಯಮಾಪನ ವಿಧಾನಗಳನ್ನು ಗಮನಿಸಿದರೆ, ಉದ್ದೇಶಗಳು ಆದರ್ಶಕ್ಕಾಗಿ ಮಾತ್ರ, ಸಾಧನೆಯಾಗಬೇಕೆಂದೇನಿಲ್ಲ. ಕಾರಣ, ಶೇಕಡಾ ೩೫ ಅಂಕಗಳನ್ನು ಒಬ್ಬ ವಿದ್ಯಾರ್ಥಿ ಒಂದು ತರಗತಿಯಲ್ಲಿ ಗಳಿಸಿದರೆ ಅವನು ಆ ತರಗತಿಯಿಂದ ತೇರ್ಗಡೆ ಹೊಂದಿ ಮುಂದಿನ ತರಗತಿಗೆ ಹೋಗಬಹುದು ಎಂಬ ನಿಯಮವಿದೆ. ೩೫ಕ್ಕಿಂತ ಕಡಿಮೆ ಅಂಕ ತೆಗೆದ ಸಂದರ್ಭದಲ್ಲಿ ಮರು ಬೋಧನೆ, ಮರು ಮೌಲ್ಯಮಾಪನವನ್ನು ಮಾಡಿ ಆತನನ್ನು ೩೫ರ ಗಡಿ ದಾಟಿಸುವ ವ್ಯವಸ್ಥೆ ಶಿಕ್ಷಣ ಇಲಾಖೆಯಲ್ಲಿದೆ. ತರಗತಿಯಲ್ಲಿನ ವಿದ್ಯಾರ್ಥಿ ಶೇಕಡಾ ೩೫ರಷ್ಟು ಸಾಮರ್ಥ್ಯ ಗಳಿಸಿದರೆ, ಆ ತರಗತಿಯ ಬೋಧನಾ ಉದ್ದೇಶಗಳು ಕೂಡಾ ಶೇಕಡಾ ೩೫ರಷ್ಟು ಸಫಲತೆ ಕಂಡಂತಾಗುತ್ತದೆ. ಇಲ್ಲಿ ಕನ್ನಡ ಬೋಧನಾ ಉದ್ದೇಶಗಳಿಗೂ ಮೌಲ್ಯಮಾಪನದ ಮಾಪಕಗಳಿಗೂ ಹೊಂದಿಕೆಯಾಗುತ್ತಿಲ್ಲ. ಸೇತುಬಂಧ ಕಾರ್ಯಕ್ರಮದಲ್ಲಿಯೂ ಈ ರೀತಿಯ ಗೊಂದಲಗಳಿವೆ.

ವಿದ್ಯಾರ್ಥಿಗಳಲ್ಲಿ ಕಲಿಕಾ ಸಾಮರ್ಥ್ಯ ಹೆಚ್ಚಬೇಕೆಂದರೆ, ಅಲ್ಲಿ ಬೋಧನಾ ಉದ್ದೇಶಗಳನ್ನೂ ಅದೇ ಮಟ್ಟದಲ್ಲಿ ಕಾಯ್ದುಕೊಳ್ಳಬೇಕಾಗುತ್ತದೆ. ಬೋಧನಾ ವಿಧಾನಗಳಲ್ಲಿ ದೋಷವಿದ್ದಾಗ ಕಲಿಕಾ ಸಾಮರ್ಥ್ಯಗಳಲ್ಲೂ ದೋಷಗಳು ಕಾಣಸಿಗುತ್ತವೆ. ಭಾಷಾ ಬೋಧನೆಯ ಉದ್ದೇಶ ಸಾಧನೆಗೆ ಹಲವು ವಿಧಾನಗಳಿದ್ದರೂ ಅಧ್ಯಾಪಕರು ನೂತನ ವಿಧಾನಗಳನ್ನು ಅಳವಡಿಸಿಕೊಳ್ಳದೇ ಸಾಂಪ್ರದಾಯಿಕ ವಿಧಾನಗಳಾದ ಉಪನ್ಯಾಸ ವಿಧಾನ ಮತ್ತು ಪಠ್ಯಪುಸ್ತಕ ವಿಧಾನಗಳನ್ನೇ ಅಳವಡಿಸಿಕೊಂಡಿರುವುದರಿಂದ ವಿದ್ಯಾರ್ಥಿಗಳ ಆಲಿಸುವಿಕೆಯ ಮಟ್ಟ ಕುಸಿದಿದೆ. ಆಧುನಿಕ ಸಂವಹನ ಮಾಧ್ಯಮಗಳ ಆಕರ್ಷಣೆಯ ಪ್ರಭಾವ ವಿದ್ಯಾರ್ಥಿಗಳ ಮೇಲೆ ದಟ್ಟವಾಗಿದೆ. ತರಗತಿಯ ಅಥವಾ ಶಾಲಾ ವಾತಾವರಣವು ಈ ಯಾವ ಆಕರ್ಷಣೆಗಳನ್ನೂ ಹೊಂದಿಲ್ಲದಿರುವುದರಿಂದ ವಿದ್ಯಾರ್ಥಿಗಳು ಪಾಠ ಹಾಗೂ ಕಲಿಕೆಗಾಗಿ ಸಿದ್ಧರಾಗುವ ಮನಸ್ಥಿತಿ ಕಡಿಮೆಯಿದೆ. ಯಾಂತ್ರಿಕವಾಗಿ ಕುಳಿತು ಪಾಠ ಕೇಳುತ್ತಾರಷ್ಟೆ. ತರಗತಿಯಲ್ಲಿ ಬರೀ ಕೇಳುವಿಕೆ ಮಾತ್ರ ಆಗುತ್ತಿದೆ, ಆಲಿಸುವಿಕೆಯಾಗುತ್ತಿಲ್ಲ. ವಿದ್ಯಾರ್ಥಿಗಳಿಗೆ ಆಲಿಸುವಿಕೆ ಹಾಗೂ ಗ್ರಹಿಸುವಿಕೆಯ ಹಂತದಲ್ಲಿಯೇ ಸಮಸ್ಯೆಗಳಿರುವುದರಿಂದ ಬೋಧನೆಯ ಉದ್ದೇಶಗಳು ತರಗತಿಯಲ್ಲಿ ಸಾಧಿತವಾಗುತ್ತಿಲ್ಲ.




ಇನ್ನೊಂದು ಬಹು ಮುಖ್ಯವಾದ ವಿಚಾರವಿದೆ. ಬೋಧನೆಯ ಉದ್ದೇಶಗಳು ವಿದ್ಯಾರ್ಥಿಗಳಲ್ಲಿ ಸ್ಫುರಿಸಬೇಕಾದರೆ ಅತ್ಯಂತ ಮಹತ್ವದ ಪಾತ್ರವಹಿಸುವವರು ಶಿಕ್ಷಕರು. ಸಮರ್ಥ, ಸೃಜನಶೀಲ ಶಿಕ್ಷಕರಿಂದ ಮಾತ್ರ ವಿದ್ಯಾರ್ಥಿಗಳನ್ನು ಕಲಿಕೆಯ ಉತ್ತುಂಗಕ್ಕೇರಿಸಲು ಸಾಧ್ಯ. ಬರೀ ಪಠ್ಯಪುಸ್ತಕವಾಗಲೀ, ಶಿಕ್ಷಣ ಇಲಾಖೆಯಾಗಲೀ ವಿದ್ಯಾರ್ಥಿಗಳ ಕಲಿಕೆಯನ್ನು ಉತ್ತಮೀಕರಿಸಲಾಗದು. ಶಿಕ್ಷಕರ ಸಹಾಯ ಬೇಕೇ ಬೇಕಾಗುತ್ತದೆ. ಈ ಶಿಕ್ಷಕರ ಸಹಾಯದಿಂದ ಸಂವಹನ ಕೌಶಲಗಳಾದ ಆಲಿಸುವಿಕೆ, ಮಾತನಾಡುವಿಕೆ, ಓದುವಿಕೆ ಹಾಗೂ ಬರವಣಿಗೆಯ ಕೌಶಲಗಳನ್ನು ಬೆಳೆಸುವುದು, ಶಬ್ದ ಸಂಪತ್ತನ್ನು ಹೆಚ್ಚಿಸುವುದು. ಸಾಹಿತ್ಯಾಭಿರುಚಿಯನ್ನು ಬೆಳೆಸುವುದು. ವಾಚನಾಭಿರುಚಿಯನ್ನು ಬೆಳೆಸುವುದು. ಜ್ಞಾನಾರ್ಜನೆ ಮತ್ತು ಜೀವನ ಕೌಶಲ್ಯ, ರಸಾನುಭವದ ಭಾವಾಭಿವ್ಯಕ್ತಿ, ಕನ್ನಡ ನಾಡು ನುಡಿ ಜನತೆಯ ಕುರಿತು ಅಭಿಮಾನ

ಬೆಳೆಸುವುದು, ಅಂತರ್ ದೃಷ್ಟಿ ಮತ್ತು ಆನಂದ, ಸೌಂದರ್ಯ ಪ್ರಜ್ಞೆಯನ್ನು ಮೂಡಿಸುವುದು ಈ ಮೊದಲಾದ ಉದ್ದೇಶಗಳನ್ನು ಸಾಧಿಸಬೇಕಾಗಿದೆ.

ಸಾಧಿಸಬೇಕಾದ ಉದ್ದೇಶಗಳ ಹಿನ್ನೆಲೆಯಲ್ಲಿ ಶಿಕ್ಷಕರ ತರಬೇತಿ, ತರಬೇತಿಯಲ್ಲಿನ ವಿಚಾರಗಳು, ಸೇವಾಂತರ್ಗತ ತರಬೇತಿಗಳು, ಪುನಶ್ಚೇತನಾ ಶಿಬಿರಗಳು ಇತ್ಯಾದಿಗಳನ್ನು ಗಮನಿಸಿದರೆ ಬಹಳಷ್ಟು ಬದಲಾವಣೆ ಅನಿವಾರ್ಯವೆನಿಸುತ್ತದೆ. ಬಹುದೊಡ್ಡ ಆಶಯಗಳ ಪಟ್ಟಿಯನ್ನು ಕೇವಲ ಪಠ್ಯಪುಸ್ತಕದೊಂದಿಗೆ ಸಾಧಿಸುವುದು ಹೇಗೆ? ಬೋಧನೆಯ ಉದ್ದೇಶ ಸಾಧನೆಗೆ ಅಗತ್ಯವಾದ ಸೌಕರ್ಯಗಳನ್ನು ಸರಕಾರ ಕೊಡದಿರುವ ಬಗ್ಗೆಯೂ ಅಧ್ಯಾಪಕರು ದಿವ್ಯ ಮೌನ ತಾಳಿದ್ದಾರೆ.

ಶಿಕ್ಷಕರಿಗೆ ಬೋಧನೋದ್ದೇಶಗಳ ಕುರಿತು ಸಮಗ್ರ ತರಬೇತಿಗಳಿಲ್ಲ. ಬೋಧನಾ ಉದ್ದೇಶಗಳನ್ನು ತರಗತಿಗಳಲ್ಲಿ ಅಳವಡಿಸಲು ಬೇಕಾದ ಕೌಶಲ ವರ್ಧಕ ಸೌಲಭ್ಯಗಳಿಲ್ಲ. ಶಿಕ್ಷಕರಿಗೆ ಮೌಲ್ಯಮಾಪನವೆಂಬುದಿಲ್ಲ. ಅವರ ಕಾರ್ಯಗಳು ಚಟುವಟಿಕೆಗಳು, ಸಾಮರ್ಥ್ಯಗಳು, ಆಧುನಿಕ ವಿಧಾನಗಳನ್ನು ಅನುಸರಿಸುತ್ತಿರುವುದು, ಅವರ ಬೋಧನೆಯ ಪರಿಣಾಮ ವಿದ್ಯಾರ್ಥಿಗಳ ಮೇಲೆ ಯಾವ ಮಟ್ಟದಲ್ಲಿ ಆಗಿದೆ ಎಂಬ ವಿಚಾರದಲ್ಲಿ ಮಾಹಿತಿ ಸಂಗ್ರಹ, ಅಧ್ಯಾಪಕರಲ್ಲಿನ ಕರ್ತವ್ಯ ನಿಷ್ಠೆ, ಸಮಯ ಪ್ರಜ್ಞೆ ಇತ್ಯಾದಿ ವಿಷಯಗಳ ಹಿನ್ನೆಲೆಯಲ್ಲಿ ಅಧ್ಯಾಪಕರಿಗೂ ಮೌಲ್ಯಮಾಪನಗಳಿರಬೇಕು.

ಬೋಧನೆ ಹಾಗೂ ಕಲಿಕಾ ಪ್ರಕ್ರಿಯೆಯ ಕೊನೆಯಲ್ಲಿ ವಿದ್ಯಾರ್ಥಿಯು ಗಳಿಸುವ ಸಾಮರ್ಥ್ಯ ಹಾಗೂ ಸಾಧಿಸುವ ಶೈಕ್ಷಣಿಕ ಸಾಧನೆ ಮುಖ್ಯವಾಗುತ್ತದಾದ್ದರಿಂದ ಬೋಧನಾ ಉದ್ದಿಷ್ಟಗಳನ್ನು ವಿದ್ಯಾರ್ಥಿಕೇಂದ್ರಿತ ನೆಲೆಯಲ್ಲಿ ನೋಡಬೇಕಾಗುತ್ತದೆ. ಈ ವಿಚಾರವಾಗಿ ಬಹಳಷ್ಟು ವಿದ್ವಾಂಸರು ಹಲವು ಬಗೆಯಲ್ಲಿ ತಮ್ಮ ಚಿಂತನೆಯನ್ನು ಪ್ರತಿಪಾದಿಸಿದ್ದಾರೆ.

## ೩.೪ ಕನ್ನಡ ಭಾಷಾ ಬೋಧನೆಯ ಉದ್ದಿಷ್ಟಗಳು ಹಾಗೂ ನಿರ್ದಿಷ್ಟಗಳು

ಭಾಷಾ ಬೋಧನೆಯ ಉದ್ದೇಶಗಳು ವ್ಯಾಪಕವಾಗಿರುತ್ತವೆ. ಒಂದು ಉದ್ದೇಶದ ಹಿಂದೆ ಹಲವು ಕೌಶಲಗಳ ಕಲಿಕೆಯಿರುತ್ತದೆ. ಇದನ್ನು ಉದ್ದಿಷ್ಟಗಳು ಎನ್ನಲಾಗುತ್ತದೆ. ಈ ಉದ್ದಿಷ್ಟಗಳ ಸಾಧನೆಗೆ ಶಿಕ್ಷಕರು ಅನೇಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕಾಗುತ್ತದೆ. ಪ್ರಸ್ತುತ ಶಿಕ್ಷಕ ಶಿಕ್ಷಣ ಮಹಾವಿದ್ಯಾಲಯಗಳಲ್ಲಿ ಡಾ. ಬೆಂಜಮಿನ್ ಬ್ಲೂಮ್ ರವರು ಪ್ರತಿಪಾದಿಸಿರುವ ಬೋಧನಾ ಉದ್ದಿಷ್ಟಗಳನ್ನು ಅಳವಡಿಸಿಕೊಳ್ಳಲಾಗಿದೆ.

ಶಿಕ್ಷಣ ತಜ್ಞ ಕ್ರಾತ್ ವೋಲ್ ಉದ್ದಿಷ್ಟಗಳ ಮೂರು ನೆಲೆಗಳನ್ನು ಸ್ಪಷ್ಟಪಡಿಸಿಕೊಳ್ಳಬೇಕೆಂದು ಸೂಚಿಸುತ್ತಾರೆ.

೧ ಪಠ್ಯಕ್ರಮದ ಉದ್ದೇಶಗಳು

೨ ನಿರ್ದಿಷ್ಟ ಬೋಧನಾ ಉದ್ದಿಷ್ಟಗಳು

೩ ಬೋಧನಾ ಉದ್ದಿಷ್ಟಗಳನ್ನು ಸಾಧಿಸಲಿಕ್ಕಾಗಿ ತಯಾರಿಸಿಕೊಂಡಿರುವ ಪಾಠ ಯೋಜನೆ" [೩].

ಶಿಕ್ಷಣ ಇಲಾಖೆಯು ಭಾಷಾ ಬೋಧನೆಯ ಉದ್ದಿಷ್ಟಗಳು ಹಾಗೂ ನಿರ್ದಿಷ್ಟಗಳನ್ನು ಶಿಕ್ಷಕರ ನೆರವಿಗಾಗಿ ಹೀಗೆ ಪ್ರಕಟಿಸಿದೆ.

**ಅ) "ಜ್ಞಾನ (ವಿಷಯ ಸಂಗ್ರಹಣೆ)**

ವಿದ್ಯಾರ್ಥಿಯು ಭಾಷೆಯ ಮೂಲ ಅಂಶಗಳನ್ನು, ಶಬ್ದಗಳನ್ನು, ಅಲಂಕಾರಗಳನ್ನು, ಛಂದಸ್ಸನ್ನು, ನುಡಿಗಟ್ಟನ್ನು, ಭಾಷಾ ರೀತಿಯಲ್ಲಿ ಶೈಲಿಯನ್ನು ತಿಳಿಯುತ್ತಾನೆ

❖ ನಿರ್ದಿಷ್ಟಗಳು

೧. ವಿದ್ಯಾರ್ಥಿಯು ಈ ಕೆಳಕಂಡ ಮೂಲಾಂಶಗಳನ್ನು ಸ್ಮರಿಸುತ್ತಾನೆ.

ಅ) ವ್ಯಾಕರಣದ ವಿಷಯಗಳು, ನಾಮಪದ, ಕ್ರಿಯಾಪದ, ಗುಣವಾಚಕ, ವಿಶೇಷಣ, ಸರ್ವನಾಮ, ವಚನ, ಲಿಂಗ, ಕಾಲ, ಕ್ರಿಯಾರೂಪ ಪದಗಳ ಸ್ಥಾನ ಇತ್ಯಾದಿ

ಆ) ಪದಾನುಕ್ರಮ

ಇ) ಕಾಗುಣಿತ ವಿಶೇಷತೆ

ಈ) ವಾಕ್ಯ ಚಿಹ್ನೆಗಳು

ಉ) ವಸ್ತು–ಅರ್ಥ, ಅರ್ಥ–ವಸ್ತು ಇವುಗಳ ಪರಸ್ಪರ ಸಂಬಂಧ

ಊ) ಅಲಂಕಾರ, ಛಂದಸ್ಸು, ನುಡಿಗಟ್ಟು ಇತ್ಯಾದಿ

ಎ) ಭಾಷಾ ಮಾದರಿಗಳು

ಏ) ಪಠ್ಯಾಂಶಗಳು, ಲೇಖಕರು, ವಿಷಯ, ಘಟನೆ, ವಿಚಾರಗಳು, ಭಾವಗಳು

ಒ) ಉಚ್ಚಾರಣೆ, ಸ್ಥಾಯಿ, ಧ್ವನಿ ವ್ಯತ್ಯಾಸ

ಓ) ಬರವಣಿಗೆಯ ನಿಯಮಗಳು

ಔ) ಉಪಸರ್ಗಗಳು, ಪ್ರತ್ಯಯಗಳು ಇತ್ಯಾದಿ

ಮೇಲೆ ತಿಳಿಸಿದ ವಿಷಯಗಳನ್ನು ಗುರುತಿಸುತ್ತಾನೆ.

**ಆ) ಗ್ರಹಿಕೆ (ಸಂಗ್ರಹಿಸಿದ ವಿಷಯಗಳ ಸಂಯೋಜನೆ ಅರ್ಥನಿಷ್ಪತ್ತಿ)**

ಭಾಷಾ ವ್ಯಾಕರಣ ಇತ್ಯಾದಿಗಳ ಅರ್ಥವನ್ನು ಗ್ರಹಿಸುತ್ತಾನೆ. ಈ ಕೆಳಕಂಡ ಸಂದರ್ಭಗಳಲ್ಲಿ

ಅ) ತಾನು ವಿವಿಧ ಮೂಲಗಳಿಂದ ಕೇಳುವಾಗ. ಅಧ್ಯಾಪಕ, ರೇಡಿಯೋ ಇತ್ಯಾದಿ

ಆ) ಸಂಭಾಷಣೆಯಲ್ಲಿ ಪಾಲ್ಗೊಳ್ಳುವಾಗ

ಇ) ತಾನೇ ಗಟ್ಟಿಯಾಗಿ ಓದುವಾಗ

ಈ) ತಾನು ಮೌನವಾಗಿ ಓದುವಾಗ

ಮೇಲ್ಕಂಡ ಸಂದರ್ಭಗಳಲ್ಲಿ ಫಲಿಸುವ ಗ್ರಹಿಕೆಯನ್ನು ನಾವು ಮೇಲು ನೋಟದಿಂದ ಅಳೆಯಲು ಸಾಧ್ಯವಿಲ್ಲ. ಆದ್ದರಿಂದ ಮೇಲಿನ ಗ್ರಹಿಕೆಯ ಸಂದರ್ಭಗಳನ್ನು ಒದಗಿಸಿದ ಮೇಲೆ ಅಧ್ಯಾಪಕನು ಕಲಿಕೆಯ ಫಲವನ್ನು ಪರೀಕ್ಷಿಸಬೇಕಾಗುತ್ತದೆ. ಅದಕ್ಕೆ ಸಹಾಯವಾಗುವ ವಿದ್ಯಾರ್ಥಿಯ ವರ್ತನೆಗಳು ಹೀಗಿರುತ್ತವೆ.

೧ ಹೇಳುತ್ತಾನೆ

❖ ಪದ, ಪದಪುಂಜ, ವಾಕ್ಯಗಳ ಅರ್ಥವನ್ನು

❖ ಪಾಠ್ಯಾಂಶದ ಮುಖ್ಯ ತತ್ವವನ್ನು ತನ್ನ ಮಾತುಗಳಲ್ಲಿ, ಸಮಾನಾರ್ಥಕ, ವಿರುದ್ಧಾರ್ಥಕ ಪದಗಳನ್ನು

೨ ಕಥಿಸುತ್ತಾನೆ

❖ ಸಾರಾಂಶವನ್ನು

❖ ವಿಚಾರವನ್ನು, ಅನುಕ್ರಮವನ್ನು

❖ ಅಧ್ಯಾಪಕರು ಹೇಳಿದುದನ್ನು

೩ ಪ್ರಯೋಗಿಸುತ್ತಾನೆ

❖ ವ್ಯಾಕರಣಾಂಶವನ್ನು

❖ ಹೊಸ ಪದಗಳನ್ನು, ಗಾದೆಗಳನ್ನು, ಅಲಂಕಾರಗಳನ್ನು ಇತ್ಯಾದಿ

❖ ಅರ್ಥ ಕೋಶವನ್ನು ಬಳಸುತ್ತಾನೆ

೪ ವ್ಯಾಖ್ಯಾನ ಮಾಡುತ್ತಾನೆ

❖ ಕೇಳಿದ, ಓದಿದ ವಿಷಯ ಒಳಗೊಂಡ ವಿಚಾರಗಳನ್ನು

❖ ಪದ, ವಾಕ್ಯ, ನುಡಿಗಟ್ಟು, ಗಾದೆ ಮುಂತಾದವುಗಳನ್ನು, ಅರ್ಥವನ್ನು

❖ ವಿಚಾರಗಳ ವಾಸ್ತವಾಂಶಗಳ ಘಟನೆಗಳ ಅನುಕ್ರಮವನ್ನು

❖ ಲಿಪಿ ನಿಯಮವನ್ನು

೫ ತೋರಿಸುತ್ತಾನೆ

❖ ಜೀವ ಪದಗಳು, ಪದಗುಚ್ಚಗಳು

❖ ಮುಖ್ಯವಾದ ವಿವರಗಳು, ಭಾಷಾ ಪ್ರಯೋಗ, ನುಡಿಗಟ್ಟು ಇತ್ಯಾದಿಗಳನ್ನು

❖ ಪ್ರಸ್ತುತ ವಿಷಯಗಳ ಮೇಲಿನ ಪ್ರಶ್ನೆಗಳನ್ನು

೬ ಪತ್ತೆ ಹಚ್ಚುತ್ತಾನೆ

❖ ಕೇಂದ್ರ ವಿಚಾರವನ್ನು, ಹೊಸ ಪದಗಳನ್ನು, ಕ್ರಿಯಾ ಪದಗಳನ್ನು

❖ ಪ್ರಸ್ತುತ ವಿಷಯಗಳ ಮೇಲಿನ ಪ್ರಶ್ನೆಗಳನ್ನು
೭ ಕೆಳಗೆ ಗೆರೆ ಎಳೆಯುತ್ತಾನೆ
❖ ಹೊಸ ಪದಗಳ ಅಥವಾ ಪದಪುಂಜಗಳ
❖ ವ್ಯಾಕರಣಾಂಶಗಳ
೮ ತೀರ್ಮಾನಕ್ಕೆ ಬರುತ್ತಾನೆ
❖ ಕೊಟ್ಟಿರುವ ವಾಚಕ ಸಾಮಗ್ರಿಗಳನ್ನು ಓದಿ
೯ ವಿವರಿಸುತ್ತಾನೆ
❖ ಐತಿಹಾಸಿಕ, ಪೌರಾಣಿಕ , ಸಾಮಾಜಿಕ, ನೈತಿಕ ಅಂಶಗಳನ್ನು
❖ ವಾಚನ ಸಾಮಗ್ರಿಯ ರೂಪ ಮತ್ತು ಶೈಲಿಯನ್ನು
೧೦ ಲೇಖಕನ ವಿಚಾರಗಳನ್ನು ಸಂಗ್ರಹಿಸಿ ಬರೆಯುತ್ತಾನೆ, ಹೇಳುತ್ತಾನೆ
೧೧ ಆಯ್ಕೆ ಮಾಡುತ್ತಾನೆ
❖ ಸರಿಯಾದ ಪದಗಳನ್ನು, ವಾಕ್ಯಗಳನ್ನು, ಗಾದೆಗಳನ್ನು ಇತ್ಯಾದಿ
೧೨ ಸಂಬಂಧಗಳನ್ನು ಸ್ಥಾಪಿಸುತ್ತಾನೆ
❖ ಪದಗಳು, ವಿಚಾರಗಳು, ಅರ್ಥಗಳು, ಚಿತ್ರಗಳು, ಕ್ರಿಯೆಗಳು ಇತ್ಯಾದಿಗಳ ನಡುವೆ
❖ ಪದಗಳ ನಡುವೆ
೧೩ ಉದಾಹರಣೆಗಳನ್ನು ಕೊಡುತ್ತಾನೆ
❖ ನಾಮಪದ, ಗುಣವಾಚಕ ಇತ್ಯಾದಿಗಳಿಗೆ
❖ ವಿಚಾರಗಳು, ಘಟನೆಗಳು ಇತ್ಯಾದಿಗಳಿಗೆ
❖ ವಿವಿಧ ಭಾಷಾ ರೂಪ ಶೈಲಿಗಳಿಗೆ
೧೪ ವರ್ಗೀಕರಿಸುತ್ತಾನೆ
❖ ಅವ್ಯವಸ್ಥಿತವಾಗಿ ಕೊಟ್ಟಿರುವ ಪದಗಳನ್ನು, ನಾಮಪದ, ಕ್ರಿಯಾಪದ ಇತ್ಯಾದಿಗಳಾಗಿ
೧೫ ಸರಿಪಡಿಸುತ್ತಾನೆ
❖ ಕಾಗುಣಿತವನ್ನು
❖ ವ್ಯಾಕರಣದ ತಪ್ಪುಗಳನ್ನು
❖ ಗಾದೆ, ನುಡಿಗಟ್ಟುಗಳನ್ನು
೧೬ ಹೋಲಿಸುತ್ತಾನೆ
❖ ಚಿಂತನೆಯನ್ನು, ವಿಚಾರಗಳನ್ನು, ಘಟನೆಗಳನ್ನು
೧೭ ವಿಶ್ಲೇಷಿಸುತ್ತಾನೆ
❖ ವಾಕ್ಯ ರಚನೆಯನ್ನು

❖ ವಾಕ್ಯಾಂಗಗಳನ್ನು

❖ ಸಂಯುಕ್ತ ಪದಗಳನ್ನು

❖ ಸಮಸ್ತ ಪದಗಳನ್ನು

೧೮ ರಚಿಸುತ್ತಾನೆ

❖ ನಾಮಪದದಿಂದ ಕ್ರಿಯಾಪದ ಇತ್ಯಾದಿ

೧೯ ಕಂಡುಹಿಡಿಯುತ್ತಾನೆ

❖ ವಿವಿಧ ರೀತಿಯ ವಾಕ್ಯಗಳನ್ನು

❖ ಅಲಂಕಾರ ಇತ್ಯಾದಿ

೨೦ ಪರಿವರ್ತಿಸುತ್ತಾನೆ

❖ ಒಂದು ರೀತಿಯ ವಾಕ್ಯವನ್ನು ಇನ್ನೊಂದು ರೀತಿಗೆ

❖ ಪ್ರತ್ಯಯ, ಉಪಸರ್ಗಗಳ ಸಹಾಯದಿಂದ ಒಂದು ಜಾತಿಯ ಪದವನ್ನು ಇನ್ನೊಂದು ಜಾತಿಗೆ

೨೧ ಅರ್ಥೈಸುತ್ತಾನೆ

❖ ರೂಪ ಮತ್ತು ಶೈಲಿಯನ್ನು

೨೨ ತಪ್ಪುಗಳನ್ನು ಪತ್ತೆಹಚ್ಚುತ್ತಾನೆ

❖ ವಾಚಕ ಸಾಮಗ್ರಿಯ ಶೈಲಿ ಮತ್ತು ರೂಪಗಳಲ್ಲಿರುವ

೨೩ ತಪ್ಪುಗಳನ್ನು ತಿದ್ದುತ್ತಾನೆ

❖ ವಾಚಕ ಸಾಮಗ್ರಿಯ ಶೈಲಿ ಮತ್ತು ರೂಪಗಳಲ್ಲಿರುವ

**ಇ) ಮೌಖಿಕ ಅಭಿವ್ಯಕ್ತಿ (ವಿಚಾರಗಳು, ವಿವರಣೆಗಳು, ಸೂತ್ರಗಳು, ಲಯ, ಅಲಂಕಾರ, ನುಡಿಗಟ್ಟು ಇವುಗಳನ್ನು ಮಾತಿನ ಮೂಲಕ ಅಭಿವ್ಯಕ್ತಿಗೊಳಿಸುವ ಕೌಶಲ)**

**ನಿರ್ದಿಷ್ಟಗಳು**

೧. ಪುನರುಚ್ಚರಿಸುತ್ತಾನೆ

೨. ವಿವರಿಸುತ್ತಾನೆ

❖ ತಪ್ಪಿಲ್ಲದ ಭಾಷೆಯಲ್ಲಿ

❖ ಸರಿಯಾದ ವಿರಾಮಗಳೊಂದಿಗೆ

❖ ತಕ್ಕ ವೇಗದೊಂದಿಗೆ

❖ ಸಾಕಷ್ಟು ನಿರರ್ಗಳವಾಗಿ

❖ ಧ್ವನಿಯ ಸೂಕ್ತ ಏರಿಳಿತ ಮತ್ತು ಮುಖಭಾವ ಪ್ರದರ್ಶನದೊಂದಿಗೆ
❖ ತನ್ನದೇ ಆದ ಸ್ವಂತಿಕೆಯೊಡನೆ

೩ ತನ್ನ ವಿಚಾರಗಳನ್ನು ಜೋಡಿಸಿ ಹೇಳುತ್ತಾನೆ

❖ ತರ್ಕ ಬದ್ಧವಾಗಿ

❖ ತಕ್ಕ ಶೈಲಿ ಮತ್ತು ರೂಪದಲ್ಲಿ

❖ ತಕ್ಕ ಪದ , ವಾಕ್ಯ, ಸೂಕ್ತಿ, ಸೂತ್ರ, ಅಲಂಕಾರ ಇತ್ಯಾದಿಗಳನ್ನು ಬಳಸಿ

೪ ಅನುಕರಣೆ ಮಾಡುತ್ತಾನೆ

❖ ಉಚ್ಚಾರಣೆಯನ್ನು, ಧ್ವನಿ ವ್ಯತ್ಯಾಸವನ್ನು

❖ ಮಾದರಿ ವಾಕ್ಯಗಳನ್ನು

❖ ರೂಪ ಮತ್ತು ಶೈಲಿಯನ್ನು

೫ ಕಂಠಪಾಠ ಮಾಡಿ ಹೇಳುತ್ತಾನೆ

❖ ಹಾಡು ಮತ್ತು ಪದ್ಯಗಳನ್ನು ತಾಳ ಲಯಗಳೊಡನೆ

೬ ನಾಟಕವಾಗಿ ಅಭಿನಯಿಸುತ್ತಾನೆ

❖ ಭಾಷಣವನ್ನು

೭ ಮೌಖಿಕವಾಗಿ ವ್ಯಾಖ್ಯಾನ ಮಾಡುತ್ತಾನೆ

❖ ಕೊಟ್ಟ ಪದ್ಯ, ವಾಕ್ಯ ಇತ್ಯಾದಿಗಳ ಮೇಲೆ

## ಈ) ಲಿಖಿತ ಅಭಿವ್ಯಕ್ತಿ

ಮೌಖಿಕವಾಗಿ ಅಭಿವ್ಯಕ್ತಿ ಪಡಿಸುವಾಗ ನಡೆಸುವ ಎಲ್ಲಾ ಮಾನಸಿಕ, ಮನೋದೈಹಿಕ ಪ್ರಕ್ರಿಯೆಗಳ ಜೊತೆಗೆ ಅವುಗಳನ್ನು ಬರವಣಿಗೆಯ ಮೂಲಕ ಅಭಿವ್ಯಕ್ತಿಸುತ್ತಾನೆ.

**ನಿರ್ದಿಷ್ಟಗಳು**

೧ ಬರೆಯುತ್ತಾನೆ

❖ ತಪ್ಪಿಲ್ಲದ, ನುಡಿಗಟ್ಟಿನಿಂದ ಕೂಡಿದ ಭಾಷೆಯಲ್ಲಿ

❖ ಸೂಕ್ತಿಗಳು, ಸೂತ್ರಗಳು, ಅಲಂಕಾರಗಳನ್ನು ಬಳಸಿ

❖ ಸೂಕ್ತ ವೇಗದಲ್ಲಿ

❖ ಸೂಕ್ತ ವಿರಾಮ ಚಿಹ್ನೆಗಳೊಡನೆ

❖ ಸ್ಪಷ್ಟ ಅಕ್ಷರಗಳಲ್ಲಿ, ಚೊಕ್ಕವಾಗಿ

೨ ಪ್ರತಿ ಮಾಡುತ್ತಾನೆ

❖ ಪದ, ವಾಕ್ಯ, ವಾಕ್ಯಬೃಂಧಗಳನ್ನು ಸೂಕ್ತವಾದ ಲಿಪಿ ನಿಯಮಗಳನ್ನು ಅನುಸರಿಸಿ
೩ ಉಕ್ತಲೇಖನವನ್ನು ಬರೆಯುತ್ತಾನೆ
❖ ಸರಿಯಾದ ಕಾಗುಣಿತದೊಡನೆ
❖ ವಿರಾಮ ಚಿಹ್ನೆಗಳೊಡನೆ
❖ ಸರಿಯಾದ ಭಾಷೆಯಲ್ಲಿ, ಸ್ಪಷ್ಟವಾಗಿ
❖ ಚೊಕ್ಕವಾಗಿ
❖ ಪದಗಳ ಮಧ್ಯ ಸರಿಯಾದ ಜಾಗ ಬಿಟ್ಟು
❖ ಅಕ್ಷರಗಳ ಸೂಕ್ತ ಆಕಾರ ಮತ್ತು ಗಾತ್ರದೊಡನೆ
೪ ಪ್ರಯೋಗಿಸುತ್ತಾನೆ
❖ ವಿವಿಧ ರೀತಿಯ ವಾಕ್ಯಗಳನ್ನು
❖ ಸರಿಯಾದ ಪದಗಳನ್ನು, ಪದ ಪುಂಜಗಳನ್ನು
೫ ಜೋಡಿಸುತ್ತಾನೆ
❖ ತಾರ್ಕಿಕವಾಗಿ
❖ ತಕ್ಕ ನುಡಿಗಟ್ಟು
❖ ತಕ್ಕ ರೂಪ, ಶೈಲಿಗಳೊಂದಿಗೆ

**ಉ) ಆಸಕ್ತಿ**

ವಿದ್ಯಾರ್ಥಿಯು ಭಾಷಾ ವಿಷಯದಲ್ಲಿ ಆಸಕ್ತಿಯನ್ನು ಬೆಳೆಸಿಕೊಳ್ಳುತ್ತಾನೆ.

**ನಿರ್ದಿಷ್ಟಗಳು**

೧ ಓದುತ್ತಾನೆ
❖ ಪಠ್ಯವಲ್ಲದೆ ಬೇರೆ ಪುಸ್ತಕಗಳನ್ನು
❖ ವೃತ್ತ ಪತ್ರಿಕೆ, ವಾರ ಪತ್ರಿಕೆ ಇತ್ಯಾದಿ
೨ ಪದ್ಯಗಳನ್ನು ಹಾಡುತ್ತಾನೆ
೩ ಶಬ್ದ ಕೋಶಗಳನ್ನು, ಆಕರ ಗ್ರಂಥಗಳನ್ನು ಬಳಸುತ್ತಾನೆ
೪ ರೇಡಿಯೋ ಇತ್ಯಾದಿಗಳನ್ನು ಕೇಳುತ್ತಾನೆ
೫ ಸ್ವಂತ ಲೇಖನಗಳನ್ನು ಬರೆಯುತ್ತಾನೆ
೬ ಪಠ್ಯೇತರ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾನೆ
೭ ತನ್ನ ಸ್ವಂತ ಪುಸ್ತಕ ಭಂಡಾರವನ್ನು ಸ್ಥಾಪಿಸುತ್ತಾನೆ.

ಊ) ಆಸ್ವಾದನೆ ( ಮೆಚ್ಚುಗೆ– ಪ್ರಶಂಸೆ)

**ನಿರ್ದಿಷ್ಟಗಳು**

೧ ಮೆಚ್ಚಿ ಸುಖಿಸುತ್ತಾನೆ

❖ ಪದ್ಯಗಳ ಲಯ ವಿನ್ಯಾಸದಲ್ಲಿ

❖ ಪದ್ಯಗಳ ವಾಚನ ಗಾಯನದಲ್ಲಿ

❖ ಅಲಂಕಾರ, ಛಂದಸ್ಸುಗಳ ವೈವಿಧ್ಯದಲ್ಲಿ

೨ ತನ್ನ ಸಂತೋಷವನ್ನು ಹಂಚಿಕೊಳ್ಳುತ್ತಾನೆ

೩ ರೂಪಕಗಳನ್ನು, ಅಲಂಕಾರಗಳು, ಪ್ರತೀಕಗಳು, ಪದಚಿತ್ರಗಳನ್ನು ಗುರುತಿಸುತ್ತಾನೆ

೪ ಪದ್ಯಗಳನ್ನು ಹಾಡುವಲ್ಲಿ ಅಧ್ಯಾಪಕರ, ಜತೆಯವರೊಡನೆ ಸೇರುತ್ತಾನೆ.

೫ ತನ್ನ ಮೆಚ್ಚುಗೆಯನ್ನು ಅಭಿವ್ಯಕ್ತಗೊಳಿಸುತ್ತಾನೆ.

೬ ಗುಣಗಳನ್ನು, ಮೌಲ್ಯಗಳನ್ನು, ಪಾತ್ರ ಚಿತ್ರಣವನ್ನು ಮೆಚ್ಚುತ್ತಾನೆ”[೪].

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಶಿಕ್ಷಣ ಇಲಾಖೆಯು ವಿದ್ಯಾರ್ಥಿಗಳು ಕನ್ನಡ ಭಾಷೆಯ ಜಾಯಮಾನಗಳನ್ನೆಲ್ಲ ಬಲ್ಲವರೆಂಬ ಧೋರಣೆಯಿಂದ ಉದ್ದಿಷ್ಟಗಳನ್ನು ನಿರ್ದಿಷ್ಟಗಳನ್ನು ತಿಳಿಸಿದೆ. ಕಲ್ಪಿತ ವಿದ್ಯಾರ್ಥಿಗಳನ್ನು ಕೇಂದ್ರೀಕರಿಸಿಕೊಂಡು ರಚಿಸಿರುವ ಧೋರಣೆಯಿಂದಾಗಿ ತರಗತಿಯ ವಾಸ್ತವದ ವಿದ್ಯಾರ್ಥಿಗಳಲ್ಲಿ ನಿರೀಕ್ಷಿತ ಫಲಿತಾಂಶ ಕಂಡುಬರುತ್ತಿಲ್ಲ.

## ೩.೫ ಪ್ರೌಢಶಾಲೆಯ ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕಗಳು

**‘ಕನ್ನಡ ಕಸ್ತೂರಿ’** ಎಂಬ ಹೆಸರಿನಲ್ಲಿ ಎಂಟು, ಒಂಭತ್ತು ಮತ್ತು ಹತ್ತನೆಯ ತರಗತಿಯ ಪಠ್ಯಪುಸ್ತಕಗಳಿವೆ. ಹದಿನಾಲ್ಕರಿಂದ ಹದಿನಾರು ವರ್ಷದ ವಯೋಮಾನದ ವಿದ್ಯಾರ್ಥಿಗಳೊಂದಿಗೆ ಈ ಪಠ್ಯಗಳು ಸಂವಹನಿಸುತ್ತಿರುತ್ತವೆ. ಸಾವಿರದ ಐದುನೂರಕ್ಕೂ ಹೆಚ್ಚು ವರ್ಷಗಳ ಇತಿಹಾಸವುಳ್ಳ ಕನ್ನಡ ಭಾಷೆಯ ಸಾಹಿತ್ಯದ ಮುಖ್ಯ ವಿಚಾರಗಳನ್ನು ಪಠ್ಯಗಳಲ್ಲಿ ನೀಡಲಾಗಿದೆ. ಭಾಷಾಂಶಗಳು, ಭಾವಾಂಶಗಳು, ಸಾಹಿತ್ಯಾಂಶಗಳು, ಸಾಂಸ್ಕೃತಿಕಾಂಶಗಳನ್ನು ಪಠ್ಯಪುಸ್ತಕಗಳಲ್ಲಿ ಅಳವಡಿಸಿ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕರತಲದ ಆಮಲಕದಂತೆ ವಿದ್ಯಾರ್ಥಿಗಳಿಗೆ ತೋರಿಸುವ ಪ್ರಯತ್ನ ಮಾಡಲಾಗಿದೆ. ಕನ್ನಡ ಭಾಷೆಯ ಅವಸ್ಥಾಂತರಗಳನ್ನು, ಸಾಹಿತ್ಯದ ಸರ್ವ ಪ್ರಕಾರಗಳನ್ನು ಪರಿಚಯ ಮಾಡಿಕೊಡಲಾಗಿದೆ. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಮೇರು ಕವಿ–ಕೃತಿ–ಬರಹಗಳನ್ನು ಸಂಗ್ರಹಿಸಲಾಗಿದೆ. ವ್ಯಾಕರಣ, ಛಂದಸ್ಸು ಅಲಂಕಾರಗಳನ್ನು ತಲಸ್ಪರ್ಶಿಯಾಗಿ ನಮೂದಿಸಲಾಗಿದೆ. ಪ್ರತಿಯೊಂದು ಪಾಠ, ಪದ್ಯಗಳೂ ಒಂದೊಂದು ಬಗೆಯ ಆಶಯವನ್ನು ಹೊತ್ತಿವೆ. ಪ್ರತಿಪಾಠ–ಪದ್ಯಗಳ

ಕೊನೆಗೆ ಪಾಠ-ಪದ್ಯಗಳಿಗೆ ಪೂರಕವಾದ ಅನೇಕ ಭಾಷಾ ಚಟುವಟಿಕೆಗಳಿವೆ. ಇಷ್ಟೊಂದು ವಿಚಾರಗಳಿರುವ ಈ ಪಠ್ಯಪುಸ್ತಕವನ್ನು ಅಧ್ಯಯನ ಮಾಡುವ ಮಟ್ಟದ ಕೌಶಲಗಳು ವಿದ್ಯಾರ್ಥಿಗಳಲ್ಲಿ ಇದೆಯೇ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಎಂಟು, ಒಂಭತ್ತು, ಹತ್ತನೇ ತರಗತಿಯ ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕಗಳಲ್ಲಿನ ಸಮಗ್ರ ವಿಚಾರಗಳನ್ನು ವಿಷಯ – ವಿಚಾರಗಳಿಗನುಗುಣವಾಗಿ ಈ ಕೆಳಕಂಡಂತೆ ವಿಭಾಗಿಸಿದೆ.

### ೩.೫.೧ ಸಾಹಿತ್ಯದ ಪ್ರಕಾರಗಳು:

ಆದಿಕವಿ ಪಂಪನಿಂದ ರಚಿತವಾದ ಸಾಹಿತ್ಯ ಪ್ರಕಾರದಿಂದ ಮೊದಲ್ಗೊಂಡು ಇಂದಿನ ಹೊಸಗನ್ನಡ ಸಾಹಿತ್ಯದವರೆಗಿನ ಎಲ್ಲ ಪ್ರಕಾರಗಳನ್ನು ಪಠ್ಯಪುಸ್ತಕದಲ್ಲಿ ಪರಿಚಯಿಸಲಾಗಿದೆ. ಗದ್ಯದಲ್ಲಿ ಕಥೆ, ವ್ಯಕ್ತಿಚಿತ್ರ, ವಿಮರ್ಶೆ, ಅನುಭವ ಕಥನ, ಪ್ರವಾಸ ಕಥನ, ಜೀವನ ಚರಿತ್ರೆ, ಲಲಿತ ಪ್ರಬಂಧ ಇತ್ಯಾದಿ ಪ್ರಕಾರಗಳಿವೆ. ಶಾಸನದ ಗದ್ಯಗಳನ್ನೂ ಪರಿಚಯಿಸಲಾಗಿದೆ. ಇನ್ನು ಪದ್ಯದಲ್ಲಿ ನವೋದಯ, ನವ್ಯ ಕವನಗಳಾದಿಯಾಗಿ ಜನಪದ, ಕೀರ್ತನೆ, ವಚನ, ಸಾಂಗತ್ಯ, ಕಂದ, ರಗಳೆ, ಷಟ್ಪದಿ, ವೃತ್ತ ಪ್ರಕಾರದ ಪದ್ಯಗಳನ್ನು ಪಠ್ಯ ಪುಸ್ತಕಗಳಲ್ಲಿ ಸೇರಿಸಲಾಗಿದೆ.

### ೩.೫.೨ ಹೊಸ ಪದಗಳು:

| | |
|---|---|
| ೮ನೇ ತರಗತಿಯಲ್ಲಿನ ಶಬ್ದಾರ್ಥಗಳು | ೩೬೦ |
| ೯ನೇ ತರಗತಿಯಲ್ಲಿನ ಶಬ್ದಾರ್ಥಗಳು | ೩೩೨ |
| ೧೦ನೇ ತರಗತಿಯಲ್ಲಿನ ಶಬ್ದಾರ್ಥಗಳು | ೬೭೩ |
| **ಒಟ್ಟು** | ೧೩೬೫ |

- **ಅರ್ಥಸಹಿತ ಪದಕೋಶಿಯಲ್ಲಿ**

| | |
|---|---|
| ೮ನೇ ತರಗತಿಯಲ್ಲಿನ ಪದಗಳು | ೫೦೧ |
| ೯ನೇ ತರಗತಿಯಲ್ಲಿನ ಪದಗಳು | ೨೪೨ |
| ೧೦ನೇ ತರಗತಿಯಲ್ಲಿನ ಪದಗಳು | ೧೭೧ |
| **ಒಟ್ಟು** | ೯೧೪ |

ಪದಗಳನ್ನು ಅಕಾರಾದಿಯಲ್ಲಿ ಜೋಡಿಸಿ ಶಬ್ದಕೋಶವನ್ನು ಹೇಗೆ ರಚಿಸಬೇಕೆಂಬುದರ ಕಲ್ಪನೆಯ ಕುರಿತು ವಿದ್ಯಾರ್ಥಿಗಳಿಗೆ ಮಾದರಿಯನ್ನು ನೀಡಲಾಗಿದೆ.

**೩.೫.೩ ಲೇಖಕ – ಕವಿ – ಕೃತಿಗಳು**

ಕನ್ನಡ ಪಠ್ಯ ಪುಸ್ತಕದ ಮೂಲಕ ಪ್ರೌಢಶಾಲಾ ವಿದ್ಯಾರ್ಥಿಗಳು ಅರವತ್ತಾರು ಕವಿ, ಕೃತಿಗಳನ್ನು ಅಭ್ಯಾಸ ಮಾಡಬೇಕಿದೆ. ಪ್ರತಿಯೊಂದು ಪಾಠ ಬರೆದ ಲೇಖಕ ಹಾಗೂ ಪ್ರತಿಯೊಂದು ಪದ್ಯವನ್ನು ಬರೆದ ಕವಿಯ ಕಾವ್ಯನಾಮ, ಕಾಲ, ವಿವಿಧ ಕೃತಿಗಳು, ಸಂದ ಪ್ರಶಸ್ತಿ-ಪುರಸ್ಕಾರಗಳು ಇತ್ಯಾದಿ ವಿಚಾರಗಳ ವಿವರಗಳಿವೆ. ಕನ್ನಡ ಸಾಹಿತ್ಯ ಚರಿತ್ರೆಯ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಹಾಗೂ ಹೊಸಗನ್ನಡ ಕಾಲಘಟ್ಟದ ಕವಿ-ಕೃತಿಗಳನ್ನು ಪ್ರೌಢಶಾಲಾ ವಿದ್ಯಾರ್ಥಿಗಳು ಅಧ್ಯಯನ ಮಾಡಬೇಕಿದೆ.

**೮ನೇ ತರಗತಿಯಲ್ಲಿ**

೧. ಗೊರೂರು ರಾಮಸ್ವಾಮಿ ಅಯ್ಯಂಗಾರ್
೨. ಚಂದ್ರಶೇಖರ ಕಂಬಾರ
೩. ಅಮರೇಶ ನುಗಡೋಣಿ
೪. ಕುವೆಂಪು
೫. ಸಿಂಪಿ ಲಿಂಗಣ್ಣ
೬. ಎಂ.ಚಿದಾನಂದ ಮೂರ್ತಿ
೭. ದ.ರಾ.ಬೇಂದ್ರೆ
೮. ಮಲ್ಲಿಕಾರ್ಜುನ ಮನಸೂರ
೯. ಆ.ನ.ಯಲ್ಲಪ್ಪರೆಡ್ಡಿ
೧೦ ಸತೀಶ್ ಚಪ್ಪರಿಕೆ
೧೧. ರಂಜಾನ್ ದರ್ಗಾ
೧೨. ತ.ಸು.ಶಾಮರಾಯರು
೧೩. ಡಿ.ವಿ.ಜಿ
೧೪.ಕೆ.ಪಿ.ಪೂರ್ಣಚಂದ್ರ ತೇಜಸ್ವಿ
೧೫. ವೈದೇಹಿ
೧೬.ಮಾಸ್ತಿ
೧೭. ಜಿ.ಎಸ್.ಶಿವರುದ್ರಪ್ಪ
೧೮.ಮೂಡ್ನಾಕೂಡು ಚಿನ್ನಸ್ವಾಮಿ
೧೯. ಕೆ.ಶಿವರಾಮಕಾರಂತ
೨೦. ಕನಕದಾಸರು
೨೧. ಚಾಮರಸ
೨೨. ಲಕ್ಷ್ಮೀಶ
೨೩. ಬಸವಣ್ಣ
೨೪. ರತ್ನಾಕರವರ್ಣಿ

**೯ನೇ ತರಗತಿ**

೧. ಸ.ಜ.ನಾಗಲೋಟಿ ಮಠ
೨. ಕುವೆಂಪು
೩. ಆರ್.ಸಿ.ಹಿರೇಮಠ
೪. ನಾಗೇಶ್ ಹೆಗಡೆ
೫. ಗೊ.ರೂ.ಚನ್ನಬಸಪ್ಪ
೧೨. ಚಂದ್ರಶೇಖರ ತಾಳ್ಯ
೧೩. ಬಿ.ಎ.ಸನದಿ
೧೪. ಕೆ.ಷರೀಫಾ
೧೫. ಕೆ.ಎಸ್.ನರಸಿಂಹಸ್ವಾಮಿ
೧೬. ಪುರಂದರದಾಸರು

೬. ಪಿ.ಆರ್.ತಿಪ್ಪೇಸ್ವಾಮಿ

೭. ನೇಮಿಚಂದ್ರ

೮. ಕೆ.ಭೈರಪ್ಪ

೯. ಜಿ.ಪಿ.ಬಸವರಾಜು

೧೦. ಮುದ್ದಣ

೧೧. ಶಿವಕೋಟ್ಯಾಚಾರ್ಯ

೧೭.ಕೈವಾರಯೋಗಿನಾರಾಯಣಪ್ಪ

೧೮. ಸು.ರಂ.ಎಕ್ಕುಂಡಿ

೧೯.ಡಾ.ಬಿ.ಸಿ.ರಾಮಚಂದ್ರಶರ್ಮ

೨೦. ಅಲ್ಲಮಪ್ರಭು

೨೧. ರಾಘವಾಂಕ

೨೨. ಪಂಪ

**೧೦ನೇ ತರಗತಿಯಲ್ಲಿ**

೧. ಎಂ.ಮರಿಯಪ್ಪ ಭಟ್ಟ

೨. ಎಂ.ಎಸ್.ಸುಂಕಾಪುರ

೩. ಪ್ರಭುಶಂಕರ

೪. ಹೆಚ್.ಜೆ.ಲಕ್ಕಪ್ಪಗೌಡ

೫. ಎಂ.ಆರ್.ಶ್ರೀನಿವಾಸಮೂರ್ತಿ

೬. ಕಡಿದಾಳ್ ಮಂಜಪ್ಪ

೭. ಸ್ವಾಮಿ ಜಗದಾತ್ಮಾನಂದ

೮. ಹೆಚ್.ಕೆ.ಬಾಲಸೂರಿ

೯. ಕೆಂಪುನಾರಾಯಣ

೧೦. ದುರ್ಗಸಿಂಹ

೧೧. ಸೇಡಿಯಾಪು ಕೃಷ್ಣ ಭಟ್ಟ

೧೨.ಪುಲಿಗೆರೆಯ ಸೋಮನಾಥ

೧೩. ಡಿ.ವಿ.ಜಿ.

೧೪. ಅರವಿಂದ ಮಾಲಗತ್ತಿ

೧೫. ಕನಕದಾಸರು

೧೬. ಗೋಪಾಲದಾಸರು

೧೭. ಕುಮಾರವ್ಯಾಸ

೧೮. ಷಡಕ್ಷರದೇವ

೧೯. ಅಕ್ಕಮಹಾದೇವಿ

೨೦. ಮುಕ್ತಾಯಕ್ಕ

೨೧. ರನ್ನ

೨೨. ನೃಪತುಂಗ

೨೩. ಪಂಪ

### ೩.೫.೪ ಚಟುವಟಿಕೆಗಳು

**೮ನೇ ತರಗತಿ**

- ಕನ್ನಡದಲ್ಲಿರುವ ಗಾಂಧೀಜಿಯವರ ಆತ್ಮಕಥೆಯನ್ನು ಓದಿರಿ.
- ಗಾಂಧೀಜಿ ವಿಚಾರಧಾರೆಯನ್ನು ಕುರಿತಂತೆ ಪುಸ್ತಕಗಳನ್ನು ಸಂಗ್ರಹಿಸಿ ಓದಿರಿ
- 'ಹಿಂದೂಸ್ಥಾನಕ್ಕೆ ಹಿಂದಿರುಗಿದುದು' ಗದ್ಯವನ್ನು ನಾಟಕ ರೂಪಕ್ಕೆ ಪರಿವರ್ತಿಸಿ ಸಮಾರಂಭಗಳಲ್ಲಿ ಪ್ರದರ್ಶಿಸಲು ಪ್ರಯತ್ನಿಸಿ.

- ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿ, ಇತಿಹಾಸ ಇವುಗಳ ಮೇಲಿನ ಅಭಿಮಾನ ವ್ಯಕ್ತಪಡಿಸುವ ಕವಿತೆ ರಚಿಸುವ ಪ್ರಯತ್ನ ಮಾಡಿರಿ.
- ದ.ರಾ.ಬೇಂದ್ರೆ, ಚಂದ್ರಶೇಖರ ಕಂಬಾರರ ಕವನಗಳನ್ನು ಓದಿ, ಹಾಡಿ, ಅಭಿನಯಿಸಿ. ಕುವೆಂಪು, ಚೆನ್ನವೀರ ಕಣವಿ, ಹುಯಿಲಗೋಳ ನಾರಾಯಣರಾಯರು ರಚಿಸಿರುವ ಕನ್ನಡ ನಾಡಿನ ಕುರಿತಾದ ಕವಿತೆಗಳನ್ನು ಓದಿರಿ, ಹಾಡಿರಿ.
- ಜೇನುಗೂಡುಗಳನ್ನು ಗಮನಿಸಿ, ಜೇನುತುಪ್ಪದ ಪ್ರಯೋಜನವನ್ನು ತಿಳಿಯಿರಿ. ಗ್ರಾಮೀಣ ಜೀವನವನ್ನು ಚಿತ್ರಿಸುವ ಸಣ್ಣ ಕಥೆಗಳನ್ನು ಓದಿರಿ.
- ಕುವೆಂಪುರವರ ಪ್ರಕೃತಿಗೀತೆಗಳನ್ನು ಸಂಗ್ರಹಿಸಿ ಶಾಲಾ ಸಮಾರಂಭಗಳಲ್ಲಿ ಹಾಡಿರಿ.
- ಪ್ರಕೃತಿ–ಮಾನವರ ವಿವಿಧ ಮುಖಗಳನ್ನು ಚಿತ್ರಿಸಿದ ಕವನಗಳು 'ಪಕ್ಷಿಕಾಶಿ' ಕವನ ಸಂಕಲನದಲ್ಲಿವೆ, ಅವುಗಳನ್ನು ಗುರುತಿಸಿ.
- ಪರಿಸರವಾದಿ ಚಿಂತನೆಯ ಹಿನ್ನಲೆಯಲ್ಲಿ 'ದೇವರು ರುಜುಮಾಡಿದನು' ಕವನದ ವೈಶಿಷ್ಟ್ಯವನ್ನು ಮನನ ಮಾಡಿ.
- 'ಸ್ವರ್ಗದೋಲೆಗಳು' ಪುಸ್ತಕದಲ್ಲಿನ ಇತರ ಪತ್ರಗಳನ್ನು ಓದಿ, ಕನ್ನಡ ನಾಡಿನ ಮತ್ತೊಬ್ಬ ಕವಿಯ ಸಂದೇಶವನ್ನು ಒಳಗೊಂಡಂತೆ ನೀವೂ ಒಂದು ಸ್ವರ್ಗದೋಲೆಯನ್ನು ಬರೆಯಿರಿ.
- ಸರ್ವಜ್ಞನ ವಚನಗಳನ್ನು ಸಂಗ್ರಹಿಸಿ ಅರ್ಥ ತಿಳಿಯಿರಿ.
- ಇನ್ನಷ್ಟು ಜನಪದ ತ್ರಿಪದಿಗಳನ್ನು ಓದಿ
- ನಿಮ್ಮ ಊರಿನಲ್ಲಿರುವ ದೇವಾಲಯಗಳಲ್ಲಿನ ಚಿತ್ರಕಲೆ, ಶಿಲ್ಪಕಲೆಗಳನ್ನು ಗಮನಿಸಿ ಅವುಗಳ ಬಗ್ಗೆ ಕೇಳಿ ತಿಳಿಯಿರಿ.
- ಹಳೇಬೀಡು, ಬೇಲೂರು, ಐಹೊಳೆ, ಬಾದಾಮಿ, ಪಟ್ಟದಕಲ್ಲು ಈ ಸ್ಥಳಗಳನ್ನು ಸಂದರ್ಶಿಸಿ.
- ಆಲೂರು ವೆಂಕಟರಾಯರ 'ಕರ್ನಾಟಕ ಗತ ವೈಭವ' ಚಿದಾನಂದ ಮೂರ್ತಿಯವರ 'ಕರ್ನಾಟಕ ಸಂಸ್ಕೃತಿ' ಕೃತಿಗಳನ್ನು ಓದಿ ಹೆಚ್ಚು ವಿಷಯಗಳನ್ನು ತಿಳಿಯಿರಿ.
- 'ನಮ್ಮ ಮೆಚ್ಚಿನ ಕರ್ನಾಟಕ' ಎಂಬ ವಿಷಯ ಕುರಿತು ಪ್ರಬಂಧ ಬರೆಯಿರಿ.
- ಅಲ್ಲಮನ ಜೀವನ ವಿವರ ತಿಳಿಯಿರಿ. ಅಲ್ಲಮನ ವಚನಗಳನ್ನು ಓದಿ.
- ಸಾಧ್ಯವಾದರೆ ಬನವಾಸಿಯ ಮಧುಕೇಶ್ವರ ದೇವಾಲಯ ಸಂದರ್ಶಿಸಿ
- ಮಲ್ಲಿಕಾರ್ಜುನ ಮನಸೂರರ ಧ್ವನಿ ಮುದ್ರಿಕೆಗಳನ್ನು ಕೇಳಿರಿ.
- ರಾಜ್ಯದ ಪ್ರಮುಖ ಸಂಗೀತಗಾರರ ಹೆಸರುಗಳನ್ನು, ಭಾವಚಿತ್ರಗಳನ್ನು ಸಂಗ್ರಹಿಸಿ.

- ಕಲಾವಿದರ ಆತ್ಮ ಚರಿತ್ರೆಗಳನ್ನು ಓದಿರಿ.
- 'ಕುರುಡು ಕಾಂಚಾಣ' ಪದ್ಯವನ್ನು ಹಾಡಿಕೊಂಡು ಅಭಿನಯಿಸಿ.
- ಪರಿಸರ ಕಾಳಜಿ ಮತ್ತು ಸಂವರ್ಧನೆಯ ಕುರಿತು ಪ್ರಬಂಧ ಬರೆಯಿರಿ.
- ಚಿಪ್ಕೋ-ಅಪ್ಪಿಕೋ ಚಳುವಳಿಗಳ ಬಗ್ಗೆ ತಿಳಿಯಿರಿ.
- 'ಹಸಿರು ಹಾದಿ', 'ಇರುವುದೊಂದೇ ಭೂಮಿ', 'ವನಸಿರಿ' ಪುಸ್ತಕಗಳನ್ನು ಓದಿರಿ.
- ನಿಮ್ಮ ಪರಿಸರದಲ್ಲಿರುವ ವಿವಿಧ ಗಿಡ, ಮರ, ಪಕ್ಷಿಗಳ ಪಟ್ಟಿಮಾಡಿ.
- ಇಕೋಕ್ಲಬ್, ರಸಪ್ರಶ್ನೆ, ಆಶುಭಾಷಣ, ತೋಟಗಾರಿಕೆ ಇಲಾಖೆಗೆ ಭೇಟಿ, ನೆಡುತೋಪುಗಳ ಸಂದರ್ಶನ, ವನಮಹೋತ್ಸವ-ಮೊದಲಾದ ಪರಿಸರ ಸಂಬಂಧೀ ಚಟುವಟಿಕೆ ನಡೆಸಿ.
- ರಂಜಾನ್ ದರ್ಗಾದವರು ಬರೆದಿರುವ 'ನೆಲ್ಸನ್ ಮಂಡೇಲಾ' ಕೃತಿ ಓದಿ, ಮಂಡೇಲಾರವರ ಬಗ್ಗೆ ಬರೆದಿರುವ ಇತರ ಪುಸ್ತಕ ಲೇಖನಗಳನ್ನು ಓದಿ.
- ಭಾರತೀಯ ಸ್ವಾತಂತ್ರ ಹೋರಾಟಗಾರರ ಜೀವನ ಚರಿತ್ರೆಗಳನ್ನು ಓದಿ ತಿಳಿಯಿರಿ.
- 'ವಿಶ್ವಮಾನವ' ವಿಷಯದ ಕುರಿತು ಪ್ರಬಂಧ ಬರೆಯಿರಿ.
- ಅಬ್ರಹಾಂ ಲಿಂಕನ್, ಮಾರ್ಟಿನ್ ಲೂಥರ್ ಕಿಂಗ್ ಅವರುಗಳ ವಿಚಾರ ತಿಳಿಯಿರಿ.
- 'ಉತ್ತರನ ಪೌರುಷ'ವನ್ನು ಸಂಭಾಷಣಾ ರೂಪದಲ್ಲಿ ಬರೆದು ಅಭಿನಯಿಸಿರಿ.
- ತ.ಸು.ಶಾಮರಾಯರ 'ಕಥಾಭಾರತ', ಎ.ಆರ್.ಕೃಷ್ಣಶಾಸ್ತ್ರಿಗಳ 'ವಚನಭಾರತ' 'ನಿರ್ಮಲಭಾರತಿ' ಪುಸ್ತಕಗಳನ್ನು ಓದಿರಿ.
- 'ಕರುಣಾಳು ರಾಘವನಲ್ಲಿ ತಪ್ಪಿಲ್ಲ' ಭಾಗದ ಲಕ್ಷ್ಮಣ ಮತ್ತು ಸೀತೆಯರ ನಡುವೆ ನಡೆದ ಸಂಭಾಷಣೆಯನ್ನು ಸಂಗ್ರಹಿಸಿ, ಸೀತೆಯ ಮಾತುಗಳಲ್ಲಿನ ವ್ಯಂಗ್ಯ ಮತ್ತು ಪ್ರತಿಭಟನೆಯ ಅಂಶಗಳನ್ನು ಗುರುತಿಸಿ.
- ರಾಜಧರ್ಮವನ್ನು ಮೆರೆಸಲು ರಾಮನು ಕೌಟುಂಬಿಕ ಧರ್ಮವನ್ನು ಕಡೆಗಣಿಸಿದನೆ? ಪರಿಶೀಲಿಸಿ
- ಪರಿಸರವಾದದ ದೃಷ್ಟಿಯಿಂದ 'ಕರುಣಾಳು ರಾಘವನಲ್ಲಿ ತಪ್ಪಿಲ್ಲ' ಭಾಗದಲ್ಲಿ ಕೊನೆಯ ಪದ್ಯವನ್ನು ಪರಿಶೀಲಿಸಿ
- ಡಿ.ವಿ.ಜಿ. ಅವರ 'ಜ್ಞಾಪಕ ಚಿತ್ರಶಾಲೆಯ-ಮೈಸೂರು ದಿವಾನರುಗಳು' ಪುಸ್ತಕವನ್ನು ಓದಿ
- ನೀವು ಕಂಡ ಮಾನವೀಯತೆಯ ಒಂದು ಪ್ರಸಂಗವನ್ನು ಲೇಖನ ರೂಪದಲ್ಲಿ ಬರೆಯಿರಿ.

- ವಚನಗಳ ಧ್ವನಿ ಸುರುಳಿಯನ್ನು ಆಲಿಸಿ, ರಾಗವಾಗಿ ಹಾಡಲು ಕಲಿಯಿರಿ.
- ತೇಜಸ್ವಿಯವರ ಕನ್ನಡ ನಾಡಿನ ಹಕ್ಕಿಗಳು ಭಾಗ-೧, ಭಾಗ-೨ ಓದಿರಿ.
- 'ಪಕ್ಷಿ ವೀಕ್ಷಕರ ಸಂಘ'ವನ್ನು ಸ್ಥಾಪಿಸಿಕೊಂಡು ಹಕ್ಕಿಗಳನ್ನು ವೀಕ್ಷಿಸಿ.
- ರಂಗನತಿಟ್ಟು, ಕೊಕ್ಕರೆ ಬೆಳ್ಳೂರು, ಮಂಡಗದ್ದೆ, ಗುಡವಿ ಪಕ್ಷಿಧಾಮಗಳಿಗೆ ಭೇಟಿ ಮಾಡಿ.
- ಪಕ್ಷಿಗಳ ಚಲನವಲನಗಳನ್ನು ಗಮನಿಸುವ ಹವ್ಯಾಸ ಬೆಳೆಸಿಕೊಳ್ಳಿ
- 'ಟಾಲ್‌ಸ್ಟಾಯ್ ಮಹರ್ಷಿಯ ಭೂರ್ಜ ವೃಕ್ಷಗಳು' ಕಥೆಯನ್ನು ನಾಟಕವಾಗಿ ರೂಪಾಂತರಿಸಿ
- ಮಾಸ್ತಿಯವರು ಬರೆದ ಇತರ ಕಥೆಗಳನ್ನು ಓದಿರಿ.
- 'ಹೃದಯ ತಂಪಾಯ್ತು' ಭಾಗವನ್ನು ನಿಮ್ಮ ಮಾತಿನಲ್ಲಿ ಬರೆಯಿರಿ.
- ನಿಮ್ಮ ಪ್ರವಾಸದ ಅನುಭವಗಳನ್ನು ಕುರಿತು ಪ್ರಬಂಧ ಬರೆಯಿರಿ.
- ಶಿವರಾಮಕಾರಂತರ "ಅಬೂವಿನಿಂದ ಬರಾಮಕ್ಕೆ" "ಅಪೂರ್ವ ಪಶ್ಚಿಮ", ವಿ.ಸೀ.ಯವರ "ಪಂಪಾಯಾತ್ರೆ" ಪ್ರಭುಶಂಕರರ "ಅಮೇರಿಕದಲ್ಲಿ ನಾನು ಮತ್ತು ಶಾಂತಿ" ಪ್ರವಾಸ ಕಥನಗಳನ್ನು ಓದಿರಿ.
- ದೀಪಾವಳಿ, ಕಾರ್ತೀಕ ಮಾಸದ ದೀಪೋತ್ಸವವನ್ನು ಕುರಿತು ಚಿಕ್ಕ ಪ್ರಬಂಧ ಬರೆಯಿರಿ.
- ಪರಿಸರ ಪ್ರಜ್ಞೆಯ ದೃಷ್ಟಿಯಿಂದ 'ನಾನೊಂದು ಮರವಾಗಿದ್ದರೆ' ಕವನದ ಸೊಬಗನ್ನು ಗಮನಿಸಿ.
- ದಲಿತ ಸಂವೇದನೆಗಳನ್ನೊಳಗೊಂಡ ಇತರ ಕವಿಗಳ ಪದ್ಯಗಳನ್ನು ಓದಿರಿ.
- ನಿಮ್ಮ ಪ್ರದೇಶದ ಪ್ರಾದೇಶಿಕ ಕ್ರೀಡೆ, ಆಟಗಳ ಬಗ್ಗೆ ಕೇಳಿ, ತಿಳಿದು ಅವುಗಳ ಕುರಿತು ಪುಟ್ಟ ಪ್ರಬಂಧ ಬರೆಯಿರಿ.
- ಕನಕದಾಸರ ಕೀರ್ತನೆಗಳ ಸಂಗ್ರಹವನ್ನು ಓದಿರಿ. ಧ್ವನಿ ಸುರುಳಿಗಳನ್ನು ಆಲಿಸಿ. ಹಿರಣ್ಯಾಕ್ಷವಧೆಯನ್ನು ನಾಟಕರೂಪವಾಗಿ ಪ್ರಯೋಗಿಸಿ. ಕನಕದಾಸರ ರಾಮಧಾನ್ಯ ಚರಿತೆಯನ್ನು ಕೇಳಿ ತಿಳಿಯಿರಿ.

### ೯ನೇ ತರಗತಿ

- ಡಾ॥ನಾಗಲೋಟಿ ಮಠರ "ಕಳವು ಕಲಿಸಿದ ದೇವರು" ಪುಸ್ತಕವನ್ನು ಓದಿರಿ.
- 'ಪರಿವರ್ತನೆ' ಪಾಠವನ್ನು ನಾಟಕ ಮಾಡಿ ಅಭಿನಯಿಸಿರಿ.

- ‘ತಾಟಕಾ ಸಂಹರಣ’ ಕಥಾಭಾಗದಲ್ಲಿ ಬರುವ ವ್ಯಕ್ತಿಗಳ ಹೆಸರುಗಳನ್ನು ಸಂಗ್ರಹಿಸಿರಿ.
- ಇದರ ಆಕರ ಗ್ರಂಥವಾದ ‘ಜನಪ್ರಿಯ ವಾಲ್ಮೀಕಿ ರಾಮಾಯಣ’ವನ್ನು ಓದಿರಿ.
- ಕನ್ನಡದಲ್ಲಿ ಬಂದಿರುವ ಇತರ ರಾಮಾಯಣ ಗ್ರಂಥಗಳನ್ನು ಗಮನಿಸಿ.
- ‘ತಾಟಕಾ ಸಂಹರಣ’ ಪ್ರಸಂಗವನ್ನು ನಾಟಕ ರೂಪಕ್ಕೆ ಪರಿವರ್ತಿಸಿ ಅಭಿನಯಿಸಿರಿ.
- ಜಾ.ಫ.ಕಿಟಲ್ ಅವರನ್ನು ಕುರಿತು ಒಂದು ಲೇಖನ ಬರೆಯಿರಿ.
- ಕನ್ನಡ ಸಾಹಿತ್ಯಕ್ಕೆ ಕೊಡುಗೆ ನೀಡಿದ ವಿದೇಶಿ ಮಹನೀಯರ ಹೆಸರುಗಳನ್ನು ಸಂಗ್ರಹಿಸಿರಿ
- ಆರ್.ಸಿ.ಹಿರೇಮಠರು ಸಂಪಾದಿಸಿದ ‘ ಕನ್ನಡಕ್ಕೆ ಕಿಟೆಲ್ಲರ ಕೊಡುಗೆ’ ಎಂಬ ಗ್ರಂಥವನ್ನು ಓದಿರಿ
- ‘ಪ್ರತಿದಿನ ಪರಿಸರ ದಿನ’ ಪಾಠದಲ್ಲಿ ಸೂಚಿಸಿರುವ ಪರಿಸರ ಸಂಬಂಧಿತ ಚಟುವಟಿಕೆಗಳನ್ನು ಉಪಾಧ್ಯಾಯರ ನೆರವಿನಿಂದ ಮಾಡಿರಿ.
- ತ್ಯಾಜ್ಯ ವಸ್ತುಗಳನ್ನು ಕೂಡಿಹಾಕಿ ಅವುಗಳಿಂದ ಕಲಾಕೃತಿಯನ್ನು ರೂಪಿಸಿ.
- ಪ್ಲಾಸ್ಟಿಕ್ ವಸ್ತುಗಳ ಬಳಕೆಯ ದುಷ್ಪರಿಣಾಮ ಕುರಿತು ಶಿಕ್ಷಕರಿಂದ ತಿಳಿಯಿರಿ ಮತ್ತು ಅವುಗಳನ್ನು ಬಳಸದಂತೆ ನಿಗಾವಹಿಸಿ.
- ನಿಮ್ಮ ಸಮೀಪದಲ್ಲಿ ನಡೆಯುವ ದೊಡ್ಡಾಟವನ್ನು ನೋಡಲು ಹೋಗಿರಿ.
- ಯಾವುದಾದರೊಂದು ದೊಡ್ಡಾಟದ ಪ್ರಸಂಗವನ್ನು ಮಾಡಿ ಪ್ರದರ್ಶಿಸಿರಿ.
- ನೀವು ಸಂದರ್ಶಿಸಿದ ಐತಿಹಾಸಿಕ ನಗರವನ್ನು ಕುರಿತು ಒಂದು ಪ್ರಬಂಧ ಬರೆಯಿರಿ.
- ಬಾಲ್ಯ ವಿವಾಹಗಳಿಂದ ಆಗುವ ದುಷ್ಪರಿಣಾಮಗಳನ್ನು ಕುರಿತು ಚರ್ಚಿಸಿ.
- ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶೌಚಾಲಯಗಳಿಲ್ಲದ ನಿಮ್ಮ ಊರಿನ ಶಾಲೆಗಳ ಸ್ಥಿತಿಯನ್ನು ಮೇಲಿನ ಅಧಿಕಾರಿಗಳಿಗೆ ಅರ್ಜಿ ಬರೆದು ತಿಳಿಸಿ.
- ಜನವರಿ ೨೩ನೇ ತಾರೀಖು ಸುಭಾಸರ ಜನ್ಮ ದಿನವನ್ನು “ದೇಶ ಪ್ರೇಮ ದಿನ”ವೆಂದು ಆಚರಿಸಿರಿ.
- ಸುಭಾಸಚಂದ್ರ ಬೋಸರ ಜಯಂತಿಯಂದು ಬೋಸರ ಕುರಿತು ಚರ್ಚಾಗೋಷ್ಠಿ ಏರ್ಪಡಿಸಿ.
- ಈ ಪಾಠವನ್ನು ಆಧರಿಸಿ ಸುಭಾಸರ ಬಗ್ಗೆ ಒಂದು ಕಿರುನಾಟಕ ಆಡಿರಿ.
- ಬೇರೆ ಬೇರೆ ಭೂಕಂಪಗಳ ಬಗ್ಗೆ ಮಾಹಿತಿ ಸಂಗ್ರಹಿಸಿರಿ.
- ಗುಜರಾತ್‌ನ ಭುಜ್‌ನಲ್ಲಿ ಆದ ಭೂಕಂಪದ ವಿವರಗಳನ್ನು ತಿಳಿದುಕೊಳ್ಳಿ.

- 'ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತಾಯ್ತು' – ಇದೊಂದು ಗಾದೆ. ಇದೇ ರೀತಿಯ ಗಾದೆಗಳನ್ನು ಸಂಗ್ರಹಿಸಿರಿ.
- ಕಾಡುಂ ನಾಡುಂ, ಪಗಲುಂ ಇರುಳುಂ – ಎಂಬ ಪದ ಸಮುಚ್ಚಯಗಳನ್ನು ಪಠ್ಯ ಭಾಗದಿಂದ ಹುಡುಕಿ ತೆಗೆಯಿರಿ.
- ಮುದ್ದಣನ 'ರಾಮಾಶ್ವಮೇಧ'ದ ಹೊಸಗನ್ನಡದ ಆವೃತ್ತಿಯನ್ನು ಓದಿರಿ.
- ಪೋಗಿ, ಪಿಡಿದು ಎಂಬ ಪದಗಳು ಹೋಗಿ, ಹಿಡಿದು ಎಂಬುದಾಗಿ ಹೊಸಗನ್ನಡದಲ್ಲಿ 'ಪ' ಕಾರದ ಬದಲು 'ಹ'ಕಾರವನ್ನು ಪಡೆಯುತ್ತವೆ. ಈ ಪಾಠಭಾಗದಲ್ಲಿರುವ ಇಂಥ ಪದಗಳನ್ನು ಆಯ್ದು 'ಹ'ಕಾರಕ್ಕೆ ಪರಿವರ್ತಿಸಿ ಬರೆಯಿರಿ.
- ಗಂಗೆಯಂ ಮೀವಲ್ಲಿ ಎಂಬ ಮಾತಿಗೆ ಗಂಗೆಯಲ್ಲಿ ಮೀಯುವಾಗ ಎಂದು ಅರ್ಥ. ಇಲ್ಲಿ ಅಂ, ಎಂ ಹಳಗನ್ನಡದ ದ್ವಿತೀಯ ವಿಭಕ್ತಿಯು ಸಪ್ತಮಿಯ ಬದಲಿಗೆ ಬಳಕೆಯಾಗಿದೆ. ಈ ರೀತಿ ಒಂದು ವಿಭಕ್ತಿಯ ಸ್ಥಾನದಲ್ಲಿ ಇನ್ನೊಂದು ಪ್ರತ್ಯಯ ಬಳಕೆಯಾಗುವುದನ್ನು ವಿಭಕ್ತಿ ಪಲ್ಲಟ ಎಂದು ಕರೆಯುತ್ತಾರೆ. ಹೀಗೆ ಪಲ್ಲಟಗೊಂಡ ಪ್ರತ್ಯಯಗಳನ್ನು ಗುರುತಿಸಿ.
- ಇಲ್ಲಿರುವ ರಳ(   )ಮತ್ತು ಶಕಟರೇಫ(   ) ಗಳಿಂದ ಕೂಡಿದ ಪದಗಳನ್ನು ಸಂಗ್ರಹಿಸಿರಿ.
- ಈ ಕವನದ ಮೊದಲ ೨ ಪದ್ಯಗಳನ್ನು ಕಂಠಪಾಠ ಮಾಡಿ.
- 'ಪ್ರಾರ್ಥನೆ ಗೀತೆ'ಗೆ ರಾಗ ಸಂಯೋಜಿಸಿ ಗುಂಪಿನಲ್ಲಿ ಹಾಡಿ.
- 'ನಮ್ಮ ಬಲ' – ಈ ಪದ್ಯವನ್ನು ಹಾಡಿ ನೃತ್ಯಕ್ಕೆ ಅಳವಡಿಸಿ.
- ನಾನು ಸೈನಿಕನಾದರೆ – ಎಂಬ ವಿಷಯದ ಬಗ್ಗೆ ೧೦ ಸಾಲು ಬರೆಯಿರಿ.
- ನೀವು ಕಂಡ ಒಂದು ಮಾನವೀಯ ಪ್ರಸಂಗ ಕುರಿತು ಬರೆಯಿರಿ.
- 'ಕುಣಿಗಲ್ ಕೆರೆ' ಪದ್ಯವನ್ನು ಸುಶ್ರಾವ್ಯವಾಗಿ ಹಾಡಿರಿ.
- ನಿಮ್ಮ ಊರಿನ ಹತ್ತಿರದ ಕೆರೆಗೆ ಭೇಟಿಕೊಟ್ಟು ಅದರ ಬಗ್ಗೆ ಬರೆಯಿರಿ.
- ಮೊದಲ ೪ ಸಾಲುಗಳನ್ನು ಕಂಠಪಾಠ ಮಾಡಿ.
- ಪದ್ಯದಲ್ಲಿ ಬರುವ ಪ್ರಾಸ ಪದಗಳನ್ನು ಪಟ್ಟಿಮಾಡಿ.
- ಪದ್ಯದಲ್ಲಿ ಬರುವ ಲೇಖನ ಚಿಹ್ನೆಗಳ ಬಗ್ಗೆ ತಿಳಿಯಿರಿ.
- ಪುರಂದರದಾಸರ ಕಥೆಯನ್ನು ತಿಳಿದುಕೊಳ್ಳಿರಿ.
- ಒಂದು ಮತ್ತು ೫ನೇ ಪದ್ಯದ ಸಾಲುಗಳನ್ನು ಕಂಠಪಾಠ ಮಾಡಿ.

- ಈ ಪದ್ಯದ ೫ ಮತ್ತು ೬ನೇ ಪದ್ಯಗಳನ್ನು ಕಂಠಪಾಠ ಮಾಡಿರಿ.
- ಕೈವಾರ ನಾರಾಯಣಪ್ಪನವರು ರಚಿಸಿರುವ ಕನ್ನಡದ ತತ್ವ ಪದಗಳನ್ನು ಸಂಗ್ರಹಿಸಿ ಓದಿ.
- ಸಂತ ಶಿಶುನಾಳ ಷರೀಫರು ರಚಿಸಿರುವ ತತ್ವ ಪದಗಳನ್ನು ಸಂಗ್ರಹಿಸಿ ಓದಿ.
- ಅತಿಥಿ ಸತ್ಕಾರ ಭಾರತೀಯ ಸಂಸ್ಕೃತಿಯ ಅಂಗವಾಗಿದೆ. ಈ ವಿಷಯ ಕುರಿತು ಪ್ರಬಂಧ ಬರೆಯಿರಿ.
- ಸು.ರು.ಎಕ್ಕುಂಡಿಯವರ ಇನ್ನಿತರ ಕಥನ ಕವನಗಳನ್ನು ಸಂಗ್ರಹಿಸಿ ಓದಿರಿ.
- ಪದ್ಯದಲ್ಲಿನ 'ಯೋಧ ಮತ್ತು ಹೆಂಗಸು' ನಡುವೆ ನಡೆದ ಸಂಭಾಷಣೆಯನ್ನು ನಾಟಕ ರೂಪದಲ್ಲಿ ಬರೆಯಿರಿ ಮತ್ತು ಅಭಿನಯಿಸಿ.
- ರಾಮಚಂದ್ರಶರ್ಮ ಅವರ ಇತರ ಕವಿತೆಗಳನ್ನು ಓದಿರಿ.
- ಅಲ್ಲಮನ ಬೇರೆ ವಚನಗಳನ್ನು ಓದಿರಿ.
- ಬೇರೆ ಬೇರೆ ವಚನಕಾರರ ವಚನಗಳನ್ನು ಓದಿರಿ.
- ಬೇಡ ಬೇಡ, ಹೊಳೆಹೊಳೆ ಎಂಬಂಥ ದ್ವಿರುಕ್ತಿಗಳನ್ನು ಈ ಪದ್ಯಗಳಿಂದ ಆರಿಸಿ.
- ಬಿಸುಡದಿರು ಬಿಸುಡದಿರು ಎಂದು ಆರಂಭವಾಗುವ ಪದ್ಯದಲ್ಲಿ ಬರುವ ಧ್ವನಿ ಪೂರ್ಣವಾದ ಮಾತುಗಳನ್ನು ಅಭ್ಯಾಸ ಮಾಡಿ.
- ಇಲ್ಲಿರುವ ೩ ಮತ್ತು ೬ನೇಯ ಪದ್ಯಗಳನ್ನು ಕಂಠಪಾಠ ಮಾಡಿ.
- ಕುಲ ಸಂಬಂಧೀ ನೀತಿ ವಾಕ್ಯಗಳನ್ನು ಸಂಗ್ರಹಿಸಿ.
- ಕನ್ನಡದ ಇತರ ಮಹಾಭಾರತ ಕೃತಿಗಳಲ್ಲಿನ ಇದೇ ಸಂದರ್ಭವನ್ನು ಅಭ್ಯಾಸ ಮಾಡಿ.

**೧೦ನೇ ತರಗತಿ**

- 'ನಮ್ಮ ಭಾಷೆ' ಪಾಠದಲ್ಲಿ ಬಂದಿರುವ ಅನ್ಯದೇಶೀ ಪದಗಳನ್ನು ಪಟ್ಟಿಮಾಡಿ.
- ನಾಡು ನುಡಿಗೆ ಸಂಬಂಧಿಸಿದ ಕವಿತೆಗಳನ್ನು ಸಂಗ್ರಹಿಸಿ ಓದಿ.
- ಪತ್ರಿಕೆಯಲ್ಲಿ ಬಂದಿರುವ ನಗೆಹನಿಗಳನ್ನು ಬರೆದು ಎಲ್ಲರ ಮುಂದೆ ಓದಿ ನಕ್ಕು ನಗಿಸಿ.
- ಬೀಚಿ ಮತ್ತು ರಾಶಿ ಅವರ ನಗೆಹನಿ ಸಂಕಲನವನ್ನು ಓದಿ.
- ಪತ್ರಿಕೆಗಳಲ್ಲಿ ಪ್ರಕಟವಾಗುವ ಹಾಸ್ಯಲೇಖನಗಳನ್ನು ಓದಿ.
- ಅಂಗಲೀ ಮಾಲಾ ಮತ್ತು ಬುದ್ಧನ ಸಂಭಾಷಣೆಯನ್ನು ಗದ್ಯರೂಪದಲ್ಲಿ ಬರೆಯಿರಿ.
- ನಾಟಕದ ಈ ದೃಶ್ಯವನ್ನು ಶಾಲಾ ಕಾರ್ಯಕ್ರಮದಲ್ಲಿ ಅಭಿನಯಿಸಿ.

- ಪ್ರಕೃತ 'ತ್ಯಾಗಮಯಿ' ಕಥೆಯಲ್ಲಿ ಬರುವ ಗೌರಿ ಪಾತ್ರವನ್ನು ಆಧರಿಸಿ ಸಂವಾದ ರಚಿಸಿ
- ಒಡೆಯನ ಪ್ರಾಣ ಕಾಪಾಡಿದ ಪ್ರಾಣಿ ಕಥೆಗಳನ್ನು ಸಂಗ್ರಹಿಸಿ.
- ನಿಮ್ಮ ಗೆಳೆಯ/ಗೆಳತಿಗೆ ತ್ಯಾಗಮಯಿ ಕಥೆಯನ್ನು ಪ್ರಶಂಸಿಸಿ ಪತ್ರ ಬರೆಯಿರಿ.
- ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಸಣ್ಣ ಕಥೆಗಳನ್ನು ಓದಿ.
- ಹೆಚ್.ಜೆ.ಲಕ್ಕಪ್ಪಗೌಡ ಅವರ 'ಹೊನ್ನಾರು' ಕಥಾ ಸಂಕಲನ ಓದಿ.
- 'ತಿಪ್ಪೇನಹಳ್ಳಿಯ ಮೇಷ್ಟ್ರು' ಪ್ರಸಂಗವನ್ನು ಏಕಾಂಕ ನಾಟಕವನ್ನಾಗಿ ರಚಿಸಿ, ಅಭಿನಯಿಸಿ.
- ರಂಗಣ್ಣನ ಕನಸಿನ ದಿನಗಳು ಪುಸ್ತಕ ಓದಿ.
- ವಾರಪತ್ರಿಕೆಯಲ್ಲಿ ಬರುವ ಲಲಿತ ಪ್ರಬಂಧಗಳನ್ನು ಸಂಗ್ರಹಿಸಿ ಓದಿ.
- ವಿಧಾನಸೌಧದ ಚಿತ್ರಗಳನ್ನು ಸಂಗ್ರಹಿಸಿ ಅದಕ್ಕೆ ಸಂಬಂಧಿಸಿದ ಲೇಖನಗಳನ್ನು ಓದಿ.
- ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ 'ಭಾವ' ಹಾಗೂ ಕುವೆಂಪುರವರ 'ನೆನಪಿನ ದೋಣಿಯಲ್ಲಿ' ಕೃತಿಯನ್ನು ಓದಿ.
- ಶಕ್ತಿಯ ಮಹತ್ವ ಕುರಿತು ನಿಮ್ಮ ಮಿತ್ರನಿಗೆ ಪತ್ರ ಬರೆಯಿರಿ.
- ಉತ್ತಮ ಅಭ್ಯಾಸಗಳ ಮಾಹಿತಿ ಸಂಗ್ರಹಿಸಿ.
- ಸ್ವಾಮಿ ಜಗದಾತ್ಮಾನಂದರ 'ಬದುಕಲು ಕಲಿಯಿರಿ", ವಿ.ಕೃ.ಗೋಕಾಕರ 'ಜೀವನ ಪಾಠಗಳು' ಡಿ.ವಿ.ಜಿ.ಯವರ 'ಬಾಳಿಗೊಂದು ನಂಬಿಕೆ' ಕೃತಿಗಳನ್ನು ಸಂಗ್ರಹಿಸಿ ಓದಿ.
- ಭಾರತೀಯ ಸೇನಾ ವ್ಯವಸ್ಥೆಯ ನಕ್ಷೆ ತಯಾರಿಸಿ, ೫ರಿಂದ ಪಿ.ಯು.ಸಿ.ಯವರೆಗೆ ಉತ್ತೀರ್ಣರಾದವರು ಸೇನೆಯಲ್ಲಿ ಯಾವ ಹುದ್ದೆಗಳಿಗೆ ನೇಮಕಾತಿ ಪಡೆಯಬಹುದೆಂಬುದರ ಬಗ್ಗೆ ಪಟ್ಟಿ ತಯಾರಿಸಿ.
- ಹೆಚ್.ಕೆ.ಬಾಲಸೂರಿಯವರ 'ರಕ್ಷಾವಾಹಿನಿ' (ಭಾರತೀಯ ಸೇನಾಪಡೆಗಳ ಪರಿಚಯ), ಬನಸುಂದರರಾವ್‌ರವರ 'ಕರ್ನಾಟಕದ ವೀರ ಯೋಧರು' ರಾಮಾಯಣ ಹಾಗೂ ಮಹಾಭಾರತಗಳ ಯುದ್ಧಕಾಂಡ ಓದಿರಿ.
- 'ಮಿತ್ರಪ್ರೇಮ' ಕಥೆಯನ್ನು ನಾಟಕರೂಪದಲ್ಲಿ ಬರೆದು ಅಭಿನಯಿಸಿ.
- 'ಮಿತ್ರಪ್ರೇಮ' ಪಾಠವನ್ನು ಹೊಸಗನ್ನಡದಲ್ಲಿ ಬರೆಯಿರಿ.
- ಕೆಂಪುನಾರಾಯಣ ಅವರ 'ಮುದ್ರಮಂಜೂಷಾ' ಕೃತಿಯ ಹೊಸಗನ್ನಡ ಅವತರಣಿಕೆಯನ್ನು ಓದಿ.

- ದುರ್ಗಸಿಂಹನ 'ಪಂಚತಂತ್ರ'ದ ಮೂಲ ಕಥೆಗಳನ್ನು ಓದಿ.
- ಗುಂಡ್ಮಿ ಚಂದ್ರಶೇಖರ ಐತಾಳರ 'ದುರ್ಗಸಿಂಹ ಕವಿಯ ಕರ್ಣಾಟಕ ಪಂಚತಂತ್ರದ ಗದ್ಯಾನುವಾದವನ್ನು ಓದಿ.
- ಭಾವೈಕ್ಯತೆಗೆ ಸಂಬಂಧಿಸಿದ ಕವಿತೆಗಳನ್ನು ಸಂಗ್ರಹಿಸಿ, ನಾಡಿನ ಭಾವೈಕ್ಯ ಸಂಬಂಧೀ ಕಥೆಗಳನ್ನು ಓದಿ.
- ಸೇಡಿಯಾಪು ಕೃಷ್ಣಭಟ್ಟರ ಕಾವ್ಯವನ್ನು ಅಭ್ಯಾಸ ಮಾಡಿ.
- 'ಜಯಭಾರತ ಪುತ್ರ' ಕವಿತೆಯನ್ನು ಸಾಮೂಹಿಕವಾಗಿ ಹಾಡಿ.
- 'ಮಂಕುತಿಮ್ಮನ ಕಗ್ಗ' ದ ಧ್ವನಿ ಸುರುಳಿ ಕೇಳಿ.
- ನೀತಿ ಭೋಧಕ ಗಾದೆಗಳನ್ನು ಸಂಗ್ರಹಿಸಿ ಓದಿ.
- ಎಸ್.ವಿ.ರಂಗಣ್ಣ ಅವರ 'ರಂಗಭಿನ್ನಪ' ಡಿ.ವಿ.ಜಿಯವರ 'ಉಮರನ ಒಸಗೆ' ಭರ್ತೃಹರಿಯ ಶತಕಗಳನ್ನು ಓದಿ.
- ಅರವಿಂದ ಮಾಲಗತ್ತಿಯವರ 'ನಾದ–ನಿನಾದ' ಕವನ ಸಂಕಲನವನ್ನು ಓದಿ.
- ಪುರಂದರದಾಸರ ಕೃತಿಗಳನ್ನು ಕನಕದಾಸರ ಕೀರ್ತನೆಗಳನ್ನು ಓದಿ.
- ಅಂಬಳೆ ರಾಮಕೃಷ್ಣ ಶಾಸ್ತ್ರಿ ಅವರ 'ವಚನ ಭಾರತ': ಭಾರತ ದರ್ಶನ ಪ್ರಕಾಶನವರ 'ಶ್ರೀಮನ್ಮಹಾಭಾರತ'ದ ಎಂಟನೆಯ ಸಂಪುಟದಲ್ಲಿ ಬರುವ 'ಯಕ್ಷ ಪ್ರಶ್ನೆ' ಭಾಗವನ್ನು ಓದಿ.
- ದೇಜವರೇಗೌಡ ಅವರು ಸಂಗ್ರಹಿಸಿ ಸಂಪಾದಿಸಿರುವ 'ಜನಪದ ಗೀತಾಂಜಲಿ', ವಿನೋಬ ವೆಂಕನಾಯಕ ಅವರು ಸಂಗ್ರಹಿಸಿ ಸಂಪಾದಿಸಿರುವ 'ಹಳ್ಳಿಯ ಹಾಡುಗಳು' ಗ್ರಂಥಗಳನ್ನು ಸಂಗ್ರಹಿಸಿ ಓದಿ.
- 'ನಿನಗೇಕೆಸಾಹಸದಾಡಂಬರ'ದ ಕಥೆಯನ್ನು ಹೊಸಗನ್ನಡದಲ್ಲಿ ಸಂಕ್ಷಿಪ್ತವಾಗಿ ಬರೆಯಿರಿ.
- ಕುಮಾರವ್ಯಾಸ ಭಾರತದ ಅರಣ್ಯಪರ್ವ–ಆರನೇಯ ಸಂಧಿಯನ್ನು ಓದಿರಿ.
- ಕನ್ನಡ ಸಂಸ್ಕೃತಿ ಇಲಾಖೆ ಪ್ರಕಟಿಸಿರುವ 'ಸಮಗ್ರ ವಚನ ಸಂಪುಟ'ಗಳನ್ನು ಗ್ರಂಥಾಲಯದಲ್ಲಿ ಅವಲೋಕಿಸಿ.
- ಶಿವಶರಣೆಯರ ವಚನ ಸಂಪುಟದಿಂದ ಹೆಚ್ಚಿನ ವಚನಗಳನ್ನು ಸಂಗ್ರಹಿಸಿ.
- ವಚನ ಕುರಿತ ಲೇಖನಗಳನ್ನು ಅಧ್ಯಯನ ಮಾಡಿ.
- 'ಕಾಲಾಗ್ನಿರುದ್ರಂ ಪೊರಮಡುವವೋಲ್' ಪದ್ಯವನ್ನು ನಾಟಕವನ್ನಾಗಿ ಅಭಿನಯಿಸಿ.

- ಭೀಮ–ದುರ್ಯೋಧನರು ಒಬ್ಬರಿಗೊಬ್ಬರು ಮೂದಲಿಸುವ ಪದ್ಯಗಳನ್ನು ಸಂಭಾಷಣೆಯ ರೂಪದಲ್ಲಿ ಬರೆಯಿರಿ.
- ಭೀಮ–ದುರ್ಯೋಧನರ ಗದಾಯುದ್ಧದ ಸನ್ನಿವೇಶವನ್ನು ಕುಮಾರವ್ಯಾಸ ಹಾಗೂ ಪಂಪನ ಕಾವ್ಯಗಳಲ್ಲಿ ಓದಿ.
- ರನ್ನನ 'ಗದಾಯುದ್ಧ'ದ ಗದ್ಯಾನುವಾದವನ್ನು ಓದಿ.
- ಕನ್ನಡ ನಾಡಿನ ಶಾಸನಗಳನ್ನು ಪಟ್ಟಿಮಾಡಿ. ನಾಡು–ನುಡಿ–ಸಂಸ್ಕೃತಿಯ ಅಧ್ಯಯನ ಮಾಡಿ.
- ಕನ್ನಡ ನಾಡಿನ ವರ್ಣನೆಯಿರುವ ಆಧುನಿಕ ಕವಿತೆಗಳನ್ನು ಓದಿ.
- ಪಂಪ ಭಾರತದಲ್ಲಿನ ಕನ್ನಡ ನಾಡಿನ ವರ್ಣನಾಭಾಗವನ್ನು ಸಂಗ್ರಹಿಸಿ ಓದಿ.
- ಶಾಸನ ಸಂಗ್ರಹ ಪುಸ್ತಕದಲ್ಲಿನ ಶಾಸನಗಳ ಹೊಸಗನ್ನಡ ರೂಪಗಳನ್ನು ಅವಲೋಕಿಸಿ.
- 'ವಿಕ್ರಮಾರ್ಜುನ ವಿಜಯ', 'ಕವಿರಾಜಮಾರ್ಗ', 'ಶಾಸನ ಪದ್ಯ ಮಂಜರಿ' ಕೃತಿಗಳನ್ನು ಗಮನಿಸಿ.

### ೩.೫.೫ ಪಠ್ಯದ ಆಶಯಗಳು

**೮ನೇ ತರಗತಿ**

- ಸಾರ್ವಜನಿಕ ಸೇವೆ ಮಾಡುವವರ ಜೀವನ ದುರಾಸೆಯಿಂದ ದೂರವಿದ್ದು, ಸರಳವಾಗಿರಬೇಕು ಎಂಬುದನ್ನು 'ಹಿಂದೂಸ್ಥಾನಕ್ಕೆ ಹಿಂದಿರುಗಿದುದು' ಪಾಠದಲ್ಲಿ ಕಲಿಯಬಹುದು.
- ಕನ್ನಡ ತಾಯಿಯನ್ನು ಹೊಗಳುತ್ತಾ ಬದುಕನ್ನು ಶ್ರೀಮಂತಗೊಳಿಸಿಕೊಳ್ಳಬೇಕೆಂಬ ಆಶಯ.
- ಪರರ ಒಳಿತಿಗಾಗಿ ಬಾಳನ್ನು ಸವೆಸುವ ಶುದ್ಧ ಮನಸ್ಕರಾಗಬೇಕು.
- ತಮ್ಮತನವನ್ನು ಮರೆತ ಕನ್ನಡಿಗರಿಗೆ ಆ ಕುರಿತು ಪ್ರೇರಣೆ ನೀಡುವುದು.
- ಜನಪದರ ಭಾವನಾ ತೀವ್ರತೆ, ಅನುಭವದ ಗಾಢತೆ, ಬದುಕಿನ ವಿಧಾನಗಳನ್ನು ತಿಳಿಯುವುದು.
- ಚೈತನ್ಯದ ಚಿಲುಮೆಯಾದ ಕನ್ನಡ ನಾಡಿನ ಸಾಂಸ್ಕೃತಿಕ ಪರಂಪರೆಯನ್ನು ಅರಿತು ಅದನ್ನು ಉಳಿಸಿ–ಬೆಳೆಸುವುದು.
- ನಡುಗನ್ನಡ ಕಾವ್ಯ ಸಂದರ್ಭವನ್ನು ಪರಿಚಯಿಸುವುದು.

- ಸಂಗೀತವನ್ನು ತಪಸ್ಸಿನಂತೆ ಪಾಲಿಸಿಕೊಂಡು ಬಂದ ಮಲ್ಲಿಕಾರ್ಜುನ ಮನಸೂರರ ಜೀವನವನ್ನು ಪರಿಚಯಿಸುವುದು.
- ಹಣವಂತರಿಂದ ನಡೆಯುತ್ತಿರುವ ಬಡಜನರ ಶೋಷಣೆಯ ವಿರುದ್ಧವಾಗಿ ದನಿಯೆತ್ತುವುದು.
- ಪರಿಸರ ಕಾಳಜಿ ಮತ್ತು ಸಂವರ್ಧನೆಯ ಕುರಿತು ಹೊಳಪು ನೀಡುವುದು.
- ಎಲ್ಲ ಅಸಮಾನತೆಗಳು ತೊಲಗಬೇಕು. ವ್ಯಕ್ತಿಯ ಅಂತರಂಗದಲ್ಲಿ ಪ್ರೀತಿ, ಸ್ನೇಹ, ದಯೆ, ಸಮಾನತೆ, ಸಹಕಾರ ಸೌಹಾರ್ದಭಾವಗಳು ತುಂಬಬೇಕು.
- ಮಹಾಭಾರತ ಕಥಾ ಪರಿಚಯ
- ಲಕ್ಷ್ಮೀಶನ 'ಜೈಮಿನಿಭಾರತ'ದ ಮೂಲಕ ರಾಮಾಯಣದ ಕಥಾ ಪರಿಚಯ
- 'ಜನರ ಸೇವೆಯೇ ದೇವರ ಸೇವೆ' ಎಂದ ಜನನಾಯಕರ ಜೀವನದ ಅಪೂರ್ವ ಪ್ರಸಂಗದ ಪರಿಚಯ
- ಸಜ್ಜನರ ಸ್ನೇಹ, ಪ್ರಾಣಿಹಿಂಸೆ, ಅಹಂಕಾರ-ಮದ-ಕೋಪದ ಅನರ್ಥಗಳನ್ನು ತಿಳಿಸುವುದು.
- ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರ ಲೇಖನಗಳ ಮೂಲಕ ಪ್ರಕೃತಿ ಪರಿಚಯ
- ಬದುಕಿನ ನೋವುಗಳಿಗೆ ಪದಗಳ ರೂಪವನ್ನು ಕೊಟ್ಟು ಕಾವ್ಯದೇವತೆಗೆ ಅರ್ಪಿಸಬೇಕು.
- ಆದರ್ಶಗಳ ಅನುಷ್ಠಾನಕ್ಕಾಗಿ ಯಾವ ತ್ಯಾಗಕ್ಕೂ ಸಿದ್ದರಾಗಬೇಕು.
- ಅಹಂಕಾರವನ್ನು ಗೆದ್ದು ತ್ಯಾಗ ಗುಣವನ್ನು ಮೆರೆಯುವ ಮೂಲಕ ಮಾನವನು ಉದಾತ್ತನಾಗಬೇಕು.
- ದೈವ, ಪೂಜೆ, ಪ್ರಕೃತಿಗಳ ಬಗ್ಗೆ ತಿಳಿಯುತ್ತಾ ಮನುಷ್ಯ ಮತ್ತು ಪ್ರಕೃತಿಯ ಸಂಬಂಧವನ್ನು ತಿಳಿಯುವುದು.
- ಪಕ್ಷಿ, ಪ್ರಾಣಿ, ಮರಗಳನ್ನಾದರೂ ಪ್ರೀತಿಸುವ ಉನ್ನತವರ್ಗದ ಮಂದಿ ಮನುಷ್ಯರನ್ನು ಪ್ರೀತಿಸುತ್ತಿಲ್ಲ – ಹಾಗಾಗಬಾರದೆಂಬ ಆಶಯ.
- ಜನಪದ ಕ್ರೀಡೆ 'ಕಂಬಳ'ದ ವಿವಿಧ ಮಗ್ಗುಲುಗಳನ್ನು ಪರಿಚಯಿಸುವುದು.
- ಕೀರ್ತನಾ ಸಾಹಿತ್ಯದ ಪರಿಚಯ, ಕನಕದಾಸರ ಆತ್ಮಭಕ್ತಿಯ ಮೊರೆಯನ್ನು ಪರಿಚಯಿಸುವುದು.

೯ನೇ ತರಗತಿ

- ದಯೆಯಿಲ್ಲದ ಧರ್ಮವಾವುದಯ್ಯ? ದಯವೇ ಧರ್ಮದ ಮೂಲ ಎಂಬ ಆಶಯ.
- ರಾಮಾಯಣದ ಬಾಲಕಾಂಡದ ಪರಿಚಯ ಬಾಲಕ ರಾಮನ ಧೈರ್ಯಸಾಹಸಗಳ ಪರಿಚಯ
- ವಿದೇಶದಿಂದ ಮತ ಪ್ರಚಾರಕ್ಕೆ ಬಂದು ಕನ್ನಡ ನಾಡು ನುಡಿಗೆ ಮನಸೋತ ಕಿಟೆಲ್‌ರವರ ಕನ್ನಡ ಸೇವೆಯನ್ನು ಪರಿಚಯಿಸುವುದು.
- ಪರಿಸರವನ್ನು ಮಲಿನಗೊಳಿಸುವವರ ಕಾರ್ಯ ಚಟುವಟಿಕೆಗಳನ್ನು ನಿಷ್ಕ್ರಿಯಗೊಳಿಸಬೇಕು.
- ಜನಪದ ರಂಗಭೂಮಿ ಕಲೆಯನ್ನು ಪರಿಚಯಿಸುವ ಆಶಯ
- ಫ್ರಾನ್ಸ್ ದೇಶದ ವಿವಿಧ ಮುಖಗಳ ರೋಚಕಗಳ ಬಗ್ಗೆ ಜಾಗೃತಿ ಮೂಡಿಸುವುದು.
- ಸ್ವಾತಂತ್ರ ಹೋರಾಟಗಾರರ ಬದುಕನ್ನು, ದೇಶಕ್ಕಾಗಿ ಪ್ರಾಣಾರ್ಪಣೆ ಮಾಡಿದ ವೀರರ ಚರಿತೆಯನ್ನು ತಿಳಿಸುವುದು.
- ಪ್ರಕೃತಿಯ ವಿಕೋಪಗಳನ್ನು ಸಹಿಸಿಕೊಂಡು ಆತ್ಮಬಲ ಹಾಗೂ ಛಲದಿಂದ ಮನುಷ್ಯ ಬದುಕುತ್ತಿರುವ ಚಿತ್ರಣವನ್ನು ನೀಡುವುದು.
- ಮುದ್ದಣ–ಮನೋರಮೆಯರ ಸರಸ–ಸಲ್ಲಾಪವನ್ನು ಸಂವಾದದ ಸ್ವಾರಸ್ಯವನ್ನು ಪರಿಚಯಿಸುವುದು.
- ಹಳಗನ್ನಡದ ಗದ್ಯವನ್ನು ಪರಿಚಯಿಸುವುದು.
- ದೇಶದಲ್ಲಿ ಸಮರಸದ ವಾತಾವರಣ ಸೃಷ್ಟಿಯಾಗಬೇಕೆಂಬ ಆಶಯ.
  ರಾಷ್ಟ್ರ ರಕ್ಷಣೆಗೆ ನಾವು ಸದಾ ಸಿದ್ಧರಾಗಿರಬೇಕೆಂಬ ಆಶಯ
- ಜಗತ್ತಿನಲ್ಲಿ ಮಾನವೀಯತೆಯನ್ನು ಬೆಳೆಸಿ ಒಳ್ಳೆಯ ನಾಗರಿಕ ಸಮಾಜದ ಸೃಷ್ಟಿ ಮಾಡುವುದು.
- ಜನಪದ ಸಾಹಿತ್ಯವನ್ನು ಪರಿಚಯಿಸಿ ಕೊಡುವುದು.

೧೦ನೇ ತರಗತಿ

- ಕನ್ನಡ ಭಾಷೆ–ಸಾಹಿತ್ಯ ಸಂಸ್ಕೃತಿಯ ಮಹತ್ವವನ್ನು ಅರಿಯುವುದು, ಮಾತೃಭಾಷೆಯ ಆಂತರ್ಯದಲ್ಲಿರುವ ಆತ್ಮೀಯತೆ–ಸೊಗಸನ್ನು ಅರಿಯುವುದು.
- ನಗು–ಅಳುಗಳ ಮೂಲ ಮನಸ್ಸು ಎಂಬುದನ್ನು ಸಂಶೋಧಾನಾತ್ಮಕ ರೀತಿಯಲ್ಲಿ ಸಾದರ ಪಡಿಸಿರುವ ಲೇಖಕರ ನಿಲುವನ್ನು ಅರ್ಥೈಸಿಕೊಳ್ಳುವುದು.

- ಕ್ರೌರ್ಯ ಮತ್ತು ಶಾಂತಿ ಎಂಬ ಪರಸ್ಪರ ವಿರುದ್ಧ ಪರಿಕಲ್ಪನೆಗಳ ಪ್ರತಿನಿಧಿಗಳಾಗಿರುವ ಅಂಗುಲೀಮಾಲಾ ಹಾಗೂ ಬುದ್ಧನ ಚಿತ್ರಣದಲ್ಲಿ ಧನಾತ್ಮಕ ಚಿಂತನೆಯೇ ಮನಃ ಪರಿವರ್ತನೆಗೆ ಸಾಕ್ಷಿ ಎಂಬುದನ್ನು ತಿಳಿಯುವುದು.
- ತ್ಯಾಗ ಮೌಲಿಕ ಪರಿಕಲ್ಪನೆ, ಸ್ವಾರ್ಥವನ್ನು ಮರೆತು ಪರರ ಉಪಕಾರಕ್ಕೆ ಮುಂದಾಗಬೇಕು. ಶರೀರ ಸಾರ್ಥಕವಾಗುವುದು ಪರೋಪಕಾರದಿಂದಲೇ ಎಂಬ ಭಾರತೀಯ ಸಂಸ್ಕೃತಿಯನ್ನು ತಿಳಿಯಬೇಕು.
- ಗದ್ಯ ಸಾಹಿತ್ಯದಲ್ಲಿನ ಲಲಿತ ಪ್ರಬಂಧವನ್ನು ಪರಿಚಯಿಸುವುದು.
- ಕನ್ನಡ ಸಾಹಿತ್ಯದಲ್ಲಿನ ಆತ್ಮಕಥನ ಪ್ರಕಾರವನ್ನು ಪರಿಚಯಿಸುವುದು. ಆ ಮೂಲಕ ಸ್ವಾತಂತ್ರ್ಯದ ಕಾಲಘಟ್ಟವನ್ನು ಪರಿಚಯಿಸುವುದು.
- ಶಾರೀರಿಕ, ಭೌದ್ಧಿಕ, ನೈತಿಕ, ಆಧ್ಯಾತ್ಮಿಕ ಶಕ್ತಿಗಳಿಂದ ಕ್ರಿಯಾಶೀಲ ವ್ಯಕ್ತಿತ್ವವನ್ನು ರೂಢಿಸಿಕೊಳ್ಳಬೇಕು, ಮನುಷ್ಯನನ್ನು ಸನ್ಮಾರ್ಗದಲ್ಲಿ ಸಂಕಲ್ಪಿಸಿಕೊಳ್ಳಬೇಕೆಂಬ ಆಶಯ.
- ಭಾರತೀಯ ಸೇನಾ ಪಡೆಯ ಸ್ವರೂಪ, ಕಾರ್ಯವೈಖರಿ, ಸೇನಾ ನೇಮಕಾತಿ ವಿಧಾನವನ್ನು ಪರಿಚಯಿಸುವುದು ಮತ್ತು ದೇಶಪ್ರೇಮ, ರಾಷ್ಟ್ರ ರಕ್ಷಣೆ, ಸೈನಿಕರನ್ನು ಗೌರವಿಸುವ ಮನೋಭಾವವನ್ನು ಬೆಳೆಸಿಕೊಳ್ಳಬೇಕೆಂಬ ಆಶಯ.
- ವೀರರಸ ಪ್ರಧಾನವಾದ 'ಮುದ್ರಾಮಂಜೂಷ'ದ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಭಾಷಾ ಶೈಲಿಯನ್ನು ಪರಿಚಯಿಸುವುದು ಮತ್ತು ಮನುಷ್ಯ ಜೀವನದಲ್ಲಿ ಗೆಳೆತನಕ್ಕಿರುವ ಮಹತ್ವವನ್ನು ತಿಳಿಸುವುದು.
- 'ಬುದ್ಧಿ ಹಾಗೂ ಬಲಗಳ ನಡುವಿನ ಹೋರಾಟದಲ್ಲಿ ಬುದ್ಧಿಯೇ ಗೆಲ್ಲುತ್ತದೆ', 'ಲೋಕದಲ್ಲಿ ಎಷ್ಟೇ ಶೌರ್ಯವಂತನಾದರೂ ಕೋಪಾತುರನಾದವನು ಬಾಳಲಾರ' ಎಂಬುದನ್ನು ತಿಳಿಸುವುದು.
- ಅನೇಕತೆಯಲ್ಲಿ ಏಕತೆಯನ್ನು ಕಂಡುಕೊಂಡ ಸಂಸ್ಕೃತಿಯ ಭಾರತೀಯರಾದ ನಾವು ಒಂದೆ ತಾಯಿ ಮಕ್ಕಳಂತೆ ಬಾಳಬೇಕು ಎಂಬ ಆಶಯ.
- ರಾಷ್ಟ್ರ ನಿರ್ಮಾಣ, ರಾಷ್ಟ್ರದ ಅಭ್ಯುದಯದಲ್ಲಿ ವ್ಯಕ್ತಿ ಚಾರಿತ್ರ್ಯ ಅತ್ಯಮೂಲ್ಯ. ಈ ಸಂಪತ್ತಿನ ಗಳಿಕೆಗೆ ನೀತಿ ಕಾವ್ಯದ ಹರವು ಹಾಗೂ ತಿಳಿವು ಅತ್ಯಗತ್ಯ ಎಂಬ ಅರಿವನ್ನು ಬೆಳೆಸುವುದು.
- ಜನ್ಮಭೂಮಿ ಹಾಗೂ ಭಾಷೆಯ ಮೌಲಿಕತೆಗಿಂತ ಮಿಗಿಲಾದುದು ಏನೂ ಇಲ್ಲ ಎಂಬ ಆಶಯವನ್ನು ಬಿತ್ತುವುದು.

- ಮಾನವ ಜನ್ಮ ಸಾರ್ಥಕವಾಗಬೇಕಾದರೆ ಸಂಸ್ಕೃತಿ ಪರಂಪರೆಯನ್ನು ಅರಿತು ಸಮಾಜ ಮುಖಿಯಾಗಿ ಬಾಳಬೇಕು. ಇಲ್ಲವಾದರೆ ಬಾಳು ವ್ಯರ್ಥ ಎಂಬ ಧ್ವನಿಪೂರ್ಣ ವಿಮರ್ಶೆಯನ್ನು ಬಿಂಬಿಸುವುದು.
- ದುಡುಕು-ಅಹಂಕಾರ ಎಂದಿಗೂ ಸಲ್ಲದು. ಸಹನೆಯೇ ಪ್ರಧಾನ ಎಂದು ತಿಳಿಯುವುದರೊಂದಿಗೆ ಜಗತ್ತಿನ ಸರ್ವೋತ್ತಮ ಅಂಶಗಳನ್ನು ಪರಿಚಯ ಮಾಡಿಕೊಡುವುದು.
- ಭೂಮಿ, ತಾಯಿ ಮತ್ತು ಬದುಕಿನ ಕುರಿತಾಗಿ ಜನಪದರು ಕಟ್ಟಿಕೊಂಡಿದ್ದ ನಂಬಿಕೆ ಮತ್ತು ಪ್ರೀತಿಯನ್ನು ತಿಳಿಸುವುದು.
- ಚಂಪೂ ಸಾಹಿತ್ಯ ಪ್ರಕಾರವನ್ನು ಪರಿಚಯಿಸುವುದು, ಭಕ್ತಿಯ ಅನನ್ಯತೆಯನ್ನು ಶ್ರುತಪಡಿಸುವುದು.
- ಹನ್ನೆರಡನೆಯ ಶತಮಾನದಲ್ಲಿ ಪುರುಷನಿಗೆ ಹೆಗಲೆಣೆಯಾಗಿ ಅನುಭಾವದ ಹಂತವನ್ನೇರಿ, ಆತ್ಮೋದ್ಧಾರದ ಹಂಬಲ ಹೊಂದಿದ ಶಿವಶರಣೆಯರನ್ನು ಪರಿಚಯಿಸುವ ಆಶಯ.
- ಸಿಂಹಾವಲೋಕನ ಕ್ರಮದಿಂದ ಮಹಾಭಾರತದ ಕಥೆಯನ್ನು ಅವಲೋಕಿಸಿದ ರನ್ನನ 'ಸಾಹಸಭೀಮವಿಜಯ' ಕೃತಿಯನ್ನೂ ಶೈಲಿಯನ್ನೂ ಪರಿಚಯಿಸುವುದು.
- ಕನ್ನಡಿಗರ ಜಾಣ್ಮೆ, ಕೆಚ್ಚು, ದಾನಗುಣ, ಕನ್ನಡನಾಡಿನ ಭೌಗೋಳಿಕ ಹರವಿನ ಸಾಂಸ್ಕೃತಿಕ ವೈಭವವನ್ನು ಮನಸಾರೆ ಹೊಗಳಿದ ಪ್ರಾಚೀನ ಕವಿ-ಕೃತಿಗಳನ್ನು ಪರಿಚಯಿಸುವುದು.

### ೩.೫.೬ ವ್ಯಾಕರಣಾಂಶಗಳು

**೮ನೇ ತರಗತಿ**

- ಕನ್ನಡ ವರ್ಣಮಾಲೆ, ಸ್ವರ, ವ್ಯಂಜನ, ಯೋಗವಾಹಗಳು, ಹ್ರಸ್ವ, ಧೀರ್ಘ, ಪ್ಲುತ ವಿಭಾಗಕ್ರಮ, ಗುಣಿತಾಕ್ಷರಗಳು, ಸಂಯುಕ್ತಾಕ್ಷರಗಳು, ಅವುಗಳ ವಿಧಗಳು.
- ಸಂಧಿ, ಕನ್ನಡ ಸಂಧಿಗಳು, ಪ್ರಕೃತಿಭಾವ
- ಸಂಸ್ಕೃತ ಸಂಧಿಗಳು, ಸವರ್ಣದೀರ್ಘ, ಗುಣ, ವೃದ್ಧಿ, ಯಣ್, ಶ್ಚುತ್ವ, ಜಸ್ತ್ವ, ಅನುನಾಸಿಕ ಸಂಧಿಗಳು
- ತತ್ಸಮ – ತದ್ಭವಗಳು
- ನಾಮಪದ

- ವಿಭಕ್ತಿ ಪ್ರತ್ಯಯಗಳು
- ಗುಣವಾಚಕ, ಸಂಖ್ಯಾವಾಚಕ, ಪರಮಾಣ ವಾಚಕ, ದಿಗ್ವಾಚಕ, ವಸ್ತುವಾಚಕ,
- ಸರ್ವನಾಮ, ಪುರಷವಾಚಕ, ಪ್ರಶ್ನಾರ್ಥಕ, ಆತ್ಮಾರ್ಥಕ, ನಿರ್ದೇಶಾತ್ಮಕ
- ಭಾವನಾಮ
- ವಾಕ್ಯ, ವಾಕ್ಯ ಪ್ರಭೇದಗಳು ಸಾಮಾನ್ಯವಾಕ್ಯ, ಸಂಯೋಜಿವಾಕ್ಯ, ಮಿಶ್ರವಾಕ್ಯ, ವಾಕ್ಯಪರಿವರ್ತನೆ
- ಪತ್ರಲೇಖನ – ಖಾಸಗೀ ಪತ್ರ, ವ್ಯವಹಾರಿಕ ಪತ್ರ
- ಪ್ರಬಂಧ ರಚನೆ.

೯ನೇ ತರಗತಿ

- ಕ್ರಿಯಾಪದ, ಧಾತು, ಮೂಲಧಾತು, ಸಾಧಿತಧಾತು, ಸಕರ್ಮಕ ಧಾತು, ಅಕರ್ಮಕ ಧಾತು, ವಿಧ್ಯರ್ಥಕ ಕ್ರಿಯಾಪದ, ನಿಷೇಧಾರ್ಥಕ
- ಕಾಲಗಳು, ವರ್ತಮಾನ, ಭೂತ, ಭವಿಷ್ಯತ್
- ಅವ್ಯಯ, ಸಾಮಾನ್ಯಾವ್ಯಯ, ಅನುಕರಣಾವ್ಯಯ, ಭಾವಸೂಚಕ ಅವ್ಯಯ, ಕ್ರಿಯಾರ್ಥಕ ಅವ್ಯಯ, ಸಂಬಂಧಸೂಚಕ ಅವ್ಯಯ
- ಕರ್ತರಿ – ಕರ್ಮಣಿ ಪ್ರಯೋಗಗಳು
- ಕಾಲಪಲ್ಲಟ
- ಸಮಾಸಗಳು, ವಿಗ್ರಹ ವಾಕ್ಯಗಳು, ವಿಭಜನಾಕ್ರಮ, ಸಮಾಸದ ವಿಧಗಳು, ತತ್ಪುರಷ, ಕರ್ಮಧಾರೆಯ, ಕ್ರಿಯಾ, ದ್ವಂದ್ವ, ದ್ವಿಗು, ಬಹುವ್ರೀಹಿ, ಅಂಶಿ, ಗಮಕ.
- ವಾಕ್ಯ–ವಾಕ್ಯ ಪ್ರಬೇದಗಳು.
  ಸಾಮಾನ್ಯವಾಕ್ಯ, ಸಂಯೋಜಿತವಾಕ್ಯ, ಮಿಶ್ರವಾಕ್ಯ

೧೦ನೇ ತರಗತಿ

- ಪತ್ರ ಲೇಖನ ರಚನಾ ವಿನ್ಯಾಸ, ವರದಿ ತಯಾರಿಕೆ
- ವಾಕ್ಯ ರಚನಾ ವಿವರ, ವಾಕ್ಯ ಪರಿವರ್ತನಾ ವಿವರ
- ಧಾತು, ವಿಧ್ಯರ್ಥಕ, ಸಂಭಾವನಾರ್ಥಕರೂಪ, ನಿಷೇಧಾರ್ಥಕ ರೂಪ

- ಪ್ರಬಂಧ ರಚನಾ ವಿವರ
- ವಿಭಕ್ತಿ – ಕಾರಕಾರ್ಥ, ಪ್ರತ್ಯಯ, ವಿಭಕ್ತಿಪಲ್ಲಟ ವಿವರ
- ಹೊಸಗನ್ನಡ ಮತ್ತು ಹಳಗನ್ನಡ ವಿಭಕ್ತಿ ಪ್ರತ್ಯಯಗಳು
- ಲೇಖನ ಚಿಹ್ನೆಗಳು
- ಕೃದಂತಗಳು, ಕೃದಂತನಾಮ, ವರ್ತಮಾನ ಕೃದಂತ, ಭೂತ ಕೃದಂತ, ನಿಷೇಧ ಕೃದಂತ, ಕೃದಂತಭಾವನಾಮ, ಕೃದಂತಾವ್ಯಯಗಳ ಸಂಪೂರ್ಣ ವಿವರ.
- ಸಮಾಸ, ತತ್ಪುರುಷ ಸಮಾಸ, ಕರ್ಮಧಾರೆಯ ಸಮಾಸ, ದ್ವಿಗು ಸಮಾಸ, ಅಂಶಿಸಮಾಸ, ಕ್ರಿಯಾಸಮಾಸ, ದ್ವಂದ್ವಸಮಾಸ, ಬಹುವ್ರೀಹಿಸಮಾಸ
- ತದ್ಧಿತ, ತದ್ಧತಾಂತನಾಮ, ತದ್ಧಿತ ಪ್ರತ್ಯಯ, ತದ್ದಿತಾಂತ ಭಾವನಾಮ, ತದ್ದಿತಾಂತಾವ್ಯಯಗಳ ಸಂಪೂರ್ಣ ವಿವರ.
- ಅವ್ಯಯಗಳು ವಿಧಗಳು, ಸಾಮಾನ್ಯಾವ್ಯಯ, ಅನುಕರಣಾವ್ಯಯ, ಭಾವಸೂಚಕಾವ್ಯಯ, ಸಂಬಂಧಾರ್ಥಕಾವ್ಯಯ, ಅವಧಾರಣಾರ್ಥಕಾವ್ಯಯ
- ರಳ, ಕುಳ, ಕ್ಷಳ, ರೇಫ ಶಕಟರೇಫಗಳ ಪರಿಚಯ

### ೩.೫.೭ ಛಂದಸ್ಸು

**೮ನೇ ತರಗತಿ**

- ಛಂದಶಾಸ್ತ್ರ
- ಪ್ರಾಸ, ಆದಿ ಪ್ರಾಸ, ಅಂತ್ಯ ಪ್ರಾಸ
- ಗಣ, ಗಣ ವಿಂಗಡನೆ
- ಮಾತ್ರಾಗಣ, ವಿಭಾಗ ಕ್ರಮ, ಮಾತ್ರೆ, ಲಘು, ಗುರುಗಳಾಗುವ ಸಂದರ್ಭಗಳು
- ಷಟ್ಪದಿಗಳು, ಭಾಮಿನಿ, ವಾರ್ಧಕ ಷಟ್ಪದಿಗಳು
- ಕಂದಪದ್ಯ, ಲಕ್ಷಣ ಸಮನ್ವಯ

**೯ನೇ ತರಗತಿ**

- ರಗಳೆ
- ಉತ್ಸಾಹ ರಗಳೆ, ಮಂದಾನಿಲ ರಗಳೆ
- ಕಂದಪದ್ಯ

- ಷಟ್ಪದಿಗಳು, ಭಾಮಿನಿ ಷಟ್ಪದಿ, ವಾರ್ಧಕ ಷಟ್ಪದಿ
- ವೃತ್ತಗಳು
- ಅಕ್ಷರಗಣ ವಿಭಾಗಕ್ರಮ, ಉತ್ಪಲಮಾಲಾ ವೃತ್ತ

**೧೦ನೇ ತರಗತಿ**

- ಛಂದಸ್ಸು, ಪ್ರಾಸ, ಆದಿ ಪ್ರಾಸ, ಮಧ್ಯ ಪ್ರಾಸ, ಅಂತ್ಯ ಪ್ರಾಸ
- ಗಣ, ಮಾತ್ರಾಗಣ, ಅಕ್ಷರಗಣ, ಅಂಶಗಣಗಳ ಸಮಗ್ರ ವಿವರಣೆ
- ಲಘು–ಗುರುಗಳಾಗಿರುವ ಸಂದರ್ಭಗಳು
- ಬ್ರಹ್ಮಗಣ, ರುದ್ರಗಣ,ವಿಷ್ಣುಗಣಗಳ ರಚನೆಗಳು
- ಕೀರ್ತನೆ, ಸುಳಾದಿ, ಉಗಾಭೋಗಗಳ ಪರಿಚಯ
- ಷಟ್ಪದಿಗಳ ವಿವರ
- ಭಾಮಿನಿ, ವಾರ್ಧಕ ಷಟ್ಪದಿಗಳ ಸಂಪೂರ್ಣ ವಿವರ
- ಕಂದಪದ್ಯದ ಲಕ್ಷಣ, ಪ್ರಸ್ತಾರ ಕ್ರಮ
- ವೃತ್ತಗಳು – ಪ್ರಸ್ತಾರ ಕ್ರಮ, ವಿಧಗಳು
- ಚಂಪಕಮಾಲಾ ವೃತ್ತ, ಉತ್ಪಲಮಾಲಾವೃತ್ತ, ಸ್ರಗ್ಧರಾವೃತ್ತ, ಮಹಾಸ್ರಗ್ಧರಾವೃತ್ತ, ಶಾರ್ದೂಲ ವಿಕ್ರೀಡಿತ ವೃತ್ತ, ಮತ್ತೇಭ ವಿಕ್ರೀಡಿತ ವೃತ್ತ
- ರಗಳೆ – ಲಕ್ಷಣಗಳು – ಲಲಿತರಗಳೆ

### ೩.೫.೮ ಅಲಂಕಾರ

**೮ನೇ ತರಗತಿ**

- ಅಲಂಕಾರ, ಶಬ್ದಾಲಂಕಾರ, ಅರ್ಥಾಲಂಕಾರ
- ಉಪಮಾಲಂಕಾರ, ಪೂರ್ಣೋಪಮೆ, ಲುಪ್ತೋಪಮೆ

**೯ನೇ ತರಗತಿ**

- ಶಬ್ದಾಲಂಕಾರ
- ಅನುಪ್ರಾಸ, ಯಮಕ, ಚಿತ್ರ ಕವಿತ್ವ
- ರೂಪಕಾಲಂಕಾರ, ಉತ್ಪ್ರೇಕ್ಷಾಲಂಕಾರ, ದೃಷ್ಟಾಂತಾಲಂಕಾರ, ಅರ್ಥಾಂತರನ್ಯಾಸಾಲಂಕಾರ

೧೦ನೇ ತರಗತಿ

- ಅಲಂಕಾರ ವಿಧಗಳು, ಶಬ್ದಾಲಂಕಾರಗಳು, ಅರ್ಥಾಲಂಕಾರಗಳು, ವೃತ್ತ್ಯನುಪ್ರಾಸ, ಛೇಕಾನುಪ್ರಾಸ, ಯಮಕಾಲಂಕಾರ, ಚಿತ್ರಕವಿತ್ವ
- ಅರ್ಥಾಲಂಕಾರಗಳು, ಉಪಮಾಲಂಕಾರ ಪೂರ್ಣೋಪಮೆ, ಲುಪ್ತೋಪಮೆ, ಉಪಮೆಯ ಲುಪ್ತೋಪಮೆ, ಧರ್ಮಲುಪ್ತೋಪಮೆ, ವಾಚಕಲುಪ್ತೋಪಮೆ, ವಾಚಕಧರ್ಮಲುಪ್ತೋಪಮೆ, ವಾಚಕಧರ್ಮೋಪಮಾನಲುಪ್ತೋಪಮೆ.
- ರೂಪಕಾಲಂಕಾರ, ಉತ್ಪ್ರೇಕ್ಷಾಲಂಕಾರ, ದೃಷ್ಟಾಂತಾಲಂಕಾರ, ಅರ್ಥಾಂತರನ್ಯಾಸಾಲಂಕಾರ, ಶ್ಲೇಷಾಲಂಕಾರ"[೨೨].

**೩.೬ 'ಸಿರಿ ಕನ್ನಡ'– ಪ್ರಥಮಭಾಷಾ ಕನ್ನಡ ಪಠ್ಯ ಪುಸ್ತಕ. ೮ನೆಯ ತರಗತಿ– ೨೦೧೨.**

**"ಪ್ರೌಢಶಾಲೆಗಳಲ್ಲಿ ಕನ್ನಡ ಭಾಷಾ ಕಲಿಕೆ–ಒಂದು ಅಧ್ಯಯನ"** ಎಂಬುದು ಅಧ್ಯಯನದ ವಿಚಾರವಾದ್ದರಿಂದ ಪ್ರೌಢಶಾಲಾ ಪಠ್ಯಪುಸ್ತಕಗಳನ್ನು ಕೂಲಂಕಷವಾಗಿ ಗಮನಿಸುವುದು ಅತ್ಯಂತ ಮುಖ್ಯವಾಗುತ್ತದೆ. ಈ ನಿಟ್ಟಿನಲ್ಲಿ ೨೦೧೨ ರಲ್ಲಿ ಎಂಟನೆಯ ತರಗತಿಯ ವಿದ್ಯಾರ್ಥಿಗಳಿಗಾಗಿ ನೂತನವಾಗಿ ಸಿದ್ಧಪಡಿಸಿದ ಪಠ್ಯಪುಸ್ತಕವನ್ನು ಸಮಗ್ರವಾಗಿ ಗಮನಿಸಲಾಗಿದೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೨ನೆಯ ಸಾಲಿನಲ್ಲಿ ಎಂಟನೆಯ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿಗಳಿಗಾಗಿ ನೂತನ ಪಠ್ಯಪುಸ್ತಕವನ್ನು ರಚಿಸಿದೆ. **'ಸಿರಿಗನ್ನಡ ಪ್ರಥಮಭಾಷಾ ಕನ್ನಡ ಪಠ್ಯಪುಸ್ತಕ'** ಎಂಬ ಹೆಸರಿನಲ್ಲಿ ಪುಸ್ತಕವನ್ನು ಮುದ್ರಿಸಿದೆ. ರಾಷ್ಟ್ರಕವಿಗಳಾದ ಎಂ.ಗೋವಿಂದ ಪೈ ಹಾಗೂ ಕುವೆಂಪುರವರ ಭಾವಚಿತ್ರಗಳನ್ನು, ಗೊಮ್ಮಟನ ಚಿತ್ರವನ್ನೂ, ಹೊಯ್ಸಳ ಸ್ತಂಭಗಳ ಕಲಾಕೃತಿಗಳ ನಡುವೆ ಕರ್ನಾಟಕ ಸರ್ಕಾರದ ಲಾಂಛನವನ್ನೂ ವರ್ಣರಂಜಿತವಾಗಿ ಮುದ್ರಿಸಲಾಗಿದೆ. ಪಠ್ಯದ ಹಿಂಬದಿಯ ರಕ್ಷಾಪುಟದಲ್ಲಿ ಬೇಲೂರಿನ ಚನ್ನಕೇಶವ ದೇವಾಲಯದ ಚಿತ್ರವಿದೆ.

ಮುಖಪುಟಕ್ಕೆ ೨೨೦ ಜಿ.ಎಸ್.ಎಂ ಆರ್ಟ್ ಬೋರ್ಡ್ ಕಾಗದವನ್ನು ಬಳಸಿದ್ದು ೬೦ ಜಿ.ಎಸ್.ಎಂ. ಮ್ಯಾಪ್‌ಲಿಥೋ ಕಾಗದವನ್ನು ಮುದ್ರಣಕ್ಕೆ ಬಳಸಿಕೊಳ್ಳಲಾಗಿದೆ. ಈ ವಿವರಗಳನ್ನು ಮುಂಭಾಗದ ರಕ್ಷಾಪುಟದ ಒಳಭಾಗದಲ್ಲಿ ಮುದ್ರಿಸಲಾಗಿದೆ. ರಾಷ್ಟ್ರಗೀತೆಯನ್ನೂ ಸದರಿ ಪುಟದಲ್ಲಿ ಮುದ್ರಿಸಲಾಗಿದೆ. ಮೊದಲ ಪುಟದ ಒಳಭಾಗದಲ್ಲಿ ಪಠ್ಯಪುಸ್ತಕ ರಚನಾ ಸಮಿತಿಯ ವಿವರವನ್ನು ನೀಡಲಾಗಿದೆ. ವ್ಯವಸ್ಥಾಪಕ ನಿರ್ದೇಶಕರ ಮುನ್ನುಡಿಯ ಬಳಿಕ

**'ಸಿರಿ ಕನ್ನಡ-೮'** ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರಾದ ಶ್ರೀ ಸಿ.ಎಸ್.ರಾಮಚಂದ್ರ ರವರು **'ಪಠ್ಯ ಓದು ಹಾಗೂ ಬೋಧನೆಗೆ ಮುನ್ನ ಬೋಧಕರೊಂದಿಗೆ ಸಮಾಲೋಚನೆ......'** ಯನ್ನು ನಡೆಸಿದ್ದಾರೆ.

ಹಿಂಭಾಗದ ರಕ್ಷಾಪುಟದ ಒಳಭಾಗದಲ್ಲಿ ನಾಡಗೀತೆಯನ್ನು ಮುದ್ರಿಸಲಾಗಿದೆ. ಪಠ್ಯಪುಸ್ತಕದ ಕೊನೆಯ ಪುಟದಲ್ಲಿ ಕನ್ನಡದ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರ ಭಾವಚಿತ್ರದೊಂದಿಗೆ ಕೃತಿ ಹಾಗೂ ವರ್ಷಗಳ ವಿವರವನ್ನು ಮುದ್ರಿಸಲಾಗಿದೆ. **'ಮಕ್ಕಳ ಹಕ್ಕುಗಳು'** ಅಂದರೆ ,ನವೆಂಬರ್ ೧೯೮೯ರ ಯು.ಎನ್.ಓ ಸಾಮಾನ್ಯ ಸಭೆಯಲ್ಲಿ ನಿರ್ದಾರವಾದಂತೆ, ಮಕ್ಕಳ ಕ್ಷೇಮಾಭಿವೃದ್ಧಿಗಾಗಿ ಕೈಗೊಂಡ ಸಾಮಾನ್ಯ ನಿರ್ಣಯಗಳನ್ನು ಕೊನೆಯ ಪುಟದಲ್ಲಿ ನೀಡಲಾಗಿದ್ದು ರಾಜ್ಯದಲ್ಲಿ ಎಲ್ಲೇ ಯಾವುದೇ ರೀತಿಯ ಮಕ್ಕಳ ಹಕ್ಕುಗಳ ಉಲ್ಲಂಘನೆಯಾದರು ಅದರ ವಿರುದ್ಧ ಕರ್ನಾಟಕದಲ್ಲಿರುವ ಎಲ್ಲಾ ಮಕ್ಕಳು ಅಥವಾ ಮಕ್ಕಳ ಪರವಾಗಿ ವಯಸ್ಕರು ಯಾವುದೇ ಜಾತಿ, ಮತ, ಲಿಂಗ, ಆರ್ಥಿಕ ಸ್ಥಾನಮಾನ ಇತ್ಯಾದಿಗಳ ಬೇಧಭಾವವಿಲ್ಲದೆ ರಾಜ್ಯ ಮಕ್ಕಳ ಹಕ್ಕುಗಳ ಆಯೋಗಕ್ಕೆ ದೂರು ಸಲ್ಲಿಸಬಹುದು ಎಂಬ ಪ್ರಕಟಣೆಯನ್ನು ನೀಡಿ ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ಆಯೋಗದ ವಿಳಾಸವನ್ನು ಮುದ್ರಿಸಲಾಗಿದೆ.

### ೩.೬.೧ ಪಠ್ಯದಲ್ಲಿರುವ ಮುನ್ನುಡಿ

ಮುನ್ನುಡಿಯು ಯಾವುದೇ ಒಂದು ಕೃತಿಯ ತಿರುಳನ್ನು ತಿಳಿಸುವ ವಿಚಾರವಾಗಿದೆ. ಪಠ್ಯಪುಸ್ತಕದ ಸಮಗ್ರ ವಿವೇಚನೆಯನ್ನು ಮುನ್ನುಡಿಯು ಮಾಡುವುದರಿಂದ ೮ನೆಯ ತರಗತಿಯ ಹೊಸ ಪಠ್ಯದ ಮುನ್ನುಡಿಯನ್ನು ಯಥಾವತ್ತಾಗಿ ಸ್ವೀಕರಿಸಿದೆ.

"೨೦೦೫ ರ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿಗೆ ಅನುಗುಣವಾಗಿ ಕರ್ನಾಟಕ ಪಠ್ಯ ಪುಸ್ತಕ ಸಂಘವು ೨೦೧೦ ನೆಯ ಸಾಲಿನಿಂದ ಒಂದರಿಂದ ಹತ್ತನೆಯ ತರಗತಿವರೆಗಿನ ಪಠ್ಯ ಪುಸ್ತಕಗಳ ರಚನಾಕಾರ್ಯದಲ್ಲಿ ತೊಡಗಿದೆ. ೨೦೦೫ ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.

- ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸುವುದು.
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು.
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು.
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು.
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು.

• ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು.
• ವಿಷಯಗಳ ಮೇರೆಗಳನ್ನು ಮುರಿದು ಅವುಗಳ ಸಮಗ್ರ ದೃಷ್ಟಿಯ ಬೋಧನೆಯನ್ನು ಅಳವಡಿಸುವುದು.
• ಶಾಲೆಯ ಹೊರಬದುಕಿಗೆ ಜ್ಞಾನಸಂಯೋಜನೆ .
• ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿಪಡಿಸುವುದು.

ನೂತನ ಪಠ್ಯಪುಸ್ತಕಗಳನ್ನು ಅಂತರ್ಗತ ವಿಧಾನ, ರಚನಾತ್ಮಕ ವಿಧಾನ ಹಾಗೂ ಸುರುಳಿಯಾಕಾರದ ವಿಧಾನಗಳ ಆಧಾರದ ಮೇಲೆ ರಚಿಸಲಾಗಿದೆ.

ಪಠ್ಯ ಪುಸ್ತಕಗಳಲ್ಲಿರುವ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯ ಪಸ್ತಕಗಳೊಂದಿಗೆ ಅತ್ಯಂತ ಅವಶ್ಯಕ ಭಾರತೀಯ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾಪೂರಕ ದೃಷ್ಟಿಯಿಂದ ರಚಿತವಾಗಿಲ್ಲ, ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿದೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥ ಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾ ಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರ ಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು ನೀಡಲಾಗಿದೆ. ಈ ಕೌಶಲಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆ ಹಾಗೂ ಮಕ್ಕಳ ಅಭ್ಯಾಸ ಪುಸ್ತಕಗಳಲ್ಲಿ ಅನೇಕ ಚಟುವಟಿಕೆಗಳನ್ನು ಮಕ್ಕಳಿಂದ ಮಾಡಿಸಿ ಅವರಲ್ಲಿ ಸಂಬಂಧಪಟ್ಟ ಸಾಮರ್ಥ್ಯ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾಕೌಶಲಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗೂ ಸಂವಹನ ಕೌಶಲಗಳ ಸಂವರ್ಧನೆಯೇ ಕಲಿಕೆಯ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ವೃದ್ಧಿ ಮಾಡುತ್ತದೆ. ಪ್ರತಿ ಘಟಕದಲ್ಲಿಯೂ ಕೆಲವು ಜೀವನ

ಮೌಲ್ಯಗಳನ್ನು ಅಂತರ್ಗತವಾಗಿ ಜೋಡಿಸಲಾಗಿದೆ. ಅವುಗಳನ್ನು ಮಕ್ಕಳೇ ಕಂಡುಹಿಡಿದು, ಚರ್ಚಿಸಿ ಜೀವನದಲ್ಲಿ ಅವುಗಳ ಅರಿವನ್ನುಂಟುಮಾಡಿಕೊಳ್ಳುವಂತೆ ಮಾಡಬೇಕು"[೬].ಎಂದು ಪಠ್ಯಪುಸ್ತಕದ ಮುನ್ನುಡಿಯಲ್ಲಿ ಹೇಳಲಾಗಿದೆ.

### ೩.೬.೨ ಪಠ್ಯ ಓದು ಹಾಗೂ ಬೋಧನೆಗೆ ಮುನ್ನ ಬೋಧಕರೊಂದಿಗೆ ಸಮಾಲೋಚನೆ.........

**"ಸಿರಿಗನ್ನಡ-೮"** ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರಾದ ಡಾ.ಸಿ.ಎಸ್. ರಾಮಚಂದ್ರರವರು **"ಪಠ್ಯ ಓದು ಹಾಗೂ ಬೋಧನೆಗೆ ಮುನ್ನ ಬೋಧಕರೊಂದಿಗೆ ಸಮಾಲೋಚನೆ"** ಎಂಬ ಶೀರ್ಷಿಕೆಯಡಿ ಹಲವು ವಿಚಾರಗಳನ್ನು ತಿಳಿಸಿದ್ದಾರೆ. ಪ್ರೌಢಶಿಕ್ಷಣದಲ್ಲಿ ಕನ್ನಡ ಪಠ್ಯಪುಸ್ತಕಗಳ ಅಧ್ಯಯನದ ವಿಚಾರವಾದ್ದರಿಂದ ಅಧ್ಯಕ್ಷರ ಮಾತುಗಳನ್ನೂ ಕೂಡ ಯಥಾವತ್ತಾಗಿ ಸ್ವೀಕರಿಸಿದೆ. "ನಾವಿಂದು ನಾಗರಿಕ, ಹಾಗೂ ಜಾಗತಿಕ ಮೇಲಾಟದಲ್ಲಿದ್ದೇವೆ. ಪ್ರತಿಯೊಂದು ಭೌತಿಕ ಹಾಗೂ ಬೌದ್ಧಿಕ ಆಯಾಮದಲ್ಲೂ ಹೊಸ ಹೊಸ ಶೈಕ್ಷಣಿಕ ಶೋಧನೆ, ಚಿಂತನಾ ಆವಿಷ್ಕಾರ, ಕಲಿಕಾ ತಂತ್ರಗಾರಿಕೆ ಮತ್ತು ವೈಜ್ಞಾನಿಕ ಮನೋಭಾವವನ್ನು ಸ್ಥಿರೀಕರಿಸುವ ವಾಸ್ತವಿಕ ಪ್ರಯತ್ನಗಳು ನಾಡಿನ ಉದ್ದಗಲಕ್ಕೂ ನಡೆಯುತ್ತಿವೆ. ಪ್ರಸ್ತುತ ಸಂದರ್ಭ, ಸ್ಥಿತಿಗತಿಯನ್ನು ಮನಗಂಡ ಶಿಕ್ಷಣತಜ್ಞರು, ಮನೋವಿಜ್ಞಾನಿಗಳು, ಸಾಹಿತ್ಯ ವಿದ್ವಾಂಸರು ಹಾಗೂ ಅಂತಾಶಿಸ್ತೀಯ ಮೇಧಾವಿಗಳು ಕಲೆತು ಆಯೋಜಿಸಿದ ನಿರ್ದಿಷ್ಟ ನಿಯೋಜನಾ ಫಲವೇ ಹೊಸ ಪಠ್ಯ ತಯಾರಿ ಹಾಗೂ ಅನುಷ್ಠಾನತೆ.

ಕಲಿಕಾರ್ಥಿಗಳ ಶೈಕ್ಷಣಿಕ ಜೀವನದಲ್ಲಿ ತಾಯ್ನುಡಿಯ ಕಲಿಕೆ ಅದರ ಬಳಕೆ ಮಹತ್ವದ್ದು. ಅದಕ್ಕೆ ಪೂರಕವಾಗಿ ಶಿಕ್ಷಣ ಇಲಾಖೆ ನಿಗದಿಪಡಿಸುವ ಬೋಧನಾಪಠ್ಯ ಅಗತ್ಯ ಹಾಗೂ ಅನಿವಾರ್ಯ. ಸಾಮಾನ್ಯವಾಗಿ ಮಕ್ಕಳ ಪರಿಸರದ ಮಾತು ನಿತ್ಯದ ಪರಸ್ಪರ ಸಂವಹನ ಸಂಪರ್ಕವಷ್ಟೇ ಅಲ್ಲದೆ ಜ್ಞಾನಾರ್ಜನೆಯ ಉದ್ದೇಶವೂ ಅದರದು. ಮಕ್ಕಳು ತಮ್ಮ ನುಡಿಯಲ್ಲೇ ಶಾಲಾಮಟ್ಟದ ಭಾಷಿಕ ಸಾಮರ್ಥ್ಯವನ್ನು ಆರ್ಜಿಸಿಕೊಳ್ಳುತ್ತಾ ಶೈಕ್ಷಣಿಕ ಸಾರ್ಥಕತೆಗೆ ತಮ್ಮನ್ನು ತೆರೆದುಕೊಳ್ಳುವ ಆಶಯದಿಂದ ಔಪಚಾರಿಕ ನೆಲೆಯಲ್ಲಿ ಕಲಿಕಾ ಹಾಗೂ ಬೋಧನಾ ಪಠ್ಯವಿದು. ಕಲಿಕೆಯ ಮೂಲಭೂತ ಕೌಶಲಗಳ ವೈಜ್ಞಾನಿಕ ದೃಢತ್ವವೇ ಇವುಗಳ ಆಂತರ್ಯ ದನಿ.

ಕಲಿಕೆ ಹಾಗೂ ಕಲಿಸುವಿಕೆಯ ನಿರ್ಧಾರಿತ ವಿಧಾನ ಮತ್ತು ಮೌಲ್ಯವನ್ನು ಸಾರ್ವತ್ರಿಕ ಶೈಕ್ಷಣಿಕ ನೆಲೆಯಲ್ಲಿ ಮೌಲೀಕರಿಸುವ ಉದ್ದೇಶದಿಂದ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಗೆ ಬದ್ಧವಾಗಿ, ಅಂತೆಯೇ ೨೦೦೧-೨೦೦೨ ಶೈಕ್ಷಣಿಕ ಆಧುನಿಕತೆಗೆ ಪೂರಕವಾಗಿ ಪಠ್ಯಪುಸ್ತಕಗಳು ಶೋಧವಾದವು. ಮಕ್ಕಳ ಮಾನಸಿಕ ವಲಯಕ್ಕೆ ಸರಿಹೊದುವಂತೆ

ಸಾಮರ್ಥ್ಯಾಧಾರದಿಂದ ಪರಿಷ್ಕಾರವಾಗಿ ಕಾಲಧರ್ಮದ ಶೈಕ್ಷಣಿಕತೆಗೆ ಸಮರ್ಪಕವಾದವು. ಹಾಗಾಗಿಯೂ ಇಂದಿನ ಶೈಕ್ಷಣಿಕ ಆಶೋತ್ತರ, ೨೦೦೫ –ಎನ್.ಸಿ.ಎಫ್. ನೆಲೆಯಾಧಾರಿತ ಆನ್ವಯಿಕ ಶೋಧನಾ ಚಿಂತನೆಗಳನ್ನು ಗಂಭೀರವಾಗಿ ಗಮನಿಸುವುದು ಹಿತಕರ. ಇದು ಸುಶಿಕ್ಷಿತ ವ್ಯಕ್ತಿತ್ವ ವಿಕಸನಕ್ಕೆ ನಾಂದಿ.

ಪಠ್ಯಪುಸ್ತಕದಲ್ಲಿ ಕಲಿಕೆ ಮತ್ತು ಬೋಧನಾಂಶಗಳನ್ನು ಸಮಾನ ರೀತ್ಯಾ ಪರಿಗಣಿಸಿ ಯುಕ್ತ ಕಲಿಕಾ ಪ್ರಾಯೋಗಿಕತೆಯ ಮೂಲಕ ಸಮನ್ವಯಗೊಳಿಸಿ, ಭಾಷಾ ಕಲಿಕೆ ಮತ್ತು ಜ್ಞಾನ ಸಂವರ್ಧನೆಗೆ ಅವಕಾಶ ಮಾಡಿಕೊಡಬೇಕು. ಆ ನೆಲೆಯಲ್ಲಿ ಸಿರಿ ಕನ್ನಡ–೮ ಸಮರ್ಥನೀಯ. ಇತ್ತೀಚಿನ ಕಲಿಕೆಯ ಎಲ್ಲಾ ಸಾಧಕ–ಬಾಧಕಗಳನ್ನು ತಾರ್ಕಿಕ ರೀತ್ಯಾ ಅಳವಡಿಸಿದೆ. ಮುಖ್ಯವಾಗಿ ತರಗತಿವಾರು ಕಲಿಕೆಯ ಮೂಲ ವಿಷಯ ಮತ್ತು ನಿರ್ಧರಿಸಿದ ಮಾನವೀಯ ಮೌಲ್ಯಗಳನ್ನು ಪರಿಗಣಿಸಿದೆ. ಭಾಷಾ ಸಾಮರ್ಥ್ಯಗಳನ್ನು ಕ್ಷೇತ್ರಗಳಿಗನುಗುಣವಾಗಿ ಅನ್ವಯಿಸಿ ಸಮರ್ಥ ಕಲಿಕೆಗೆ ಅನುವಾಗುವಂತೆ ಪಠ್ಯದ ಗದ್ಯ–ಪದ್ಯ ಪಾಠಗಳಲ್ಲಿ ಅಳವಡಿಸಿದೆ. ಸಾಮಾಜಿಕ, ಸಾಂಸ್ಕೃತಿಕ, ಪ್ರಾದೇಶಿಕ ಮತ್ತು ಲಿಂಗ ಸಮಾನತೆಯನ್ನು ಕಾಯ್ದುಕೊಂಡಿದೆ. ಇಲ್ಲಿನ ಪಾಠಗಳೆಲ್ಲವೂ ಸ್ವ ಕಲಿಕೆ ಹಾಗೂ ಬೋಧನಾ ಕೌಶಲಕ್ಕೆ ಸೂಕ್ತವಾಗಿವೆ. ಕಲಿಕಾರ್ಥಿಗಳ ಆಸಕ್ತಿ ಮತ್ತು ಉಲ್ಲಾಸವನ್ನು ಹೆಚ್ಚಿಸುವ ಉದ್ದೇಶದಿಂದ ರಚಿಸಿರುವ ಪಾಠಗಳಲ್ಲಿ ವೈವಿಧ್ಯ ಉಂಟು.

ಯೋಜಿತ ಕ್ರಿಯಾತ್ಮಕತೆಯ ಪಠ್ಯದ ಸಾರ್ಥಕತೆಗೆ ಸೂಕ್ತ ಆದ್ಯತೆಯನ್ನು ನೀಡುವುದರ ಹಿನ್ನೆಲೆಯಲ್ಲಿ ಪ್ರಸ್ತುತ ಬೋಧನೆ ಹಾಗು ಕಲಿಕೆಗೆ ಹೆಚ್ಚಿನ ಪ್ರೋತ್ಸಾಹ ಹಾಗೂ ಇಂಬುಕೊಡುವ ಪ್ರಾಯೋಗಿಕ ಹಾಗೂ ತಾತ್ವಿಕ ಪ್ರಯತ್ನ ಇಲ್ಲಿನದು. ಬೋಧನಾ ವಿಶೇಷತೆಯೊಂದಿಗೆ ಆಯ್ದು ನಿಗದಿಪಡಿಸಿದ ಸಾಹಿತ್ಯ ಪ್ರಕಾರದ ಭಾಗಗಳನ್ನು ಅರ್ಥೈಸಿಕೊಳ್ಳಲು ಸೈದ್ಧಾಂತಿಕ ಮತ್ತು ಪ್ರಾಯೋಗಿಕ, ಕ್ರಿಯಾತ್ಮಕ ಭಾಷಿಕ ಕ್ರಮಗಳನ್ನು ವ್ಯವಸ್ಥಿತವಾಗಿ ಅನ್ವಯಿಸಿದೆ. ಭಾಷಾಶುದ್ಧತೆ, ವಾಸ್ತವಿಕತೆ ಮತ್ತು ತರ್ಕಬದ್ಧತೆಯನ್ನು ಜತನದಿಂದ ಸ್ಥಿರೀಕರಿಸದೆ. ಕಲಿಕಾ ಮೂಲತತ್ವವನ್ನು ಸಮರ್ಪಕವಾಗಿ ಅನುಸರಿಸಿದೆ.

ಇಲ್ಲಿ ಮುಖ್ಯವಾಗಿ ಮಕ್ಕಳು ಕಲಿಕಾ ಪ್ರಾಯೋಗಿಕತೆಯನ್ನು ಸಮರ್ಥ ರೀತಿಯಲ್ಲಿ ಮೌಲೀಕರಿಸುವ ಉದ್ದೇಶದಿಂದ ಪಠ್ಯದಲ್ಲಿನ ನಿಗದಿತ ಕಲಿಕಾ ಗದ್ಯಪಾಠ ಮತ್ತು ಪದ್ಯಪಾಠಗಳ ಸ್ಪಷ್ಟ ಅರ್ಥೈಸುವಿಕೆಗೆ ಸಂಬಂಧಿಸಿದಂತೆ ಪ್ರಾಯೋಗಿಕ ವಸ್ತುನಿಷ್ಠ / ನಿಖರನಿರ್ಣಾಯ ಬಹುವಿಧದ ನಮೂನಾ ಪ್ರಶ್ನೆಗಳನ್ನು ನಿದರ್ಶನಾತ್ಮಕವಾಗಿ ಪಠ್ಯಪುಸ್ತಕದಲ್ಲಿ ನೀಡಿದೆ. ಅಲ್ಲದೆ ಕಲಿತ ಪಾಠದ ಸಾರ ನಿರ್ಣಾಯಕತೆಯನ್ನು ಬಹುವಿಧದಿಂದ ಪರೀಕ್ಷಿಸಿ ಕಲಿಕಾರ್ಥಿಯ ಜ್ಞಾನ ಸಂವರ್ಧನೆಗೆ ಅವಕಾಶ ಮಾಡಿಕೊಡುವ ಉದ್ದೇಶದಿಂದ ಒಂದೆರಡು ಮಾದರಿಗಳನ್ನಷ್ಟೇ ಕೊಟ್ಟಿದೆ. ಇದರಿಂದ ಸ್ವಸಾಮರ್ಥ್ಯ, ಸ್ವಪ್ರಯೋಗಶೀಲ, ಸ್ವಸೃಜನಶೀಲ, ಸ್ವಸಂವಹನಶೀಲ ಗುಣಗಳು ಸಹಜವಾಗಿ ಹೆಚ್ಚುತ್ತವೆ. ಭಾಷಾ ಹಾಗೂ ಜ್ಞಾನ ಗ್ರಹಿಕೆಗೆ ಸಂಬಂಧಿಸಿದ ಇನ್ನೂ ಹೆಚ್ಚಿನ ಸೂಕ್ತ ಅಭ್ಯಾಸ, ಭಾಷಾಭ್ಯಾಸ ಮತ್ತು ಚಟುವಟಿಕಾ

ಮಾದರಿಗಳನ್ನು ಅಳವಡಿಸಿಕೊಳ್ಳುವ ಜವಾಬ್ದಾರಿ ಸ್ವಾತಂತ್ರ್ಯ ಬೋಧಕರದು ಆಗಿರುತ್ತದೆ. ಅದಕ್ಕೆ ಅಭ್ಯಾಸ/ಚಟುವಟಿಕೇತರ ನಮೂನೆಗಳನ್ನು ನೀಡಿರುವುದಿಲ್ಲ.

ಶಿಕ್ಷಕರ ಬೋಧನಾ ಸಂಪನ್ಮೂಲ ವಿವರವನ್ನು ಬೋಧಕರಿಗೆ ಪ್ರತ್ಯೇಕಿಸದೆ ಪಠ್ಯದಲ್ಲೇ ಸಹಸಂಬಂಧಿ ರೀತಿಯಲ್ಲಿ ಸಂಕ್ಷಿಪ್ತವಾಗಿ ನೀಡಿದೆ. ಸಾಹಿತ್ಯ ಪ್ರಕಾರ, ಭಾಷಾ ಕ್ರಿಯಾತ್ಮಕ ವಿಚಾರ, ಕನ್ನಡ ಭಾಷಾ ಅವಸ್ಥಾ ಘಟಕಾಂಶ, ಬೋಧನಾ ಆಶಯ ಸಂಬಂಧಿತ ಮಾಹಿತಿ ಇತ್ಯಾದಿಗಳನ್ನು ಸಂಕ್ಷಿಪ್ತ ರೀತಿಯಲ್ಲಿ ಒದಗಿಸುವ ಪ್ರಯತ್ನ ಮಾಡಿದೆ.

ನಿಗದಿತ ಮೂಲಪಾಠವನ್ನು ಅರ್ಥೈಸುವ ಅನುಕ್ರಮಣಿಕೆ ಇಂತಿದೆ. ಅರ್ಥೈಸಿ–ಓದಿ, ಕರ್ತೃ–ಭಾವ–ಆಕರ, ಪದ–ಗದ್ಯ/ಪದ್ಯ–ಅರ್ಥ, ಪಠ್ಯಾಧಾರಟಿಪ್ಪಣಿ, ಕಲಿತಪಠ್ಯದ ಅಭ್ಯಾಸ, ಭಾಷಾಭ್ಯಾಸ, ಪ್ರಾಯೋಗಿಕ ಅಭ್ಯಾಸ ಇತ್ಯಾದಿ ಪಠ್ಯದ ಒಳತೋಟಿಗಳು. ಪಠ್ಯಸಾರವನ್ನು ಕಲಿಕಾರ್ಥಿಗಳು ಸುಲಭವಾಗಿ ಅರ್ಥೈಸಿಕೊಳ್ಳುವ ದೃಷ್ಟಿಯಿಂದ ನಿಗದಿತ ಪಾಠದ ಬೋಧನಾ ವಿನ್ಯಾಸವನ್ನು ಹೊಸ ಬೋಧನಾ ವಿಧಾನ ಮತ್ತು ಬೋಧನಾ ವಿಶ್ಲೇಷಣಾ ವಿಧಾನದ ಅಡಿಯಲ್ಲಿ ಪ್ರಸ್ತಾಪಿಸಿದೆ. ಕಲಿಕೆಯ ಮುನ್ನ ಅರ್ಥೈಸಿ–ಓದಿ ಶೀರ್ಷಿಕೆಯಲ್ಲಿ ಗದ್ಯ/ಪದ್ಯದ ಕೆಲವು ವಿಶೇಷ ಪರಿಕಲ್ಪನಾ ಪದಗಳನ್ನು ಓದುವ ಸಲುವಾಗಿ ನೀಡಿದೆ. ಮುಖ್ಯವಾಗಿ ಓದುವಿಕೆಯನ್ನು ಖಚಿತಪಡಿಸುವ ಉದ್ದೇಶವೇ ಇದರದು. ಕಲಿತ ಪಾಠದ ಅಭ್ಯಾಸ ಭಾಗದಲ್ಲಿರುವ ಪ್ರಶ್ನೆಗಳು ಕಲಿಕಾರ್ಥಿಗಳು ಕಲಿಕೆಯಲ್ಲಿ ಸಾಮರ್ಥ್ಯ ಗಳಿಸುವುದಕ್ಕಾಗಿಯೇ ಹೊರತು ಪರೀಕ್ಷೆಯ ಪ್ರಶ್ನೆಪತ್ರಿಕೆಯ ತಯಾರಿಕೆಗಾಗಿ ಅಲ್ಲ. ಇದೇ ಪ್ರಶ್ನೆಗಳನ್ನು ಪರೀಕ್ಷೆಯಲ್ಲಿ ಮೌಲ್ಯಮಾಪನಕ್ಕಾಗಿ ಕೇಳಲೇಬೇಕೆಂಬ ನಿರ್ಬಂಧವಿಲ್ಲ. ಇಲ್ಲಿ ಒಂದು/ಎರಡು/ಮೂರು/ನಾಲ್ಕು/ಐದು..........ಹತ್ತು ವಾಕ್ಯಗಳಲ್ಲಿ ಉತ್ತರಿಸುವ ಪ್ರಶ್ನೆಗಳನ್ನು ಕೇಳಲಾಗಿದೆ. ಇದು ವಿಷಯ ಗ್ರಹಣದ ಸಲುವಾಗಿಯೇ ಹೊರತು ಪರೀಕ್ಷಾ ಮೌಲ್ಯಮಾಪನದ ಮಾದರಿಗಾಗಿ ಅಲ್ಲ. ಅಂತೆಯೇ ವಸ್ತುನಿಷ್ಠ ನಿರ್ಣಾಯಕ ಪ್ರಶ್ನೆಗಳು ಕಲಿಕಾರ್ಥಿಯ ನಿರ್ದಿಷ್ಟ ಸಾಮರ್ಥ್ಯಕ್ಕೆ ಸಂಬಂಧಿಸಿದ್ದಾಗಿದೆ. ಒಟ್ಟಿನಲ್ಲಿ ಶೈಕ್ಷಣಿಕ ಸಾರೋದ್ದೇಶದ ಪ್ರಣಾಳಿಕೆ ಇದು"[೭]. ಎಂದು ನೂತನ ಪಠ್ಯದಲ್ಲಿ ಶಿಕ್ಷಕರೊಂದಿಗೆ ಸಮಾಲೋಚನೆಯನ್ನು ಮಾಡಲಾಗಿದೆ.

### ೩.೬.೩ ಪರಿವಿಡಿ

**ನೂತನ ಪಠ್ಯದ ಪರಿವಿಡಿಯಲ್ಲಿ ಎರಡು ಭಾಗಗಳನ್ನು ಮಾಡಲಾಗಿದ್ದು**

1. ಪಠ್ಯ ಪ್ರಧಾನ ಅಧ್ಯಯನ
2. ಪಠ್ಯ ಪೋಷಕ ಅಧ್ಯಯನ ಎಂಬ ಎರಡು ವಿಭಾಗಗಳನ್ನು ಮಾಡಿಕೊಳ್ಳಲಾಗಿದೆ.

**ಭಾಗ-೧, ಪಠ್ಯ ಪ್ರಧಾನ ಅಧ್ಯಯನ**

ಪಠ್ಯ ಪ್ರಧಾನ ಅಧ್ಯಯನದಲ್ಲಿ ಗದ್ಯಪಾಠ ಹಾಗು ಪದ್ಯಪಾಠ ಎಂಬ ಎರಡು ವಿಭಾಗಗಳನ್ನು ಮಾಡಿಕೊಳ್ಳಲಾಗಿದೆ.

ಗದ್ಯಪಾಠದಲ್ಲಿ ಒಟ್ಟು ೮ ಪಾಠಗಳಿವೆ. ಇವುಗಳಲ್ಲಿ ಸಣ್ಣಕತೆ, ವೈಜ್ಞಾನಿಕ ಲೇಖನ, ಪ್ರವಾಸ ಕಥನ, ವ್ಯಕ್ತಿಚಿತ್ರ, ಜನಪದಕತೆ, ನಾಟಕ, ಲಲಿತ ಪ್ರಬಂಧ ಹಾಗೂ ಹಳಗನ್ನಡ ಸಾಹಿತ್ಯ ಪ್ರಕಾರಗಳ ಪಾಠಗಳನ್ನು ಪರಿಚಯಿಸಲಾಗಿದೆ. ಬಾಗಲೋಡಿ ದೇವರಾಯ, ಕೃಷ್ಣಾನಂದ ಕಾಮತ್, ಹಿರೇಮಲ್ಲೂರು ಈಶ್ವರನ್, ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟ, ಡಿ.ಕೆ.ರಾಜೇಂದ್ರ, ಎಚ್.ಎಸ್.ವೆಂಕಟೇಶಮೂರ್ತಿ, ಕುವೆಂಪು, ಹಾಗೂ ಮುದ್ದಣರ ಕೃತಿಗಳ ಭಾಗಗಳನ್ನು ಆಯ್ದುಕೊಳ್ಳಲಾಗಿದೆ.

ಪದ್ಯಪಾಠದಲ್ಲಿ ಒಟ್ಟು ೮ ಪದ್ಯಗಳಿವೆ. ಇವುಗಳಲ್ಲಿ ನವೋದಯ, ಆಧುನಿಕ, ದಲಿತ/ಬಂಡಾಯ, ವಚನ, ಸರ್ವಜ್ಞನ ವಚನ, ದಾಸರ ಪದ, ನಡುಗನ್ನಡ ಪ್ರಕಾರಗಳನ್ನು ಪರಿಚಯಿಸಲಾಗಿದೆ. ರಾಷ್ಟ್ರಕವಿ ಎಂ. ಗೋವಿಂದ ಪೈ, ಕೆ.ಎಸ್.ನರಸಿಂಹಸ್ವಾಮಿ, ಚೆನ್ನವೀರ ಕಣವಿ, ಬಿ.ಟಿ.ಲಲಿತಾ ನಾಯಕ್, ಅಕ್ಕಮಹಾದೇವಿ, ಅಮುಗೆರಾಯಮ್ಮ, ಆಯ್ದಕ್ಕಿಲಕ್ಕಮ್ಮ, ಸರ್ವಜ್ಞ, ಶ್ರೀಪಾದರಾಜ, ಪುರಂದರದಾಸ, ಕನಕದಾಸ ಹಾಗೂ ಕುಮಾರವಾಲ್ಮೀಕಿ ಇವರುಗಳ ಕೃತಿಯಿಂದಾಯ್ದ ಭಾಗಗಳನ್ನು ಪದ್ಯಪಾಠದಲ್ಲಿ ಅಳವಡಿಸಲಾಗಿದೆ.

**ಭಾಗ-೨ , ಪಠ್ಯ ಪೋಷಕ ಅಧ್ಯಯನ ಎಂಬ ವಿಭಾಗದಲ್ಲಿ**

- ಡಾ. ಮಹಾಬಲೇಶ್ವರ ರಾವ್‌ರವರು ಅನುವಾದಿಸಿರುವ ಡಾ.ಬಿ.ಎಂ ಹೆಗ್ಡೆಯವರ 'ನಮ್ಮ ಹೃದಯ ನಮ್ಮ ಕೈಯಲ್ಲಿ' ಎಂಬ ಆರೋಗ್ಯ ಸಂಬಂಧೀ ಲೇಖನವಿದೆ. ಇದು ವೈದ್ಯಕೀಯ ಗದ್ಯವಾಗಿದ್ದು ಊಟ-ಉಪಾಹಾರ, ಮದ್ಯಪಾನ-ಧೂಮಪಾನ, ವ್ಯಾಯಾಮ, ಒತ್ತಡ, ನಿದ್ರೆ ಈ ಮೊದಲಾದ ವಿಚಾರಗಳಿವೆ.
- ಕವಿ ದಿನಕರ ದೇಸಾಯಿಯವರ 'ಸಾರ್ಥಕ' (ನನ್ನ ದೇಹದ ಬೂದಿ – ಗಾಳಿಯಲಿ ತೂರಿಬಿಡಿ) ಕವಿತೆಯನ್ನು ನೀಡಲಾಗಿದೆ.
- ಪಾರಂಪಳ್ಳಿ ಶ್ರೀ ನರಸಿಂಹ ಐತಾಳರ ಪೌರಾಣಿಕ ನಾಟಕ 'ಭೂಕೈಲಾಸ' ವನ್ನು ನೀಡಲಾಗಿದೆ.
- ಪಠ್ಯ ಪುಸ್ತಕ ಸಮಿತಿಯು ಸಂಗ್ರಹಿಸಿದ 'ಸಿಂಧೂ ಸಂಸ್ಕೃತಿ' (ಸಂಪನ್ಮೂಲತೆ: ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಾ.ಎಚ್.ತಿಪ್ಪೇರುದ್ರಸ್ವಾಮಿ, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ ಮೈಸೂರು, ೪ನೆಯ ಮುದ್ರಣ, ೧೯೯೨)ಎಂಬ ಲೇಖನವನ್ನು ನೀಡಲಾಗಿದೆ. ಪ್ರಸ್ತುತ ಲೇಖನದಲ್ಲಿ ಭಾರತೀಯ ಸಂಸ್ಕೃತಿಯ ಪ್ರಾಚೀನತೆಯನ್ನು, ಸಿಂಧೂ ಸಂಸ್ಕೃತಿಯ ಜೀವನಪದ್ಧತಿಯನ್ನೂ ವಿವರಿಸಲಾಗಿದೆ.

### ೩.೬.೪ ಪಠ್ಯದ ಗದ್ಯಭಾಗದ ಭಾವ

**ಪಾಠ ೧**. ಧಾರ್ಮಿಕ ಸಹಿಷ್ಣುತೆ, ಗುಡಿ ಕೈಗಾರಿಕೆಗಳ ವಿನಾಶಕ್ಕೆ ಕಾರಣವಾದ ಅಂಶ, ಶಾಲೆಗಳಲ್ಲಿ ಔದ್ಯೋಗಿಕ ಶಿಕ್ಷಣ, ಮಕ್ಕಳ ಆಸಕ್ತಿಗೆ ಪೂರಕವಾದ ಶಿಕ್ಷಣ ನೀಡುವುದು, ಸ್ವಯಂ ಉದ್ಯೋಗಕ್ಕೆ ಪ್ರೇರಣೆ ಮೊದಲಾದ ಮಹತ್ವದ ಅಂಶಗಳನ್ನು ಒಳಗೊಂಡಿದೆ.

**ಪಾಠ ೨**. ಪ್ರಕೃತಿ ಒಂದು ಅದ್ಭುತ ಸೃಷ್ಟಿ. ಇಲ್ಲಿ ಪ್ರಾಣಿ ಪಕ್ಷಿಗಳು ಬದುಕಿಗಾಗಿ ಇತರ ಪ್ರಾಣಿ ಪಕ್ಷಿಗಳೊಂದಿಗೆ ಹೋರಾಟ ನಡೆಸಿ ಶಕ್ತಿಯುತವಾದವು ಉಳಿಯುತ್ತವೆ, ದುರ್ಬಲ ಪ್ರಾಣಿಗಳು ನಶಿಸಿಹೋಗುತ್ತವೆ. ಬದುಕುಳಿದ ಪ್ರಾಣಿ ಪಕ್ಷಿಗಳನ್ನು ಮಾನವ ದುರಾಸೆ, ಮೋಜು ಅಥವಾ ಹೊಟ್ಟೆಪಾಡಿಗಾಗಿ ನಾಶಮಾಡುತ್ತಿದ್ದಾನೆ. ಜನಸಂಖ್ಯಾ ಏರಿಕೆ , ಕೈಗಾರಿಕೀಕರಣ, ನಗರೀಕರಣ, ಆಧುನೀಕರಣಗಳ ಭರಾಟೆಯಲ್ಲಿ ಸುಂದರ ಸಸ್ಯ, ಪ್ರಾಣಿ, ಪಕ್ಷಿ ಸಂಕುಲಗಳು ನಶಿಸಿ ಹೋಗುತ್ತಿವೆ. ನಾವೂ ಬದುಕಿ ಇತರರನ್ನೂ ಬದುಕಲು ಬಿಡಬೇಕು, ನಾಳಿನ ಸುಂದರ ಬದುಕನ್ನು ಮುಂದಿನ ಪೀಳಿಗೆ ಕಾಣಬೇಕೆಂಬುದು ಇಲ್ಲಿಯ ಸದಾಶಯ.

**ಪಾಠ ೩**. ಪ್ರವಾಸಿಗರ, ಯಾತ್ರಾರ್ಥಿಗಳ, ವಾಸ್ತುತಜ್ಞರ ಕೇಂದ್ರ ಬಿಂದುವಾದ ತಲಕಾಡಿನ ಚಿತ್ರವನ್ನು ನೀಡುವುದು.

**ಪಾಠ ೪**. ಕನ್ನಡನಾಡು ರಸ ಋಷಿಗಳ ಬೀಡು. ಸಾಧು–ಸತ್ಪುರುಷರ ನೆಲೆವೀಡು. ಕನ್ನಡ ನಾಡಿನಲ್ಲಿ ಹಲವಾರು ಸತ್ಪುರುಷರು ಜನಿಸಿ, ತ್ಯಾಗ ಜೀವನ ನಡೆಸಿ ಇತರರಿಗೆ ಆದರ್ಶಪ್ರಾಯರಾಗಿದ್ದಾರೆ. ಇಂತಹ ಋಷಿಪ್ರಾಯರಲ್ಲಿ ಒಬ್ಬರಾದ ಲೇಖಕ, ಪತ್ರಕರ್ತ, ಸಂಪಾದಕ, ಸಾಹಿತಿ ಮತ್ತು ರಾಜಕಾರಣಿಯಾಗಿ, ಎಲ್ಲದಕ್ಕೂ ಮಿಗಿಲಾಗಿ ಲೌಕಿಕ ಆಸೆ ಆಮಿಷಗಳಿಗೆ ಒಳಗಾಗದೆ ಮೇರು ವ್ಯಕ್ತಿತ್ವದ ಆದರ್ಶ ವ್ಯಕ್ತಿಯಾಗಿ ಬಾಳಿ ಬದುಕಿದವರು ಡಾ.ಡಿ.ವಿ.ಗುಂಡಪ್ಪನವರು. ತನಗಾಗಿ ಯಾವುದೇ ಹಣ ಆಸ್ತಿ ಮುಂತಾದವುಗಳನ್ನು ಗಳಿಸದೆ ಸದಾ ಸಮಾಜಮುಖಿಯಾಗಿ, ಆದರ್ಶ ರಾಷ್ಟ್ರ ನಿರ್ಮಾಣಕ್ಕಾಗಿ ದಣಿಯದೇ ದುಡಿದವರು ಡಿ.ವಿ.ಜಿ. ಅವರ ಆದರ್ಶ ಜೀವನ ನಮ್ಮೆಲ್ಲರ ಬದುಕಿನ ಸೂತ್ರವಾಗಲಿ ಎಂಬ ಆಶಯ.

**ಪಾಠ ೫**. ಹೆಣ್ಣೊಬ್ಬಳು ತನ್ನ ಬುದ್ಧಿಸಾಮರ್ಥ್ಯದಿಂದ ರಾಜನೊಬ್ಬನನ್ನು ಮಣಿಸಿದ ರೀತಿ, ಆಕೆಯ ಛಲ, ಬುದ್ಧಿವಂತಿಕೆ, ಭ್ರಾತೃಪ್ರೇಮ ಹಾಗೂ ಶತ್ರು ರಾಜ ರೂಪಿಸಿದ ಎಲ್ಲ ಸವಾಲುಗಳಿಗೂ ದಿಟ್ಟ ಉತ್ತರ ನೀಡುವ ಹೆಣ್ಣಿನ ಕಾರ್ಯಸಾಧನೆಯನ್ನು ಜಾನಪದ ಕಥೆಯ ಮೂಲಕ ತಿಳಿಸುವುದು.

**ಪಾಠ ೬**. ಪೌರಾಣಿಕ ಪಾತ್ರವಾದ ಕಂಸ ಅಧಿಕಾರಶಾಹೀ ವ್ಯಕ್ತಿತ್ವದ ಒಂದು ಸಂಕೇತ. ಅಧಿಕಾರಕ್ಕಾಗಿ ಅರಮನೆಗಳಲ್ಲಿ ನಡೆಯುವ ಕಾರಸ್ಥಾನಗಳು, ಅಧಿಕಾರಸ್ಥರ ಆತಂಕ, ತಲ್ಲಣ, ಭಯಗಳು ನಿಚ್ಚಳವಾಗಿ ವ್ಯಕ್ತವಾಗಿವೆ. ಅಧಿಕಾರಲಾಲಸೆ, ಅಂತಸ್ತಿಗಾಗಿ ರಕ್ತಸಂಬಂಧವನ್ನೇ

ಕಡಿದುಕೊಳ್ಳುವ ಸ್ವಭಾವವನ್ನಿಲ್ಲಿ ಕಾಣಬಹುದು. ನಾಟಕದ ಸಂಭಾಷಣೆಯ ಮೊನಚು ವ್ಯಂಗ್ಯಭರಿತ ಹಾಸ್ಯ ಓದುಗರ ಮನಸೆಳೆಯುವುದು ಇಲ್ಲಿನ ಉದ್ದೇಶ.

**ಪಾಠ ೭.** ಭಾರತೀಯ ಪರಂಪರೆಯಲ್ಲಿ ಎಣ್ಣೆ ಸ್ನಾನಕ್ಕೆ ತನ್ನದೇ ಆದ ವಿಶೇಷ ಮಹತ್ವವಿದೆ. ಸಂಸ್ಕೃತಿಯ ಭಾಗವಾಗಿ ಅನೂಚಾನವಾಗಿ ಬೆಳೆದು ಬಂದಿರುವ ಈ ಅಭ್ಯಂಜನಕ್ಕೆ ಭಾರತೀಯ ವೈದ್ಯ ಚಿಕಿತ್ಸೆ ಹಾಗೂ ಯೋಗ ಪರಂಪರೆಯಲ್ಲಿ ವಿಶೇಷ ಸ್ಥಾನವಿದೆ. ಮಲೆನಾಡಿನ ಗ್ರಾಮೀಣ ಬದುಕಿನ ಚಿತ್ರಣವನ್ನು ಪ್ರತಿಬಿಂಬಿಸುವುದು, ಒತ್ತಡ ಹಾಗೂ ಯಾಂತ್ರಿಕ ಜೀವನ ನಡೆಸುವ ಇಂದಿನ ದಿನಗಳಲ್ಲಿ ಅಭ್ಯಂಜನ ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಿದೆ ಎಂಬುದನ್ನೂ ತಿಳಿಸುವ ಆಶಯ.

**ಪಾಠ ೮.** ಎಷ್ಟೇಕಷ್ಟಗಳಿದ್ದರೂ, ಮನಸ್ಸನ್ನೇ ಸುಡುವ ಚಿಂತೆಗಳಿದ್ದರೂ ನವಿರಾದ ಹಾಸ್ಯ ಅವುಗಳನ್ನು ಸ್ವಲ್ಪಕಾಲ ಮರೆಯುವಂತೆ ಮಾಡುತ್ತದೆ. ನಗು ಮಾನವನನ್ನು ಗೆಲುವಿನ ಹಾದಿಗೆ ತರುವ ದಿವ್ಯೌಷಧ. ಸಪ್ತಾಕ್ಷರೀ ಮಂತ್ರದ ಶ್ರೇಷ್ಠತೆಯ ನೆಪದೊಂದಿಗೆ ತನ್ನ ಹಾಗು ಅಂದಿನ ಕವಿಗಳ ದಾರಿದ್ರ್ಯವನ್ನು ಪರೋಕ್ಷವಾಗಿ ಮುದ್ದಣ ವ್ಯಕ್ತಪಡಿಸಿದ ಪರಿಯನ್ನು ಅರಿಯುವ ಆಶಯ.

### ೩.೬.೫ ಪಠ್ಯದ ಪದ್ಯಭಾಗದ ಭಾವ

**ಪದ್ಯ ೧.** ಕನ್ನಡ ತಾಯಿ ತನ್ನ ಮುಖವನ್ನು ತೋರುವ ಮೂಲಕ ಕನ್ನಡದ ಮಕ್ಕಳನ್ನು ಒಂದಾಗಿಸಬೇಕು. ಕನ್ನಡ ನಾಡಿನಲ್ಲಿ ಎಲ್ಲಾ ಸಂಪತ್ತು ಇದೆ. ತಾಯಿಯ ಮುಖ ಕಂಡಾಗ ಅದೆಲ್ಲವೂ ಗೋಚರವಾಗುತ್ತವೆ. ಹೀಗೆ ಗೋಚರಿಸಿದಾಗ ಮಾತ್ರ ಕನ್ನಡ ತಾಯಿಯ ಕೀರ್ತಿ ಜಗತ್ತಿನಾದ್ಯಂತ ಪಸರಿಸಲು ಸಾಧ್ಯ. ಅದಕ್ಕಾಗಿ ಕನ್ನಡ ತಾಯಿ ಜನ್ಮದಾತೆಗೆ ಸಮನಾಗಿರುವುದರಿಂದ ಅವಳ ಹರಕೆ ಹಾರೈಕೆಗಳು ನಮಗೆ ಶ್ರೀರಕ್ಷೆ ಎಂಬ ಭಾವ.

**ಪದ್ಯ ೨.** ಭಾರತ ದೇಶದ ಪ್ರಾಕೃತಿಕ ಸೌಂದರ್ಯ, ಜನರ ಜೀವನ ಶೈಲಿ, ಸಾಂಸ್ಕೃತಿಕ ಪರಂಪರೆ, ಭಿನ್ನತೆಯಲ್ಲಿ ಏಕತಾಭಾವ, ದೇಶಭಕ್ತಿ, ತ್ಯಾಗ, ಪರೋಪಕಾರ ಬುದ್ಧಿ ಮುಂತಾದ ಉತ್ಕೃಷ್ಟ ಗುಣಗಳ ಬಗ್ಗೆ ನಾವು ತಿಳಿದುಕೊಳ್ಳಬೇಕು.

**ಪದ್ಯ ೩.** ಗೆಳೆತನ, ಅದರ ಸವಿ, ಮಹತ್ವ ಹಾಗೂ ಅನ್ಯೋನ್ಯತೆಯ ಬಗ್ಗೆ ತಾತ್ವಿಕ ನೆಲೆಯಲ್ಲಿ ಪ್ರಸ್ತಾವನೆ, ಗೆಳೆತನಕ್ಕಿರುವ ಪೌರಾಣಿಕ, ಐತಿಹಾಸಿಕ ಹಾಗೂ ಸಮಕಾಲೀನ ಬದುಕಿನಲ್ಲಿ ಮಿಗಿಲಾದ ಸ್ಥಾನವಿರುವ ಬಗ್ಗೆ ತಿಳಿಯುವುದು. ಆಧುನಿಕ ಪ್ರಪಂಚದಲ್ಲಿ ಗೆಳೆತನ ವೈಯಕ್ತಿಕ ನೆಲೆಯಿಂದ ವಿಶ್ವಸಾಮರಸ್ಯದ ನೆಲೆಗೆ ಧಾವಿಸುತ್ತಿರುವ ಸಂಧರ್ಭದ ಕುರಿತು ತಿಳಿಯುವುದು.

**ಪದ್ಯ ೪.** ಜಗತ್ತಿನ ತಲ್ಲಣಗಳನ್ನು ಮಲ್ಲಿಗೆ ಮತ್ತು ಕೋಗಿಲೆಯ ಸಂಭಾಷಣೆಯ ಮೂಲಕ ಗ್ರಹಿಸುವುದು. ಪ್ರಕೃತಿಯ ನೈಜತೆಗೆ ಮನುಷ್ಯನ ಸ್ವಾರ್ಥ ಹೇಗೆ ಧಕ್ಕೆಯಾಗುತ್ತಿದೆ, ಮಣ್ಣಿನ

ಗುಣವನ್ನು ಬಿಟ್ಟು ಭ್ರಮೆಯಲ್ಲಿ ಮುಳುಗಿರುವ ವ್ಯಕ್ತಿಯ ಬಗ್ಗೆ ಸುಪ್ತ ಪ್ರತಿಭಟನೆ, ಕೊನೆಯಲ್ಲಿ 'ಈ ಭೂಮಿ ಬರಡಲ್ಲ, ಅಮರ ಪ್ರೇಮದ ಒರತೆ' ಎಂಬುದನ್ನು ತಿಳಿಸುವ ಆಶಯ.

**ಪದ್ಯ ೫.** ಮನುಷ್ಯನಿಗೆ ಕಾಯಕವೇ ಮುಖ್ಯ. ಕಾಯಕದಲ್ಲೇ ಸರ್ವಸ್ವವನ್ನೂ ಕಾಣಬಹುದು. ಇದು ಶ್ರೇಷ್ಠ ಹಾಗೂ ಸಾರ್ವಕಾಲಿಕ ಸತ್ಯ. ಕರ್ತವ್ಯನಿಷ್ಠೆ ಹಾಗೂ ಬದ್ಧತೆಯನ್ನು ತಿಳಿಸುವ ಆಶಯ.

**ಪದ್ಯ ೬.** ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ ಎಂಬ ನೀತಿಯನ್ನು, ವಿದ್ಯೆಯ ಮಹತ್ವವನ್ನು, ಜ್ಞಾನಿ-ಅಜ್ಞಾನಿಗಳ ಒಡನಾಟವನ್ನೂ, ಆಹಾರವೇ ಆರೋಗ್ಯದ ಮೂಲ ಎಂಬುದನ್ನೂ ತಿಳಿಸುವ ಆಶಯ.

**ಪದ್ಯ ೭.** ಮಾನವನ ಜೀವನದ ಮುಖ್ಯ ಗುರಿ ಮುಕ್ತಿ ಸಂಪಾದನೆ. ಜೊತೆಗೆ ಆತ್ಮ ಶೋಧನೆ, ಭಗವಂತನ ಆರಾಧನೆ, ದ್ವೈತ ತತ್ವ ಪ್ರತಿಪಾದನೆ, ಲೋಕನೀತಿ, ನೀತಿಬೋಧೆಗಳನ್ನು ತಿಳಿಸುವುದು. ವ್ಯಕ್ತಿಗೆ ಕುಲ ಮುಖ್ಯವಲ್ಲ ಗುಣ ಮುಖ್ಯ, ಉತ್ತಮ ಗುಣವುಳ್ಳವರನ್ನು ಭಗವಂತನು ಉದ್ಧಾರ ಮಾಡುತ್ತಾನೆ, ಉತ್ತಮ ಗುಣಗಳನ್ನು ಹಾಗೂ ಮಾನವೀಯ ಮೌಲ್ಯಗಳನ್ನು ಬೆಳೆಸಿಕೊಳ್ಳಬೇಕು. ನಮ್ಮ ಕರ್ತವ್ಯಗಳನ್ನು ಫಲಾಪೇಕ್ಷೆಯಿಲ್ಲದೆ ಮಾಡಬೇಕು ಎಂಬ ನೀತಿಯನ್ನು ತಿಳಿಸುವ ಆಶಯ .

**ಪದ್ಯ ೮.** ಪಿತೃಋಣ ತೀರಿಸಬೇಕಾದುದು ಪ್ರತಿಯೊಬ್ಬರ ಕರ್ತವ್ಯ. ಭಾರತೀಯ ಸಂಸ್ಕೃತಿಯಲ್ಲಿ ತಾಯಿ-ತಂದೆಯರ ಋಣ ತೀರಿಸುವ ಕರ್ತವ್ಯಕ್ಕೆ ವಿಶೇಷ ಮನ್ನಣೆ ಇದೆ. ಅದರ ಅರಿವನ್ನು ಬೆಳೆಸುವ ಆಶಯ"[೮]. ಹೀಗೆ ಪ್ರತೀ ಪದ್ಯಗಳ ಕೊನೆಯಲ್ಲಿ ಆಯಾ ಪದ್ಯಗಳಿಗೆ ಸಂಬಂಧಿಸಿದಂತೆ ಕೆಲವು ಆಶಯಗಳನ್ನು ನೀಡಲಾಗಿದೆ.

### ೩.೬.೬ ಪದವಿಚಾರಗಳು

೮ನೆಯ ತರಗತಿಯ ಹೊಸ ಪಠ್ಯದಲ್ಲಿ ಅರ್ಥೈಸಿ ಓದಿ, ಪದ-ಗದ್ಯಾರ್ಥ, ಪಠ್ಯಾಧಾರಿತ ಟಿಪ್ಪಣಿ ಎಂಬ ಹೆಸರಿನಡಿ ವಿದ್ಯಾರ್ಥಿಗಳಿಗೆ ಹಲವು ಪದಗಳ ಪರಿಚಯವನ್ನು ಮಾಡಿಕೊಡಲಾಗಿದೆ. ಗದ್ಯಭಾಗದ ಅರ್ಥೈಸಿ ಓದಿ ವಿಭಾಗದಲ್ಲಿ ೮೧ ಪದಗಳಿವೆ. ಪದ ಗದ್ಯಾರ್ಥ ವಿಭಾಗದಲ್ಲಿ ೨೪೦ ಪದಗಳಿವೆ. ಪಠ್ಯಾಧಾರಿತ ಟಿಪ್ಪಣಿಯಲ್ಲಿ ೨೨ ಪದಗಳಿವೆ. ಪದ್ಯಭಾಗದ ಅರ್ಥೈಸಿ ಓದಿ ವಿಭಾಗದಲ್ಲಿ ೮೪ ಪದಗಳಿವೆ. ಪದ ಪದ್ಯಾರ್ಥ ವಿಭಾಗದಲ್ಲಿ ೨೦೦ ಪದಗಳಿವೆ. ಪಠ್ಯಾಧಾರಿತ ಟಿಪ್ಪಣಿಯಲ್ಲಿ ೨೦ ಪದಗಳಿವೆ.

### ೩.೬.೭ ಹೆಚ್ಚಿನ ಓದು

ಕಲಿಕೆಯ ಪ್ರಕ್ರಿಯೆಯಲ್ಲಿ ಓದುವಿಕೆ ಅತ್ಯಂತ ಮಹತ್ವದ ಅಂಶ. ಕಲಿಕೆಯ ಸ್ಥಿರೀಕರಣಕ್ಕೆ, ಭಾಷೆಯ ಫಲಪ್ರದ ಬೆಳವಣಿಗೆಗೆ ಓದು ಪೂರಕ ಹಾಗೂ ಪ್ರೇರಕ.

ತರಗತಿಯಲ್ಲಿ ಶಿಕ್ಷಕರಿಗೆ ಪ್ರತೀ ಪಾಠದ ಕುರಿತು ಹಾಗೂ ಪಾಠದ ಮೂಲ ಆಕರದ ಕುರಿತು ತರಗತಿಯಲ್ಲಿ ಸಂಪೂರ್ಣವಾದ ವಿವರಣೆಯನ್ನು, ಸಮಗ್ರವಾದ ಮಾಹಿತಿಯನ್ನು ನೀಡಲು ಸಾಧ್ಯವಿಲ್ಲ. ಮೂಲ ಆಕರವನ್ನು ಓದುವಂತೆ ಪ್ರೇರಣೆಯನ್ನು ನೀಡುವುದು ಶಿಕ್ಷಕರ ಜವಾಬ್ದಾರಿಯಾಗಿದೆ. ಮೂಲ ಆಕರದಿಂದ ಆಯ್ದ ಭಾಗವನ್ನು ತರಗತಿಯಲ್ಲಿ ವಿವರಿಸುವುದರೊಂದಿಗೆ ಮೂಲ ಆಕರದ ವಿಚಾರವಾಗಿ ಕೆಲವು ಉಪಯುಕ್ತ ಮಾಹಿತಿಯನ್ನು ನೀಡಬೇಕಾಗುತ್ತದೆ. ವಿದ್ಯಾರ್ಥಿಗಳು ನಿಗದಿತ ಪಾಠ ಪದ್ಯಗಳಿಂದ ಪ್ರೇರಕರಾಗಿ ಮೂಲ ಕೃತಿಯನ್ನು ಓದಬೇಕು. ಈ ನಿಟ್ಟಿನಲ್ಲಿ ಎಂಟನೆಯ ತರಗತಿಯ ಪ್ರತೀ ಪಾಠ ಮತ್ತು ಪದ್ಯದ ಕೊನೆಯಲ್ಲಿ ಹೆಚ್ಚಿನ ಓದು ಎಂಬ ಶೀರ್ಷಿಕೆಯನ್ನು ಕೊಟ್ಟು ಹೆಚ್ಚಿನ ಓದಿಗಾಗಿ ಪಾಠ-ಪದ್ಯಗಳಿಗೆ ಸಂಬಂಧಪಟ್ಟಂತೆ ಆಕರ ಗ್ರಂಥಗಳನ್ನು ಸೂಚಿಸಲಾಗಿದೆ.

**ಗದ್ಯ ಭಾಗದಲ್ಲಿ**

- ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ **'ನಮ್ಮ ಊರಿನ ರಸಿಕರು'** ಕೃತಿಯಲ್ಲಿ ಬರುವ ಶಾಲುಸಾಬಿಯ ವಿಚಾರವನ್ನು ಓದಿ ತಿಳಿಯಿರಿ.
- ಡಾ.ಕೃಷ್ಣಾನಂದ ಕಾಮತ್ ಅವರ **'ಪ್ರಾಣಿ ಪರಿಸರ'** ಪುಸ್ತಕವನ್ನು ಓದಿ.
- ಪೂರ್ಣಚಂದ್ರ ತೇಜಸ್ವಿ ಅವರ **'ಪರಿಸರದ ಕತೆ'** ಕೃತಿಯನ್ನು ಓದಿ.
- ದೈನಿಕಗಳಲ್ಲಿ ಬರುವ ಪರಿಸರ ಸಂಬಂಧಿತ ಲೇಖನಗಳನ್ನು ಓದಿ.
- ಡಾ.ಪ್ರಭುಶಂಕರ ಅವರ **'ಅಮೇರಿಕಾದಲ್ಲಿ ನಾನು ಮತ್ತು ಶಾಂತಿ'** ಪ್ರವಾಸ ಕಥನವನ್ನು ಓದಿ.
- ರಾಷ್ಟ್ರಕವಿ ಜಿ.ಎಸ್.ಶಿವರುದ್ರಪ್ಪ ಅವರ **'ಗಂಗೆಯ ಶಿಖರಗಳಲ್ಲಿ'** ಪ್ರವಾಸ ಕಥನವನ್ನು ಓದಿ.
- ಡಿ.ವಿ.ಜಿ ಯವರ **'ಮಂಕುತಿಮ್ಮನ ಕಗ್ಗ'**ವನ್ನು ಓದಿ.
- ಡಿ.ವಿ.ಜಿ ಯವರ **'ಜ್ಞಾಪಕ ಚಿತ್ರಶಾಲೆ'** ಕೃತಿಯನ್ನು ಓದಿ.
- ಡಾ.ಡಿ.ಕೆ.ರಾಜೇಂದ್ರ ಅವರು ಸಂಪಾದಿಸಿರುವ **'ಬೆದರುಬೊಂಬೆ ಮತ್ತು ಇತರ ಜನಪದ ಕಥೆಗಳು'** ಸಂಕಲನದ ಇತರ ಕಥೆಗಳನ್ನು ಓದಿ.
- ಡಾ.ಜೀ.ಶಂ.ಪರಮಶಿವಯ್ಯ ಅವರ **'ಆಯ್ದ ಜನಪದ ಕಥೆಗಳು'** ಸಂಕಲನವನ್ನು ಓದಿ.
- ಕ್ಯಾತನಹಳ್ಳಿ ರಾಮಣ್ಣ ಅವರ **'ಬೀದರ ಜಿಲ್ಲೆಯ ಜನಪದ ಕಥೆಗಳು'**ಪುಸ್ತಕವನ್ನು ಓದಿ.
- ಕೆ.ಎಂ.ಮುನ್ಷಿ ಅವರ **'ಕೃಷ್ಣಾವತಾರ'** ಕೃತಿಯನ್ನು ಓದಿ.
- ತ.ಸು. ಶ್ಯಾಮರಾಯರ **'ವಚನಭಾಗವತ'** ಕೃತಿಯನ್ನು ಓದಿ.

- ರಾಷ್ಟ್ರಕವಿ ಕುವೆಂಪು ಅವರ **'ಮಲೆನಾಡಿನ ಚಿತ್ರಗಳು'** ಗದ್ಯ ಚಿತ್ರಗಳ ಸಂಕಲನವನ್ನು ಓದಿ.
- ಡಾ.ಕೆ.ಸಿ.ಶಿವಾರೆಡ್ಡಿ ಅವರು ಸಂಪಾದಿಸಿರುವ **'ಕುವೆಂಪು ಸಮಗ್ರ ಗದ್ಯ'** - ಸಂಪುಟ ೧ ಕೃತಿಯನ್ನು ಓದಿ.
- ಪ್ರೊ.ಜಿ.ವೆಂಕಟಸುಬ್ಬಯ್ಯ ಅವರು ಸಂಪಾದಿಸಿರುವ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮುದ್ರಿಸಿರುವ **'ಮುದ್ದಣ ಭಂಡಾರ'**-ಸಂಪುಟ ೧ ಮತ್ತು ೨ ಕೃತಿಯನ್ನು ಗಮನಿಸಿ.

**ಪದ್ಯಭಾಗದಲ್ಲಿ**

- ರಾಷ್ಟ್ರಕವಿ ಎಂ.ಗೋವಿಂದ ಪೈ ಅವರ **'ಗಿಳಿವಿಂಡು'** ಕವನ ಸಂಕಲನ ಓದಿ.
- ರಾಷ್ಟ್ರಕವಿ ಜಿ.ಎಸ್.ಶಿವರುದ್ರಪ್ಪ ಅವರ **'ಪ್ರೀತಿ ಇಲ್ಲದ ಮೇಲೆ'** ಕವನ ಸಂಗ್ರಹದಲ್ಲಿನ **'ಐಕ್ಯಗಾನ'** ಕವಿತೆಯನ್ನು ಓದಿ.
- ಭಾರತೀಯ ವಿದ್ಯಾಭವನದ **'ಭಾರತ ಭಾರತಿ'** ಪುಸ್ತಕ ಮಾಲೆಯ **'ಕೃಷ್ಣ ಕುಚೇಲರ ಸ್ನೇಹ'** ಕತೆಯನ್ನು ಓದಿ.
- ಬಿ.ಟಿ.ಲಲಿತಾ ನಾಯಕ್ ಅವರ **'ಬಿದಿರು ಮೆಳೆ ಕಂಟಿಯಲಿ'** ಕವನ ಸಂಕಲನದ ಇತರ ಕವಿತೆಗಳನ್ನು ಓದಿ.
- ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಕಟಿಸಿರುವ **'ಸಮಗ್ರ ವಚನ ಸಂಪುಟ'**ದಲ್ಲಿರುವ ಕೆಲವು ಜನಪ್ರಿಯ ವಚನಗಳನ್ನು ಕಲಿಯಿರಿ .
- ಡಾ. ಎಲ್. ಬಸವರಾಜು ಅವರು ಸಂಪಾದಿಸಿರುವ **'ಸರ್ವಜ್ಞನ ವಚನಗಳು'**ಕೃತಿಯನ್ನು ಓದಿ.
- ಡಾ.ರಾ.ಗೌ. ಅವರು ಸಂಪಾದಿಸಿರುವ **'ಸರ್ವಜ್ಞನ ವಚನಗಳು'** ಪುಸ್ತಕವನ್ನು ಓದಿ.
- ಡಾ.ಜಿ. ವರದರಾಜ ರಾವ್ ಅವರು ಸಂಪಾದಿಸಿರುವ **'ಶ್ರೀಪಾದರಾಜರ ಕೃತಿಗಳು'** ಪುಸ್ತಕವನ್ನು ಓದಿ.
- ಪ್ರೊ.ಎಸ್.ಕೆ.ರಾಮಚಂದ್ರ ರಾವ್ ಅವರು ಸಂಪಾದಿಸಿರುವ **'ಪುರಂದರ ಸಾಹಿತ್ಯ ದರ್ಶನ'**-ಸಂಪುಟ ೧ ಮತ್ತು ೨ ಕೃತಿಯ ಜನಪ್ರಿಯ ಕೀರ್ತನೆಗಳನ್ನು ಓದಿ.
- ಪ್ರೊ.ದೇ.ಜವರೇಗೌಡ ಅವರು ಸಂಪಾದಿಸಿರುವ ಜನಪ್ರಿಯ **'ಕನಕ ಸಂಪುಟ'** ಕೃತಿಯನ್ನು ಓದಿ.

* ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯವಿದ್ಯಾ ಸಂಶೋಧನಾಲಯ ಪ್ರಕಟಿಸಿರುವ **'ಕುಮಾರ ವಾಲ್ಮೀಕಿ ವಿರಚಿತ ತೊರವೆ ರಾಮಾಯಣ'** – ಸಂಪುಟ ೧ ಮತ್ತು ೨ ಕೃತಿಯನ್ನು ಓದಿ.

## ೩.೬.೮ ಭಾಷಾಭ್ಯಾಸ

### ಸೈದ್ಧಾಂತಿಕ ಭಾಷಾಭ್ಯಾಸ

ಮಾನವ ಮನಸ್ಸಿನ ಭಾವನೆಗನ್ನು ಮಾತಿನ ಮೂಲಕ ವ್ಯಕ್ತಪಡಿಸುತ್ತಾನೆ. ಆಡಿದ, ಆಡಬೇಕಾದ ಮಾತುಗಳನ್ನು ನಿರ್ದಿಷ್ಟ ಲಿಪಿಯರೂಪಕ್ಕಿಳಿಸುವುದೇ ಬರೆವಣಿಗೆ. ಪದ ಮತ್ತು ಪದಗಳ ಸಂಬಂಧವನ್ನು ಖಚಿತವಾಗಿ ತಿಳಿಸುವುದೇ ವ್ಯಾಕರಣಶಾಸ್ತ್ರ. ಆದ್ದರಿಂದ ಭಾಷೆಯನ್ನು ಕಲಿಯುವವರು ಆ ಭಾಷೆಯ ವ್ಯಾಕರಣವನ್ನು ಅರಿಯುವುದು ಉತ್ತಮ. ಕ್ರಿಯಾತ್ಮಕ ವ್ಯಾಕರಣದ ಕಲಿಕೆಯಿಂದ ಭಾಷೆಯನ್ನು ಸ್ಪಷ್ಟ ಹಾಗೂ ನಿಖರವಾಗಿ ಬಳಸಲು ಸಾಧ್ಯ. ಈ ಉದ್ದೇಶವನ್ನಿಟ್ಟುಕೊಂಡು ೮ನೆಯ ತರಗತಿಗೆ ವ್ಯಾಕರಣ ಭಾಗಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ.

* ವರ್ಣಮಾಲೆ: ಸ್ವರ, ವ್ಯಂಜನ, ಯೋಗವಾಹ, ಹ್ರಸ್ವ, ದೀರ್ಘ, ಪ್ಲುತ
* ವರ್ಗೀಯ–ಅವರ್ಗೀಯ, ಧ್ವನ್ಯಂಗಗಳು, ಅಕ್ಷರಗಳು ಹುಟ್ಟುವ ಸ್ಥಳಗಳು
* ಅಲ್ಪಪ್ರಾಣ, ಮಹಾಪ್ರಾಣ, ಅನುನಾಸಿಕಗಳು
* ಗುಣಿತಾಕ್ಷರಗಳು ಪರಿಚಯಾತ್ಮಕ ವಿವರ, ಕಾಗುಣಿತ,
* ಸಂಯುಕ್ತಾಕ್ಷರ, ಸಜಾತೀಯ, ವಿಜಾತೀಯ
* ಪದ, ದೇಶ್ಯಪದ, ಅನ್ಯದೇಶ್ಯ ಪದ, ಸಂಖ್ಯಾಪದ, ತತ್ಸಮ–ತದ್ಭವ
* ಸಂಧಿ ಪರಿಚಯಾತ್ಮಕ ವಿವರ
* ಸ್ವರ ಸಂಧಿ, ವ್ಯಂಜನ ಸಂಧಿ, ಕನ್ನಡ ಸಂಧಿ, ಸಂಸ್ಕೃತ ಸಂಧಿ
* ಕನ್ನಡ ಸಂಧಿಗಳು: ಲೋಪ, ಆಗಮ, ಆದೇಶ
* ಪ್ರಕೃತಿಭಾವ
* ನಾಮಪದಗಳು, ಕ್ರಿಯಾಪದಗಳು, ಅವ್ಯಯ, ನಾಮಪ್ರಕೃತಿ,
* ವಿಭಕ್ತಿ, ಪ್ರತ್ಯಯಗಳು, ಕಾರಕಾರ್ಥಗಳು
* ನಾಮವಾಚಕಗಳು: ವಸ್ತುವಾಚಕ, ಗುಣವಾಚಕ, ಸಂಖ್ಯಾವಾಚಕ, ಸಂಖ್ಯೇಯವಾಚಕ, ಭಾವನಾಮ, ಪರಿಮಾಣವಾಚಕ, ದಿಗ್ವಾಚಕ, ಸರ್ವನಾಮ
* ರೂಢನಾಮ, ಅಂಕಿತನಾಮ, ಅನ್ವರ್ಥನಾಮ,

- ಪುರುಷಾರ್ಥಕ ಸರ್ವನಾಮಗಳು: ಉತ್ತಮ, ಮಧ್ಯಮ, ಪ್ರಥಮಪುರುಷ. ಪ್ರಶ್ನಾರ್ಥಕ, ಆತ್ಮಾರ್ಥಕ ಸರ್ವನಾಮಗಳು.
- ಲಿಂಗ, ವಚನ, ವಾಕ್ಯಗಳ ಪರಿಚಯಾತ್ಮಕ ವಿವರ.
- ಸಮಾಸ: ತತ್ಪುರುಷ , ಕರ್ಮಧಾರಯ, ದ್ವಿಗು ಸಮಾಸಗಳು

**ಪದ್ಯಭಾಗದಲ್ಲಿರುವ ಭಾಷಾಭ್ಯಾಸ**

- ಛಂದಸ್ಸು ಪರಿಚಯಾತ್ಮಕ ವಿವರ
- ಚಂಪೂ, ತ್ರಿಪದಿ, ಚೌಪದಿ, ಷಟ್ಪದಿ,
- ಪ್ರಾಸ, ಯತಿ, ಗಣ ವಿವರಗಳು
- ಅಲಂಕಾರ: ಪರಿಚಯಾತ್ಮಕ ವಿವರ. ಶಬ್ದಾಲಂಕಾರಗಳು, ಅರ್ಥಾಲಂಕಾರಗಳು
- ಉಪಮಾಲಂಕಾರ: ಪೂರ್ಣೋಪಮೆ, ಲುಪ್ತೋಪಮೆ, ಲುಪ್ತೋಪಮೆಯ ವಿಧಗಳು
- ಮಾತ್ರಾಗಣ: ಪರಿಚಯಾತ್ಮಕ ವಿವರ, ಮಾತ್ರೆ. ಗುರು ಎನಿಸುವ ಅಕ್ಷರಗಳು.
- ಕಂದಪದ್ಯ- ಕಂದದ ಲಕ್ಷಣಗಳು
- ಷಟ್ಪದಿ: ಭಾಮಿನಿ ಷಟ್ಪದಿಯ ಲಕ್ಷಣಗಳು.

## ೩.೭ ಪಠ್ಯ ಪುಸ್ತಕಗಳ ಕುರಿತು ಶಿಕ್ಷಕರ ಅಭಿಪ್ರಾಯ

- ಭಾಷಾ ಪಠ್ಯಪುಸ್ತಕ ರಚನಾ ತತ್ವಗಳ ಕುರಿತು ನಿರ್ದಿಷ್ಟವಾದ ತರಬೇತಿಯನ್ನು ನೀಡಲಾಗುತ್ತಿಲ್ಲ. ಬಿ.ಎಡ್.ತರಬೇತಿಯ ಸಂದರ್ಭಗಳಲ್ಲಿ ಐದು ಅಥವಾ ಹತ್ತು ಅಂಕಗಳ ಪ್ರಶ್ನೆಗೆ ಉತ್ತರವಾಗಿ ದೊರೆಯುತ್ತದೆ. ಆಳ ಅಧ್ಯಯನವಿಲ್ಲ. ಸೇವಾಂತರ್ಗತ ತರಬೇತಿಗಳಲ್ಲಿ ಸಾಂದರ್ಭಿಕವಾಗಿ ಓದಿ ಹೇಳಲಾಗುತ್ತದೆಯೇ ಹೊರತು ತರಗತಿಯಲ್ಲಿ ರೂಢಿಸಿಕೊಳ್ಳುವ ಬಗೆಯ ಕುರಿತು ಹೇಳುವುದಿಲ್ಲ.
- ಭಾಷಾ ಬೋಧನಾ ಉದ್ದೇಶಗಳ ಕುರಿತು ಹಾಗೂ ತರಗತಿಯಲ್ಲಿ ಅವುಗಳ ಅಳವಡಿಕೆಯ ತಂತ್ರಗಳ ಕುರಿತು ನಿರ್ದಿಷ್ಟವಾದ ತರಬೇತಿಗಳನ್ನು ಬಿ.ಎಡ್.ತರಬೇತಿಯ ಸಂದರ್ಭಗಳಲ್ಲಿಯೂ ನೀಡಲಾಗುವುದಿಲ್ಲ. ನೀಡಲಾಗುತ್ತಿಲ್ಲ. ಸೇವಾಂತರ್ಗತ ತರಬೇತಿಗಳಲ್ಲಿ ಸಾಂದರ್ಭಿಕವಾಗಿ ಓದಿ ಮುಗಿಸಲಾಗುತ್ತದೆ. ಅದರಲ್ಲಿನ ಅನೇಕ ಗೊಂದಲಗಳಿಗೆ ಇಲಾಖೆಯಲ್ಲಿ ಉತ್ತರವಿಲ್ಲವಾಗಿದೆ.

- ಗದ್ಯ ಭಾಗದಲ್ಲಿ ಹಳಗನ್ನಡ ಪಾಠಗಳು ವಿದ್ಯಾರ್ಥಿಗಳ ಮಟ್ಟವನ್ನು ಮೀರಿವೆ. ಹತ್ತನೆಯ ತರಗತಿಯ ವಿದ್ಯಾರ್ಥಿಗಳಿಗೆ ಭಾಷಾ ಕಲಿಕೆಯ ನಡುವೆ ಇವುಗಳನ್ನು ಪರಿಚಯಾತ್ಮಕ ನೆಲೆಯಲ್ಲಿ ತಂದರೆ ಸಾಕಾಗುತ್ತದೆ.
- ಹೊಸಗನ್ನಡವನ್ನೇ ಓದಲು ಬಾರದಿರುವ ವಿದ್ಯಾರ್ಥಿಗಳ ಸಂಖ್ಯೆ ತರಗತಿಯಲ್ಲಿ ಬಹಳ ಇದ್ದು, ಹಳಗನ್ನಡವನ್ನು ಹೊಸ ಭಾಷೆ ಎಂಬಂತೆ ಓದುತ್ತಾರೆ. ತ್ರಿಭಾಷಾ ಸೂತ್ರದ ಜೊತೆ ವಿದ್ಯಾರ್ಥಿಗಳಿಗೆ ಇದು ನಾಲ್ಕನೆಯ ಭಾಷೆಯಾಗಿ ಪರಿಣಮಿಸುತ್ತಿದೆ.
- ಪದ್ಯ ಭಾಗದಲ್ಲಿಯೂ ಹಳಗನ್ನಡ ಪದ್ಯ ಭಾಗಗಳು ವಿದ್ಯಾರ್ಥಿಗಳ ಮಟ್ಟವನ್ನು ಮೀರಿವೆ. ಹತ್ತನೆಯ ತರಗತಿಯ ವಿದ್ಯಾರ್ಥಿಗಳಿಗೆ ಕಾವ್ಯದ ಎಲ್ಲಾ ಭಾಗಗಳನ್ನು ಹಾಗೂ ಅದರ ಎಲ್ಲಾ ಲಕ್ಷನಗಳನ್ನು ತಿಳಿಸಿ ಭಾಷಾ ಕಲಿಕೆ ಕಷ್ಟ ಎಂಬ ಭಾವನೆಯನ್ನು ಮೂಡಿಸಿ, ಭಾಷಾ ಕಲಿಕೆಯನ್ನು ಹೊರೆಯಾಗಿಸುವ ಅಗತ್ಯವಿಲ್ಲ.
- ಕೀರ್ತನೆ, ಸುಳಾದಿ, ಉಗಾಭೋಗಗಳ ವಿಚಾರಗಳು ವಿದ್ಯಾರ್ಥಿಗಳ ಮಟ್ಟವನ್ನು ಮೀರಿದ್ದು, ಇವುಗಳನ್ನು ವಿದ್ಯಾರ್ಥಿಗಳಿಗೆ ವಿವರಿಸುವುದು ಕಷ್ಟವಾಗಿದೆ. ಹಣಬಣ್ಣವನ್ನಂತೂ ಪದವಿ ಮಟ್ಟದ ವಿದ್ಯಾರ್ಥಿಗಳ ಮಟ್ಟವನ್ನೂ ಮೀರಿದ ಭಾಗವಾಗಿದೆ. ವಿದ್ವಾಂಸರ ಮಟ್ಟದ ಕೆಲವು ಭಾಗಗಳು ಪ್ರೌಢಶಿಕ್ಷಣದಲ್ಲಿವೆ.
- ವ್ಯಾಕರಣ ಭಾಗಗಳಲ್ಲಿಯೂ ಹಲವು ಭಾಗಗಳು ವಿದ್ಯಾರ್ಥಿಗಳ ಮಟ್ಟವನ್ನು ಮೀರಿವೆ. ವರ್ತಮಾನದಲ್ಲಿ ಬಳಕೆಯಲ್ಲಿ ಇಲ್ಲದ ಹಲವಾರು ಅಂಶಗಳನ್ನು ಪಠ್ಯದಲ್ಲಿ ಅನಗತ್ಯವಾಗಿ ಸೇರಿಸಲಾಗಿದೆ. ಕರ್ನಾಟಕದಲ್ಲಿ ಕನ್ನಡವು ಬಹುತ್ವದ ಹಿನ್ನೆಲೆಯದ್ದಾಗಿದ್ದು, ಅನೇಕ ವ್ಯಾಕರಣ ವಿಚಾರಗಳು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಬದಲಾವಣೆಗಳನ್ನು ಕಂಡುಕೊಳ್ಳುತ್ತವೆ. ಇದನ್ನು ಗಮನಿಸದೇ, ಗ್ರಂಥಸ್ಥ ಕನ್ನಡದ ನಿಯಮಗಳನ್ನೇ ಪ್ರಧಾನವಾಗಿ, ಒತ್ತಾಯ ಪೂರ್ವಕವಾಗಿ ವಿದ್ಯಾರ್ಥಿಗಳ ಮೇಲೆ ಹೇರುವುದು ಸರಿಯಾಗುವುದಿಲ್ಲ.
- ಛಂದಸ್ಸು, ಅಲಂಕಾರಗಳ ವಿಭಾಗಗಳಲ್ಲಿಯೂ ವಿದ್ಯಾರ್ಥಿಗಳ ಮಟ್ಟವನ್ನು ಮೀರಿದ ಭಾಗಗಳಿವೆ. ಕೆಲವು ವಿಚಾರಗಳನ್ನು ವಿದ್ಯಾರ್ಥಿಗಳಿಗೆ ಅರ್ಥಮಾಡಿಸುವುದು ಕಷ್ಟದ ಕೆಲಸವಾಗಿದೆ. ಕಾವ್ಯದ, ಕಾವ್ಯಾಂಗಗಳ ಸರ್ವ ಲಕ್ಷಣಗಳನ್ನೂ ಪಠ್ಯದಲ್ಲಿ ತರುವುದರಿಂದ ವಿದ್ಯಾರ್ಥಿಗಳು ಕಂಠಪಾಠದ ಮೊರೆ ಹೋಗಬೇಕಾದ ಸಂದರ್ಭಗಳೇ ಹೆಚ್ಚು. ವಿದ್ಯಾರ್ಥಿಗಳು ವರ್ತಮಾನದಲ್ಲಿ ಅವುಗಳನ್ನು ಬಳಸದಿರುವುದರಿಂದ ಅವುಗಳ ಲಕ್ಷಣಗಳನ್ನು ಅರ್ಥಮಾಡಿಕೊಳ್ಳಲಾಗದೆಯೇ ಕಂಠಪಾಠಕ್ಕೆ ಮೊರೆಹೋಗುತ್ತಾರೆ.
- ಪಠ್ಯದಲ್ಲಿನ ಚಟುವಟಿಕೆಗಳ ಕೆಲವು ವಿಚಾರಗಳು ವಿದ್ಯಾರ್ಥಿಗಳ ಮಟ್ಟವನ್ನು ಮೀರಿವೆ. ಸರಿಯಾಗಿ ಓದಲು, ಬರೆಯಲು ಬಾರದ ವಿದ್ಯಾರ್ಥಿಗಳು ಕಥೆಯನ್ನು

ನಾಟಕವನ್ನಾಗಿಯೂ, ನಾಟಕಗಳನ್ನು ಕಥೆಗಳನ್ನಾಗಿಯೂ ಪರಿವರ್ತಿಸಲಾರರು. ಪಾಠದ ಸಂದರ್ಭದಲ್ಲಿನ ಭಾಗಗಳನ್ನೂ ಓದಲು ಸಾಧ್ಯವಾಗದ ಮಕ್ಕಳಿಂದ ಮೂಲಗ್ರಂಥಗಳನ್ನೂ ಓದಿ ಅರ್ಥಮಾಡಿಕೊಳ್ಳಬೇಕೆಂಬ ನಿರೀಕ್ಷೆ ಅರ್ಥಪೂರ್ಣವಾದುದಲ್ಲ. ಪಠ್ಯಪುಸ್ತಕಗಳು ಗ್ರಾಮೀಣ ಭಾಗದ ವಿದ್ಯಾರ್ಥಿಗಳನ್ನು ಕೇಂದ್ರೀಕರಿಸಿಕೊಂಡಿಲ್ಲ.

- ಪ್ರಾಥಮಿಕ ಶಾಲೆಗಳಲ್ಲಿ ಬಾಷಾ ಕೌಶಲಗಳನ್ನು ಸರಿಯಾಗಿ ಕಲಿಸದಿರುವ ಕಾರಣ ಪ್ರೌಢಶಾಲೆಗಳಲ್ಲಿ ಭಾಷಾ ಕಲಿಕೆಯ ಸಮಸ್ಯೆಗಳು ವಿದ್ಯಾರ್ಥಿಗಳನ್ನು ಬಹುವಾಗಿ ಕಾಡುತ್ತದೆ. ಪ್ರಾಥಮಿಕ ಶಾಲೆಗಳಲ್ಲಿ ಪ್ರಯೋಗಗಳೇ ಹೆಚ್ಚಾಗಿ ನಡೆಯುತ್ತಿವೆ, ಹಾಗೂ ವಿದ್ಯಾರ್ಥಿಗಳಿಗೆ ಸೌಲಭ್ಯಗಳನ್ನು ಒದಗಿಸುವುದೇ ಶಿಕ್ಷಣ ಎಂಬಂತಾಗಿದೆ. ಸೌಲಭ್ಯಗಳನ್ನು ಕೊಡುವಲ್ಲಿನ ಉತ್ಸಾಹ ವಿದ್ಯಾರ್ಥಿಗಳ ಭಾಷಾ ಕೌಶಲಗಳ ಬೆಳವಣಿಗೆಯ ಕುರಿತಾಗಿ ಕೊಡದಿರುವ ಅಂಶಗಳು ಕಂಡುಬರುತ್ತದೆ.
- ಪ್ರಸ್ತುತದಲ್ಲಿನ ಕನ್ನಡ ಭಾಷಾ ಮೌಲ್ಯ ಮಾಪನ ಪದ್ಧತಿಯು ವಿದ್ಯಾರ್ಥಿಗಳಲ್ಲಿನ ಭಾಷಾ ಕೌಶಲಗಳನ್ನು ಸಮಗ್ರವಾಗಿ ಹಾಗೂ ನಿರಂತರವಾಗಿ ಮೌಲ್ಯಮಾಪನ ಮಾಡುತ್ತಿಲ್ಲ. ವಿದ್ಯಾರ್ಥಿಗಳ ಬರವಣಿಗೆಯ ಕೌಶಲದ ಆಧಾರದ ಮೇಲೆ ಭಾಷಾ ಮೌಲ್ಯ ಮಾಪನ ನಿಂತಿದೆ. ಶಿಕ್ಷಣ ಪದ್ಧತಿಯಲ್ಲಿ ಮೌಲ್ಯ ಮಾಪನ ಪ್ರಕ್ರಿಯೆಯನ್ನು ಇಲಾಖೆಯೇ ನಿರ್ಧರಿಸುವುದರಿಂದ ಇಲಾಖೆಯ ನಿಯಮಗಳನ್ನು ಶಿಕ್ಷಕರು ಮೀರುವ ಸಂಧರ್ಭಗಳು ಬರುವುದಿಲ್ಲ.
- ಎಂಟನೆಯ ತರಗತಿಯ ನೂತನ ಪಠ್ಯ ಪುಸ್ತಕದ ಉದ್ದೇಶ, ಗುರಿಗಳ ಕುರಿತಾಗಿ ನಿರ್ದಿಷ್ಟ ತರಬೇತಿಗಳಾಗಿಲ್ಲ.
- ನೂತನ ಪಠ್ಯದಲ್ಲಿ ಪಾಠಗಳ ಸಂಖ್ಯೆ ಕಡಿಮೆಯಿದ್ದು, ಪುಸ್ತಕದಲ್ಲಿ ಎರಡು ಭಾಗಗಳನ್ನು ಮಾಡಿದ್ದು ಬಿಟ್ಟರೆ ಉಳಿದಂತೆ ಹಳೆಯ ಪಠ್ಯಕ್ಕೂ ಹೊಸ ಪಠ್ಯಕ್ಕೂ ತೀರಾ ಭಿನ್ನ ಎನ್ನಿಸುವಂತಹ ವ್ಯತ್ಯಾಸ ಕಂಡುಬರುತ್ತಿಲ್ಲ.
- ನೂತನ ಪಠ್ಯದ ಬೋಧನಾ ವಿಧಾನಕ್ಕೂ, ಹಳೆಯ ಪಠ್ಯದ ಬೋಧನಾ ವಿಧಾನಕ್ಕೂ ಪಠ್ಯದಲ್ಲಿ ಬದಲಾವಣೆಗಳಿಲ್ಲ. ಪಾಠ ಪದ್ಯಗಳನ್ನು ಹೆಚ್ಚಿನ ವಿದ್ಯಾರ್ಥಿಗಳು ಸ್ವ ಕಲಿಕೆಯಾಗಿ ಕಲಿಯಲು ಸಾಮರ್ಥ್ಯ ಹೊಂದದಿರುವುದರಿಂದ ಶಿಕ್ಷಕರ ಬೋಧನೆ ಅನಿವಾರ್ಯವಾಗಿದೆ.

## ೩.೮ ಪಠ್ಯ ಪುಸ್ತಕಗಳ ಕುರಿತು ವಿದ್ಯಾರ್ಥಿಗಳ ಅಭಿಪ್ರಾಯ

- ವ್ಯಾಕರಣ ಭಾಗದಲ್ಲಿ ವೃದ್ಧಿಸಂಧಿ, ಯಣ್, ಶ್ಚುತ್ವ, ಜಸ್ತ್ವ, ಅನುನಾಸಿಕ ಸಂಧಿಗಳು, ಸಂಯೋಜಿತ, ಮಿಶ್ರವಾಕ್ಯ, ಉತ್ತ, ದ, ವ ಎಂಬ ಕಾಲಸೂಚಕ ಪ್ರತ್ಯಯಗಳು, ಅವ್ಯಯಗಳು, ಕರ್ತರಿ, ಕರ್ಮಣಿ ಪ್ರಯೋಗಗಳು, ಬಹುವ್ರೀಹಿ, ಅಂಶಿ, ಗಮಕ ಸಮಾಸಗಳು ಭಾಗಗಳನ್ನು ಶಿಕ್ಷಕರು ಬೋಧಿಸಿದರೂ ಕೂಡ ಅರ್ಥವಾಗುವುದಿಲ್ಲ.

- ಪಾಠಗಳಲ್ಲಿ ಮುದ್ದಣನ ಗದ್ಯ ಕೃತಿ ರಾಮಾಶ್ವಮೇಧದ ಭಾಗ, ಸತ್ಯವಾದಿ ಸುಧಾಮೆ ಎಂಬ ವಡ್ಡಾರಾಧನೆಯ ಹಳಗನ್ನಡ ಗದ್ಯ, ಮುದ್ರಾಮಂಜೂಷದಿಂದ ಆಯ್ದುಕೊಂಡ ಮಿತ್ರಪ್ರೇಮವೆಂಬ ಗದ್ಯ ಕಥೆ. ಮೊಲಂ ಸಿಂಹಮಂ ಕೊಂದ ಕಥೆ ಎಂಬ ಹಳಗನ್ನಡ ಗದ್ಯ ಕಥೆ ಮೊದಲಾದ ಹಳಗನ್ನಡ ಪಾಠಗಳನ್ನು ಸ್ವತಃ ಓದಲು, ಅರ್ಥಮಾಡಿಕೊಳ್ಳಲು ಆಗುವುದಿಲ್ಲ.
- ಪದ್ಯಗಳಲ್ಲಿ ಕರುಣಾಳು ರಾಘವನಲ್ಲಿ ತಪ್ಪಿಲ್ಲ, ಭರತೇಶ ವೈಭವ, ಉದರ ವೈರಾಗ್ಯ, ಹಣ ಬಣ್ಣ ಗಳೆಂಬ ಕೀರ್ತನೆಗಳು, ಹರಿಶ್ಚಂದ್ರನಲ್ಲದಿನ್ನಾರು ಗತಿಮತಿ, ಆದಿಕವಿ ಪಂಪನ ವಿಕ್ರಮಾರ್ಜುನ ವಿಜಯದ ಸೂಳ್ಪಡೆಯಲಪ್ಪುದು ಕಾಣಾ ಮಹಾಜಿರಂಗದೊಳ್, ಶಬರ ಶಂಕರ ವಿಳಾಸದ ಬೇಡ ನಿನಗೇಕೆ ಸಾಹಸದಾಡಂಬರ, ರನ್ನನ ಸಾಹಸ ಭೀಮ ವಿಜಯದ ಕಾಲಾಗ್ನಿ ರುದ್ರಂ ಪೊರಮಡುವವೋಲ್, ಕವಿರಾಜಮಾರ್ಗದ ಭಾಗ, ಪಂಪನ ಬನವಾಸಿಯ ವರ್ಣನೆ ಈ ಮೊದಲಾದ ಹಳಗನ್ನಡ ಪದ್ಯಗಳನ್ನು ಓದಿ ಅರ್ಥಮಾಡಿಕೊಳ್ಳುವುದು ಕಷ್ಟವಾಗುತ್ತದೆ.
- ಪಾಠದ ಪ್ರಶ್ನೋತ್ತರಗಳಿಗೆ ಅಧ್ಯಾಪಕರು ಟಿಪ್ಪಣಿಯನ್ನು ಬರೆಸುತ್ತಾರೆ. ಇಂತಹ ವಾಕ್ಯವೃಂದದಲ್ಲಿದೆಯೆಂದು ಗುರುತು ಹಾಕಿಸುತ್ತಾರೆ. ಮನೆಗೆಲಸಕ್ಕೆ ಕೊಡುತ್ತಾರೆ.

## ೩.೯ ಎಂಟನೆಯ ತರಗತಿಯ ಹಿಂದಿನ ಪಠ್ಯಪುಸ್ತಕ ಮತ್ತು ಹೊಸ ಪಠ್ಯಪುಸ್ತಕಗಳ ತೌಲನಿಕ ವಿಶ್ಲೇಷಣೆ

೨೦೧೨ನೆಯ ಸಾಲಿನಲ್ಲಿ ಎಂಟನೆಯ ತರಗತಿಗೆ ನೂತನ ಪಠ್ಯಪುಸ್ತಕವನ್ನು ಅಳವಡಿಸಲಾಗಿದೆ. ೨೦೦೫ರ ರಾಷ್ಟ್ರೀಯ ಪಠ್ಯದ ಆಧಾರದ ಮೇಲೆ ಈ ನೂತನ ಪಠ್ಯಪುಸ್ತಕವನ್ನು ರಚಿಸಲಾಗಿದೆ. ಕಲಿಕೆಯನ್ನು ಜೀವನದ ಅವಶ್ಯಕತೆಯೊಂದಿಗೆ ಜೋಡಿಸುವುದು, ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು, ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು, ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಜೋಡಿಸುವುದು, ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ

ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು, ವಿಷಯಗಳ ಮೇರೆಗಳನ್ನು ಮುರಿದು ಅವುಗಳ ಸಮಗ್ರ ದೃಷ್ಟಿಯ ಬೋಧನೆಯನ್ನು ಅಳವಡಿಸುವುದು, ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿಪಡಿಸುವುದು ಇತ್ಯಾದಿ ವಿಚಾರಗಳನ್ನು ಗಮನಿಸಲಾಗಿದೆ ಎನ್ನಲಾಗಿದೆ.

ಪಠ್ಯದಲ್ಲಿನ ಸಾರ ಸರ್ವಸ್ವದ ಕುರಿತು ಹೇಳುತ್ತಾ, ಪಠ್ಯ ರಚನಾ ಸಮಿತಿಯ ಅಧ್ಯಕ್ಷರು, ಇಲ್ಲಿನ ಪಾಠಗಳೆಲ್ಲವೂ ಸ್ವ ಕಲಿಕೆ ಹಾಗೂ ಬೋಧನಾ ಕೌಶಲಕ್ಕೆ ಸೂಕ್ತವಾಗಿವೆಯೆಂದು, ಇದು ಶೈಕ್ಷಣಿಕ ಸಾರೋದ್ದೇಶದ ಪ್ರಣಾಳಿಕೆಯೆಂದೂ ತಿಳಿಸಿದ್ದಾರೆ.

ಎಂಟನೆಯ ತರಗತಿಯ ನೂತನ ಪಠ್ಯವನ್ನು ಹಿಂದಿನ ಪಠ್ಯದೊಂದಿಗೆ ತುಲನಾತ್ಮಕ ದೃಷ್ಟಿಯಿಂದ ನೋಡಿದರೆ ಈ ಕೆಳಗಿನ ವಿಚಾರಗಳು ಕಂಡು ಬರುತ್ತವೆ.

- ಹಿಂದಿನ ಪಠ್ಯದಲ್ಲಿ ೧೨ ಪಾಠ, ೧೨ ಪದ್ಯಗಳಿದ್ದರೆ, ಹೊಸ ಪಠ್ಯದಲ್ಲಿ ೮ ಪಾಠ ೮ ಪದ್ಯಗಳಿವೆ.
- ಹೊಸ ಪದಗಳು, ಅರ್ಥ ಸಹಿತ ಪದ ಕೋಶ ಎಂದು ಹಿಂದಿನ ಪಠ್ಯದಲ್ಲಿ ಹೇಳಿದ ಸ್ಥಾನದಲ್ಲಿ, ಪದ ಗದ್ಯಾರ್ಥ, ಪದ ಪದ್ಯಾರ್ಥ ಹಾಗೂ ಪಠ್ಯಾಧಾರಿತ ಟಿಪ್ಪಣಿ ಎಂದು ಹೆಸರನ್ನು ಬದಲಾಯಿಸಲಾಗಿದೆ.
- ಹಿಂದಿನ ಪಾಠ ಪದ್ಯಗಳ ಕೊನೆಯಲ್ಲಿ ಚಟುವಟಿಕೆಗಳು ಎಂಬ ಶೀರ್ಷಿಕೆಯಲ್ಲಿ ಪ್ರತಿ ಪಾಠದ ನಂತರ ವಿದ್ಯಾರ್ಥಿಗಳು ಮಾಡಬೇಕಾದ ವಿವಿಧ ಚಟುವಟಿಕೆಗಳನ್ನು ನೀಡಲಾಗಿತ್ತು, ಆದರೆ ಹೊಸ ಪಠ್ಯದಲ್ಲಿ ಹೆಚ್ಚಿನ ಓದು ಎಂಬ ಶೀರ್ಷಿಕೆಯನ್ನು ನೀಡಿ ಓದಬೇಕಾದ ಕೆಲವು ಆಕರ ಗ್ರಂಥ, ಉಪಯುಕ್ತ ಗ್ರಂಥಗಳ ಹೆಸರನ್ನು ಮಾತ್ರ ನೀಡಲಾಗಿದೆ.
- ಹಿಂದಿನ ಪಠ್ಯದಲ್ಲಿ ಹಲವು ಚಟುವಟಿಕೆಗಳ ನಿರ್ದೇಶನವಿದೆ. ಹೊಸ ಪಠ್ಯದಲ್ಲಿ ಪ್ರತಿ ಪಾಠದ ಕೊನೆಯಲ್ಲಿ ಹೆಚ್ಚಿನ ಓದಿಗಾಗಿ ಒಂದು ಪುಸ್ತಕವನ್ನು ಮಾತ್ರ ನಿರ್ದೇಶಿಸಲಾಗಿದೆ.
- ಹಿಂದಿನ ಪಠ್ಯದಲ್ಲಿ ನೀಡಲಾಗಿದ್ದ ಸವರ್ಣದೀರ್ಘ ಸಂಧಿ, ಗುಣ ಸಂಧಿ, ವೃದ್ಧಿ ಸಂಧಿ, ಯಣ್ ಸಂಧಿ, ಶ್ಚುತ್ವ ಸಂಧಿ, ಜಸ್ತ್ವ ಸಂಧಿ, ಅನುನಾಸಿಕ ಸಂಧಿಗಳನ್ನು ಹೊಸ ಪಠ್ಯದಲ್ಲಿ ಕೈಬಿಡಲಾಗಿದೆ. ಉಳಿದಂತೆ ಹಿಂದಿನ ಪಠ್ಯದ ವ್ಯಾಕರಣಾಂಶಗಳನ್ನು ಈ ಪಠ್ಯದಲ್ಲೂ ಸೇರಿಸಿದೆ.
- ಛಂದಸ್ಸು ಮತ್ತು ಅಲಂಕಾರಗಳನ್ನು ಹಳೆಯ ಪಠ್ಯದಲ್ಲಿದ್ದಂತೆಯೇ ಹೊಸ ಪಠ್ಯದಲ್ಲೂ ನೀಡಲಾಗಿದೆ.
- ಹೊಸ ಪಠ್ಯದಲ್ಲಿ ಪಠ್ಯ ಪೋಷಕ ಅಧ್ಯಯನ ಎಂಬ ಭಾಗವನ್ನು ಮಾಡಲಾಗಿದ್ದು, ಒಂದು ಆರೋಗ್ಯ ಸಂಬಂಧಿ ಲೇಖನ, ಒಂದು ಕವಿತೆ, ಒಂದು ನಾಟಕ, ಸಿಂಧೂ ಸಂಸ್ಕೃತಿಯ ಕುರಿತ ಒಂದು ಲೇಖನವನ್ನು ಸೇರಿಸಲಾಗಿದೆ. ೧೯೯೨–೯೩ ಕ್ಕೂ

ಮೊದಲು ಇದ್ದ ಉಪ ಪಠ್ಯವೆಂಬಂತೆ ಈ ಭಾಗ ಕಂಡರೂ ಇದನ್ನು ಪಠ್ಯದೊಂದಿಗೇ ಸೇರಿಸಲಾಗಿರುವುದು ಒಂದು ಭಿನ್ನತೆ.

ಪಠ್ಯಪುಸ್ತಕ ಸಮಿತಿಯ ಅಧ್ಯಕ್ಷರಾದ, ಶ್ರೀ ಸಿ.ಎಸ್.ರಾಮಚಂದ್ರರವರು, ಪಠ್ಯ ಓದು ಹಾಗೂ ಬೋಧಕರೊಂದಿಗೆ ಸಮಾಲೋಚನೆ ಎಂಬ ಶೀರ್ಷಿಕೆಯಡಿ ಪಠ್ಯದ ಕುರಿತು ಬರೆದಿದ್ದಾರೆ. ಇದನ್ನು ಯಥಾವತ್ತಾಗಿ ಈ ಅಧ್ಯಾಯದಲ್ಲಿ ಈಗಾಗಲೇ ನೀಡಲಾಗಿದೆ. ಈ ವಿಚಾರವನ್ನು ಕುರಿತು ಕ್ಷೇತ್ರಕಾರ್ಯದ ಸಮಯದಲ್ಲಿ ಕೆಲವು ಅಧ್ಯಾಪಕರ ಬಳಿ ಮಾತನಾಡಿದಾಗ, ಕೆಲವು ಅಧ್ಯಾಪಕರಿಗೆ ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರ ಸಮಾಲೋಚನೆಯನ್ನು ಅರ್ಥಮಾಡಿಕೊಳ್ಳುವುದೇ ಕಷ್ಟ. ಅವರು ಏನನ್ನು ಹೇಳುತ್ತಿದ್ದಾರೆ ಎಂಬುದೇ ತಿಳಿಯುತ್ತಿಲ್ಲ ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಹೊಸ ಪಠ್ಯದ ಮುನ್ನುಡಿ ಮತ್ತು ಬೋಧಕರೊಂದಿಗೆ ಸಮಾಲೋಚನೆಯ ಭಾಗದಲ್ಲಿ ಕೆಲವೊಂದು ವಿಚಾರಗಳಿವೆ.

- ಕಲಿಕೆಯ ಮೂಲಭೂತ ವೈಜ್ಞಾನಿಕ ದೃಢತ್ವವೇ ಇವುಗಳ (ಪಠ್ಯಪುಸ್ತಕಗಳ) ಆಂತರ್ಯದ ದನಿ.
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು.
- ವಿಷಯಗಳ ಮೇರೆಗಳನ್ನು ಮುರಿದು ಅವುಗಳ ಸಮಗ್ರ ದೃಷ್ಟಿಯ ಬೋಧನೆಯನ್ನು ಅಳವಡಿಸುವುದು.
- ಶಾಲೆಯ ಹೊರ ಬದುಕಿಗೆ ಜ್ಞಾನ ಸಂಯೋಜನೆ.
- ಪ್ರತೀ ಘಟಕದಲ್ಲಿಯೂ ಕೆಲವು ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಜೋಡಿಸಲಾಗಿದೆ. ಅವುಗಳನ್ನು ಮಕ್ಕಳೇ ಕಂಡುಹಿಡಿದು ಚರ್ಚಿಸಿ ಜೀವನದಲ್ಲಿ ಅವುಗಳ ಅರಿವನ್ನುಂಟುಮಾಡಿಕೊಳ್ಳುವಂತೆ ಮಾಡಬೇಕು.
- ಇಲ್ಲಿನ ಪಾಠಗಳೆಲ್ಲವೂ ಸ್ವ ಕಲಿಕೆ ಹಾಗೂ ಬೋಧನಾ ಕೌಶಲಕ್ಕೆ ಸೂಕ್ತವಾಗಿವೆ.
- ಅಭ್ಯಾಸ ಭಾಗದಲ್ಲಿರುವ ಪ್ರಶ್ನೆಗಳು ಸಾಮರ್ಥ್ಯಗಳಿಸಿಕೊಳ್ಳುವುದಕ್ಕಾಗಿಯೇ ಹೊರತು ಪರೀಕ್ಷೆಯ ಪ್ರಶ್ನೆ ಪತ್ರಿಕೆಯ ತಯಾರಿಕೆಗಾಗಿ ಅಲ್ಲ.
- ೧,೨,೩,೪,೫,,,,೧೦ ವಾಕ್ಯಗಳಲ್ಲಿ ಉತ್ತರಿಸುವ ಪ್ರಶ್ನೆಗಳು ವಿಷಯ ಗ್ರಹಣದ ಸಲುವಾಗಿಯೇ ಹೊರತು ಪರೀಕ್ಷಾ ಮೌಲ್ಯ ಮಾಪನದ ಮಾದರಿಗಾಗಿ ಅಲ್ಲ.
- ವಸ್ತುನಿಷ್ಠ ನಿರ್ಣಾಯಕ ಪ್ರಶ್ನೆಗಳು ಕಲಿಕಾರ್ಥಿಯ ನಿರ್ದಿಷ್ಟ ಸಾಮರ್ಥ್ಯಕ್ಕೆ ಸಂಬಂಧಿಸಿದ್ದಾಗಿದೆ.

ಈ ಎಲ್ಲಾ ವಿಚಾರಗಳ ಬಗ್ಗೆ ಶಿಕ್ಷಕರಿಗೆ ಯಾವುದೇ ರೀತಿಯ ತರಬೇತಿಯನ್ನು ನೀಡಲಾಗಿಲ್ಲ. ಶಿಕ್ಷಕರಿಗೆ ಯಾವುದೇ ರೀತಿಯ ನಿರ್ದೇಶನವನ್ನು ನೀಡದಿರುವುದರಿಂದ, ಅಧ್ಯಾಪಕರು ಈ ವಿಚಾರಗಳಿಗೆ ಹೆಚ್ಚು ಗಮನ ಕೊಡದೆ ಹಳೆಯ ಪದ್ಧತಿಯಲ್ಲೇ ಪಾಠ ಮುಂದುವರಿಸುತ್ತಿದ್ದಾರೆ. ಪಾಠ ಪದ್ಯಗಳಲ್ಲಿ ಹೆಚ್ಚಿನ ವ್ಯತ್ಯಾಸಗಳಿಲ್ಲದ ಕಾರಣ ಹಳೆಯ

ಪಠ್ಯಪುಸ್ತಕದ ಮಾದರಿಯಲ್ಲಿಯೇ ಹೊಸ ಪಠ್ಯ ಸಾಗುತ್ತಿದೆ. ಮೌಲ್ಯಮಾಪನ ವಿಧಾನದಲ್ಲಿಯೂ ಯಾವುದೇ ಬದಲಾವಣೆಯನ್ನು ನಿರ್ದೇಶಿಸದ ಕಾರಣ ಹಳೆಯ ಮೌಲ್ಯ ಮಾಪನ ವಿಧಾನವೇ ಮುಂದುವರಿಯುತ್ತಿದೆ. ಪಠ್ಯ ಹೊಸದಾದರೂ ಪ್ರಯೋಗ ಹಳೆಯದೇ ಆಗಿದೆ. ಹಾಗಾಗಿ ಫಲಿತಾಂಶವೂ ಹಳೆಯದೇ ಬರುವುದರಲ್ಲಿ ಆಶ್ಚರ್ಯವಿಲ್ಲ. ಪಠ್ಯ ಬದಲಾಗಿದೆ; ಪಾಠ ಮಾಡುವ ರೀತಿ ಬದಲಾಗಿಲ್ಲ. ನೂತನ ಪಠ್ಯಪುಸ್ತಕಗಳೆಂಬ ಸಾಲಿನಲ್ಲಿ ಮತ್ತೊಂದು ಸೇರಿದೆ ಅಷ್ಟೆ.

ತರಗತಿಯ ವಾಸ್ತವದಲ್ಲಿ ನಿರರ್ಗಳವಾಗಿ ಪಾಠದ ಸಾಲುಗಳನ್ನೇ ಓದಲು ಬಾರದ, ಅಕ್ಷರಗಳನ್ನು ಗುರುತಿಸಲು ಬಾರದ ವಿದ್ಯಾರ್ಥಿಗಳಿದ್ದಾರೆ. ಲಿಪಿ ಗ್ರಹಿಕೆಯ ಕೌಶಲದಲ್ಲಿ ಎಂಟನೆಯ ತರಗತಿಯ ಶೇಕಡಾ ನಲವತ್ತರಷ್ಟು ಮಕ್ಕಳು ಹಿಂದುಳಿದಿದ್ದಾರೆ. ನೂತನ ಪಠ್ಯದ ಆಧಾರದ ಮೇಲೆ ಇವರು, ಡಿ.ವಿ.ಜಿ.ಯವರ 'ಮಂಕುತಿಮ್ಮನ ಕಗ್ಗ', 'ಜ್ಞಾಪಕ ಚಿತ್ರ ಶಾಲೆ', ತ.ಸು.ಶ್ಯಾಮರಾಯರ 'ವಚನ ಭಾರತ', ಡಾ.ಕೆ.ಸಿ.ಶಿವಾರಡ್ಡಿಯವರು ಸಂಪಾದಿಸಿದ 'ಕುವೆಂಪು ಸಮಗ್ರ ಗದ್ಯ' ಸಂಪುಟ, ಪ್ರೊ.ಜಿ.ವೆಂಕಟಸುಬ್ಬಯ್ಯನವರು ಸಂಪಾದಿಸಿದ 'ಮುದ್ದಣ ಭಂಡಾರ' ಸಂಪುಟ ೧ ಮತ್ತು ೨, ಪ್ರೊ.ದೇ.ಜವರೇಗೌಡರು ಸಂಪಾದಿಸಿದ 'ಕನಕ ಸಂಪುಟ', ಮೈಸೂರು ವಿಶ್ವ ವಿದ್ಯಾಲಯದ ಪ್ರಾಚ್ಯ ವಿದ್ಯಾ ಸಂಶೋಧನಾಲಯ ಪ್ರಕಟಿಸಿರುವ 'ಕುಮಾರ ವಾಲ್ಮೀಕಿ ವಿರಚಿತ ತೊರವೆ ರಾಮಾಯಣ' ಸಂಪುಟ೧ ಮತ್ತು ೨ ಇತ್ಯಾದಿ ಕೃತಿಗಳನ್ನು ಓದಬೇಕಾಗಿದೆ.

ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮದ ಪ್ರೌಢಶಾಲೆಗಳ ವಿದ್ಯಾರ್ಥಿಗಳ ಕನ್ನಡ ಭಾಷಾ ಕಲಿಕಾ ಸಾಮರ್ಥ್ಯಗಳಿಗೂ, ನೂತನ ಪಠ್ಯಪುಸ್ತಕದ ನಿರೀಕ್ಷೆಗಳನ್ನೂ ತುಲನೆ ಮಾಡಿ ನೋಡಿದಾಗ, ಭಾಷಾ ಕಲಿಕೆಯಲ್ಲಿ ಪಠ್ಯಪುಸ್ತಕಗಳಿಗೂ ವಿದ್ಯಾರ್ಥಿಗಳಿಗೂ ಇರುವ ಆಳವಾದ ಕಂದರ ಎದ್ದು ಕಾಣುತ್ತದೆ. ಪಠ್ಯಪುಸ್ತಕದ ಆಶಯಗಳು, ಶಿಕ್ಷಕರ ಧೋರಣೆಗಳು, ವಿದ್ಯಾರ್ಥಿಗಳ ಅಸಹಾಯಕ ಸ್ಥಿತಿಯ ನಡುವೆ ಯಾವುದೇ ರೀತಿಯ ಹೊಂದಾಣಿಕೆಯ ಬೆಸುಗೆ ಕಾಣಿಸುತ್ತಿಲ್ಲ. ರಾಷ್ಟ್ರೀಯ ಶಿಕ್ಷಣ ನೀತಿಯ ಹಾಗೂ ಕರ್ನಾಟಕದ ಸಾರ್ವಜನಿಕ ಶಿಕ್ಷಣ ಇಲಾಖೆಯ ಗುರಿ ಹಾಗೂ ಧ್ಯೇಯೋದ್ದೇಶಗಳು ಸಾಧಿತವಾಗದೇ ಇರುವ ವಾಸ್ತವ ಚಿತ್ರಣ ಸ್ಪಷ್ಟವಾಗಿ ಗೋಚರವಾಗುತ್ತದೆ. ಹತ್ತರ ಜೊತೆಯಲ್ಲಿ ಹನ್ನೊಂದೆಂಬಂತೆ ಪಠ್ಯಪುಸ್ತಕಗಳು ರಚನೆಯಾದರೆ, ಪ್ರೌಢಶಾಲಾ ಕನ್ನಡ ಕಲಿಕಾ ಸನ್ನಿವೇಶದಲ್ಲಿರುವ ಸಮಸ್ಯೆಗಳು ಸಮಸ್ಯೆಗಳಾಗಿಯೇ ಉಳಿಯುತ್ತವೆ. ಅದಾಗದಂತೆ ನೋಡಬೇಕಾದ ಗುರುತರ ಜವಾಬ್ದಾರಿ ಸರ್ಕಾರದ ಹಾಗೂ ಶಿಕ್ಷಣ ಇಲಾಖೆಯ ಮೇಲಿದೆ.

## ೩.೧೦ ವಿದ್ಯಾರ್ಥಿಗಳ ಭಾಷಿಕ ಸಾಮರ್ಥ್ಯ ಹಾಗೂ ಪಠ್ಯಪುಸ್ತಕಗಳು.

ಅಧ್ಯಯನದ ಫಲಿತಗಳ ಆಧಾರದ ಮೇಲೆ ಪ್ರೌಢಶಾಲಾ ವಿದ್ಯಾರ್ಥಿಗಳ ಭಾಷಾ ಕಲಿಕೆಯ ಕೌಶಲಗಳ ಮಟ್ಟವನ್ನು ಕಂಡುಕೊಳ್ಳಲಾಗಿದೆ. ಓದು ಬರಹಗಳ ಕೌಶಲಗಳಲ್ಲಿ ಶೇಕಡಾ ಐವತ್ತಕ್ಕೂ ಹೆಚ್ಚು ವಿದ್ಯಾರ್ಥಿಗಳು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಶಿಕ್ಷಣ ಇಲಾಖೆಯು ಭಾಷಾ ಬೋಧನೆಯ ಉದ್ದೇಶಗಳನ್ನು ನಿರ್ಧರಿಸುತ್ತದೆ. ಆದರೆ, ಅದರ ಜೊತೆಗೆ ಸಾಧಕ ಬಾಧಕಗಳ ಕುರಿತು, ಅದರ ಫಲಿತಗಳ ಕುರಿತು ಅಧ್ಯಯನ ಮಾಡುವ ಆವಶ್ಯಕತೆಯಿದೆ. ಪಠ್ಯರಚನಾ ಸಮಿತಿಯು, ರಾಷ್ಟ್ರೀಯ ಶಿಕ್ಷಣ ನೀತಿಯ ಆಧಾರದ ಮೇಲೆ ನಿರ್ದಿಷ್ಟ ಗುರಿ ಹಾಗೂ ಉದ್ದೇಶಗಳನ್ನು ಇಟ್ಟುಕೊಂಡು ಪಠ್ಯಪುಸ್ತಕವನ್ನು ರಚಿಸುತ್ತದೆ. ಆದರೆ ಈ ಸಮಿತಿಗೆ ಪಠ್ಯ ರಚನೆಯ ಮೌಲ್ಯ ಮಾಪನ ಕಾರ್ಯವನ್ನು ನಿರ್ವಹಿಸುವ ಹೊಣೆಗಾರಿಕೆಯನ್ನು ನೀಡಿದರೆ, ಪಠ್ಯಪುಸ್ತಕಗಳಿಗೂ ವಿದ್ಯಾರ್ಥಿಗಳಿಗೂ ಇರುವ ಅಂತರದ ಮಟ್ಟ ಕಡಿಮೆಯಾಗಬಹುದು.

ಎಂಟು, ಒಂಭತ್ತು ಹಾಗೂ ಹತ್ತನೆಯ ತರಗತಿಗಳಲ್ಲಿ ಒಟ್ಟು ಶೇಕಡಾ ೭.೬೬ ರಷ್ಟು ವಿದ್ಯಾರ್ಥಿಗಳು ಮಾತ್ರ ಕನ್ನಡವನ್ನು ನಿರರ್ಗಳವಾಗಿ ಹಾಗೂ ಸ್ಪಷ್ಟವಾಗಿ ಓದಬಲ್ಲರು. ಶೇಕಡಾ ೧೭ ರಷ್ಟು ವಿದ್ಯಾರ್ಥಿಗಳ ಅಕ್ಷರಜ್ಞಾನವು ತೀರಾ ಕಳಪೆಯಾಗಿದ್ದು ಅವರದ್ದೇ ತರಗತಿಯ ಒಂದು ವಾಕ್ಯವನ್ನು ಕೂಡಾ ವ್ಯತ್ಯಾಸವಿಲ್ಲದೆ ಓದಲಾರರು. ಓದುವಿಕೆಯಲ್ಲಿ ಶೇಕಡಾ ೫೪ ಕ್ಕಿಂತ ಹೆಚ್ಚಿನ ವಿದ್ಯಾರ್ಥಿಗಳು ಅವರದ್ದೇ ತರಗತಿಯ ಎರಡು ವಾಕ್ಯಗಳನ್ನು ಕೂಡಾ ನಿರರ್ಗಳವಾಗಿ ಓದಲಾರರು. ಇವರು ಪಠ್ಯಪುಸ್ತಕವನ್ನು ಸ್ವಾಧ್ಯಾಯದ ಮೂಲಕ ಓದಿ ಅರ್ಥೈಸಿಕೊಳ್ಳಲು ಸಾಧ್ಯವಿಲ್ಲದ ಹಂತದಲ್ಲಿದ್ದಾರೆ. ಅಧ್ಯಯನದ ವಿಚಾರವಾಗಿ ಅಧ್ಯಾಪಕರನ್ನು ಆಶ್ರಯಿಸಲೇಬೇಕಾದ ಅನಿವಾರ್ಯತೆ ಇವರಿಗಿದೆ.

ಸರಕಾರಿ ಹಾಗೂ ಅನುದಾನಿತ ಪ್ರೌಢಶಾಲೆಗಳ ಶೇಕಡಾ ೭ ರಷ್ಟು ವಿದ್ಯಾರ್ಥಿಗಳು ಮಾತ್ರ ಉಚ್ಚರಿತ ಧ್ವನಿಯನ್ನು ಗ್ರಹಿಸಿ ಅದನ್ನು ನಿರ್ದಿಷ್ಟವಾದ ಲಿಪಿಸಂಕೇತಗಳನ್ನು ಬಳಸಿ ಬರೆಯಬಲ್ಲರು. ಶೇಕಡಾ ೫೫ಕ್ಕಿಂತಲೂ ಹೆಚ್ಚಿನ ವಿದ್ಯಾರ್ಥಿಗಳು ಅವರದ್ದೇ ತರಗತಿಯ ಪಠ್ಯಪುಸ್ತಕದ ಬರವಣಿಗೆಯ ಕೌಶಲದಲ್ಲಿ ಉತ್ತೀರ್ಣತೆಯ ಮಾನದಂಡವಾದ ಶೇಕಡಾ ೩೫ ಅಂಕಗಳನ್ನು ಪಡೆಯಲು ಸಾಧ್ಯವಾಗದವರಿದ್ದಾರೆ. ಕೇಳಿದ ಧ್ವನಿಯನ್ನು ನಿರ್ದಿಷ್ಟವಾದ ರೇಖಾ ವಿನ್ಯಾಸಕ್ಕೆ ಬಳಸಿಕೊಳ್ಳಲು ಗೊಂದಲ ಪಡುವ ವಿದ್ಯಾರ್ಥಿಗಳು ಸ್ವಾಧ್ಯಾಯವನ್ನು ಮಾಡಲಾರರು. ಇವರು ಪಠ್ಯ ವಿಚಾರಕ್ಕಾಗಿ ಅಧ್ಯಾಪಕರನ್ನು ಅವಲಂಬಿಸಲೇಬೇಕಾದ ಅನಿವಾರ್ಯ ಪರಿಸ್ಥಿತಿಯಲ್ಲಿದ್ದಾರೆ.

ಅಧ್ಯಯನದ ಸಂದರ್ಭದಲ್ಲಿ ಕಂಡುಬಂದ ಮಾಹಿತಿಯ ಆಧಾರದಲ್ಲಿ ಸರಕಾರಿ ಹಾಗೂ ಅನುದಾನಿತ ಪ್ರೌಢಶಾಲೆಗಳ ಶೇಕಡಾ ೭.೬೬ ರಷ್ಟು ವಿದ್ಯಾರ್ಥಿಗಳು ಮಾತ್ರ ಕನ್ನಡವನ್ನು ನಿರರ್ಗಳವಾಗಿ ಹಾಗೂ ಸ್ಪಷ್ಟವಾಗಿ ಓದಬಲ್ಲರು. ಶೇಕಡಾ ೭ ರಷ್ಟು ವಿದ್ಯಾರ್ಥಿಗಳು ಮಾತ್ರ ಉಚ್ಚರಿತ ಧ್ವನಿಯನ್ನು ಗ್ರಹಿಸಿ ಅದನ್ನು ನಿರ್ದಿಷ್ಟವಾದ

ಲಿಪಿಸಂಕೇತಗಳನ್ನು ಬಳಸಿ ಬರೆಯಬಲ್ಲರು ಎಂದ ಮಾತ್ರಕ್ಕೆ, ಈ ಶೇಕಡಾ ೭ ರಷ್ಟು ವಿದ್ಯಾರ್ಥಿಗಳು ಪಠ್ಯಗಳನ್ನು ಸ್ವಾಧ್ಯಾಯದ ಮೂಲಕ ಓದಿ ಅರ್ಥಮಾಡಿಕೊಳ್ಳಬಲ್ಲರು ಎಂದು ಕೂಡಾ ತೀರ್ಮಾನಿಸುವ ಹಾಗಿಲ್ಲ. ಒಟ್ಟಿನಲ್ಲಿ ಎಂಟು, ಒಂಭತ್ತು ಹಾಗೂ ಹತ್ತನೆಯ ತರಗತಿಯ ಬಹುತೇಕ ವಿದ್ಯಾರ್ಥಿಗಳು ಪಾಠ ಪದ್ಯಗಳನ್ನು ಅರ್ಥಮಾಡಿಕೊಳ್ಳಲು ಅಧ್ಯಾಪಕರನ್ನು ಅವಲಂಬಿಸಲೇಬೇಕಾದ ಅನಿವಾರ್ಯ ಪರಿಸ್ಥಿತಿಯಲ್ಲಿದ್ದಾರೆ. ಪರೀಕ್ಷೆಗಳಲ್ಲಿ ಉತ್ತೀರ್ಣತೆಯ ಮಾನದಂಡದ ಅಂಕಗಳಿಗಾಗಿ ಕಂಠಪಾಠದ ಮೊರೆಯನ್ನು ಹೋಗುತ್ತಲೇ ಇದ್ದಾರೆ. ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು, ಮಕ್ಕಳ ಅವಶ್ಯಕತೆಗೆ ಸ್ಪಂದಿಸುವುದು, ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿಪಡಿಸುವುದು ಎಂಬ ರಾಷ್ಟ್ರೀಯ ಪಠ್ಯಕ್ರಮದ ವೈಶಿಷ್ಟ್ಯಗಳು ತರಗತಿಯಲ್ಲಿ ಸಾಧಿತವಾಗುತ್ತಿಲ್ಲ.

ಭಾಷೆಯ ಮೂಲಭೂತ ಕೌಶಲಗಳಾದ ಆಲಿಸುವಿಕೆ, ಮಾತನಾಡುವಿಕೆ, ಓದು ಹಾಗೂ ಬರಹದ ಕೌಶಲಗಳ ಗಳಿಕೆಯಲ್ಲಿ ವಿದ್ಯಾರ್ಥಿಗಳು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇದಕ್ಕೆ ಕಾರಣಗಳು ಹಲವಿದ್ದರೂ ವಿದ್ಯಾರ್ಥಿಗಳ ಕಲಿಕಾ ಸಾಮರ್ಥ್ಯದತ್ತ ಶಿಕ್ಷಣ ಇಲಾಖೆಯು ದಿವ್ಯ ನಿರ್ಲಕ್ಷ್ಯ ತೋರಿದೆ. ನೂತನ ಪಠ್ಯಪುಸ್ತಕ ತರುವಲ್ಲಿ ತೋರುವ ಆಸಕ್ತಿಯನ್ನು ವಿದ್ಯಾರ್ಥಿಗಳ ಭಾಷಾ ಕಲಿಕೆಯ ಸಾಮರ್ಥ್ಯ ಗಳಿಕೆಯ ಕಡೆಗೂ ಹರಿಸಬೇಕಾಗಿದೆ. ಜೊತೆಗೆ ತರಗತಿಯ ವಾಸ್ತವದ ಕಡೆಗೂ ಗಮನವನ್ನು ಹರಿಸಬೇಕಾಗಿದೆ.

ಪ್ರೌಢಶಾಲಾ ಕನ್ನಡ ಭಾಷಾ ಶಿಕ್ಷಕರೊಂದಿಗೆ ಹಾಗೂ ವಿದ್ಯಾರ್ಥಿಗಳೊಂದಿಗೆ ಚರ್ಚೆ ನಡೆಸಿ ಗಮನಿಸಿದ ವಿಶ್ಲೇಷಿಸಿದ ವಿಚಾರಗಳ ಹಿನ್ನೆಲೆಯಲ್ಲಿ ಕೆಲವು ವಿಚಾರಗಳನ್ನು ಇಲಾಖೆ ಗಮನಿಸಬೇಕಿದೆ. ಪಠ್ಯಪುಸ್ತಕಗಳ ಅನೇಕ ವಿಚಾರಗಳು ವಿದ್ಯಾರ್ಥಿಗಳ ಮಟ್ಟವನ್ನು ಮೀರಿವೆ. ಹೊಸಗನ್ನಡವನ್ನೇ ವಿದ್ಯಾರ್ಥಿಗಳು ನಿರರ್ಗಳವಾಗಿ ಓದಲಾರರು. ಹಳಗನ್ನಡವನ್ನು ವಿದ್ಯಾರ್ಥಿಗಳು ಅರ್ಥಮಾಡಿಕೊಳ್ಳಲಾರರು. ಕೆಲವು ಪಾಠ–ಪದ್ಯಗಳು, ವ್ಯಾಕರಣ, ಛಂದಸ್ಸು, ಅಲಂಕಾರ ವಿಚಾರಗಳು ವಿದ್ಯಾರ್ಥಿಗಳ ಮಟ್ಟವನ್ನು ಮೀರಿವೆ. ವೃದ್ಧಿಸಂಧಿ, ಯಣ್, ಶ್ಚುತ್ವ ಜಸ್ತ್ವ, ಅನುನಾಸಿಕ ಸಂಧಿಗಳು, ಸಂಯೋಜಿತ, ಮಿಶ್ರವಾಕ್ಯ, ಉತ್ತ, ದ, ವ ಎಂಬ ಕಾಲಸೂಚಕ ಪ್ರತ್ಯಯಗಳು, ಅವ್ಯಯಗಳು, ಕರ್ತರಿ, ಕರ್ಮಣಿ ಪ್ರಯೋಗಗಳು, ಬಹುವ್ರೀಹಿ, ಅಂಶಿ, ಗಮಕ ಸಮಾಸಗಳು ಇತ್ಯಾದಿ ಅಂಶಗಳು ವಿದ್ಯಾರ್ಥಿಗಳ ಮಟ್ಟಕ್ಕೆ ನಿಲುಕದ ವಿಚಾರಗಳಾಗಿವೆ. ಇವುಗಳನ್ನು ಅನಗತ್ಯವಾಗಿ ಪರಿಚಯಿಸುವ ಅಗತ್ಯವೂ ಇಲ್ಲ.

ಕನ್ನಡ ಪಠ್ಯದ ಭಾಷಾ ಕೌಶಲಗಳ ಕಲಿಕೆಗಾಗಿ ಚಟುವಟಿಕೆಗಳನ್ನು ಬರೀ ಪುಸ್ತಕದಲ್ಲಿ ಹೇಳಿದರೆ ಸಾಲದು. ಶಾಲಾ ಕಟ್ಟಡದ ತರಗತಿಯ ವಿನ್ಯಾಸವು ಉಪನ್ಯಾಸ ಮಾದರಿಯದ್ದಾಗಿದೆ. ಚಟುವಟಿಕೆಗಳಿಗೆ ಅದರದ್ದೇ ಆದ ವೇದಿಕೆಯಿರುವ ತರಗತಿಗಳೂ ಬೇಕಾಗುತ್ತವೆ. ಭಾಷಾ ಪ್ರಯೋಗಾಲಯಗಳು ಬೇಕಾಗುತ್ತವೆ. ದೃಕ್ ಶ್ರವಣೋಪಕರಣಗಳ ಅವಶ್ಯಕತೆಯಿರಬೇಕಾಗುತ್ತದೆ. ಬಹಳಷ್ಟು ಶಿಕ್ಷಕರಲ್ಲಿ ಕುಶಲತೆ, ಸೃಜನಶೀಲತೆ, ಉತ್ಸಾಹ, ಬೋಧನಾ ಕೌಶಲದ ಮಟ್ಟ ಕಡಿಮೆಯಿದೆ. ಹೊಸ ಬದಲಾವಣೆಗೆ ಒಗ್ಗಿಕೊಳ್ಳಲಾರದಷ್ಟು

ಜಡತ್ವ ಹೊಂದಿದ ಶಿಕ್ಷಕರನ್ನು ಚುರುಕುಗೊಳಿಸಿ ಅಣಿಗೊಳಿಸಬೇಕದೆ. ಸರಿಯಾಗಿ ತರಗತಿಗೆ ಹೋಗದ ಶಿಕ್ಷಕರಿದ್ದಾರೆ. ವೈಯಕ್ತಿಕ ಕೆಲಸಗಳಲ್ಲಿಯೇ ನಿರತರಾಗಿರುವ ಶಿಕ್ಷಕರಿದ್ದಾರೆ. ಈ ಕುರಿತು ಇಲಾಖೆಯು ಸೂಕ್ತ ಕ್ರಮಗಳನ್ನು ಕೈಗೊಳ್ಳುವುದರೊಂದಿಗೆ ಸೂಕ್ತ ತರಬೇತಿಯನ್ನು ನೀಡುವ ವ್ಯವಸ್ಥೆಯನ್ನು ಮಾಡಬೇಕಾಗಿದೆ. ಪ್ರಾಥಮಿಕ ಶಾಲಾ ಬೋಧನೆಯು ಉತ್ತಮ ಗುಣಮಟ್ಟದಲ್ಲಿ ನಡೆಯದ ಕಾರಣ ಪ್ರೌಢ ಶಾಲಾ ವಾತಾವರಣದಲ್ಲಿ ಈ ಪರಿಸ್ಥಿತಿ ಬಂದಿದೆ ಎಂಬ ಮಾತು ಹೆಚ್ಚು ಧ್ವನಿಸುತ್ತಿದೆ; ಈ ಕುರಿತು ಅಧ್ಯಯನ ನಡೆಯಬೇಕಿದೆ. ವಿದ್ಯಾರ್ಥಿಗಳ ಹಿನ್ನೆಲೆ ಅತ್ಯಂತ ಕಳಪೆಯಾಗಿರುತ್ತದೆ. ಪೋಷಕರಿಗೆ ಶಿಕ್ಷಣದ ಅರಿವಿರುವುದಿಲ್ಲ. ಶಾಲೆಯ ಬಗ್ಗೆ ಹಾಗೂ ಶಿಕ್ಷಕರ ಬಗ್ಗೆ ಕೆಲವು ವಿದ್ಯಾರ್ಥಿಗಳು ಹಾಗೂ ಪೋಷಕರು ಗೌರವಯುತ ಭಾವನೆಯನ್ನು ಹೊಂದಿಲ್ಲ. ಹೆಚ್ಚಿನ ವಿದ್ಯಾರ್ಥಿಗಳಿಗೆ ಗುರಿ ಎಂಬುದಿಲ್ಲ. ಭವಿಷ್ಯದ ಕುರಿತು ಚಿಂತಿಸುವುದಿಲ್ಲ. ಬಿಸಿಯೂಟಕ್ಕಾಗಿ ಶಾಲೆಗೆ ಬರುವ ವಿದ್ಯಾರ್ಥಿಗಳೂ ಇದ್ದಾರೆ. ಮಾದಕ ವ್ಯಸನದ ಹಿನ್ನೆಲೆಯ ವಿದ್ಯಾರ್ಥಿಗಳೂ ಇದ್ದಾರೆ.

## ೩.೧೦.೧ ಪಠ್ಯಗಳಲ್ಲಿ ವ್ಯಾಕರಣ, ಅಲಂಕಾರ ಹಾಗೂ ಛಂದಸ್ಸುಗಳು

ವ್ಯಾಕರಣದಿಂದ ಭಾಷೆ ಹಾಗೂ ಭಾಷೆಯಿಂದಾಗಿ ವ್ಯಾಕರಣ ಎಂಬ ವಿಚಾರ ಮಂಡನೆಯಲ್ಲಿ ಭಾಷೆಯಿಂದಾಗಿ ವ್ಯಾಕರಣ ಎಂಬ ಅಂಶವೇ ಪ್ರಧಾನವಾಗುತ್ತದೆ. ಮೊದಲು ಹುಟ್ಟಿದ್ದು ಭಾಷೆ. ಕಾಲಾಂತರದಲ್ಲಿ ಅದಕ್ಕೊಂದು ಚೌಕಟ್ಟು ಸಿದ್ಧವಾದಾಗ ಅದರೊಳಗಿನ ನಿಯಮಗಳನ್ನು ಗಮನಿಸಿ, ಅದನ್ನು ಭಾಷೆಯಿಂದ ಪ್ರತ್ಯೇಕಿಸಿ ನೋಡಿದಾಗ ವ್ಯಾಕರಣಾಂಶಗಳು ಗೋಚರಿಸಿದವು. ಭಾಷೆಯೊಳಗಿರುವ, ಭಾಷೆಯೊಳಗೆ ವ್ಯವಸ್ಥಿತವಾಗಿ ಜೋಡಣೆಯಾಗಿರುವ ಅಚ್ಚುಕಟ್ಟಾದ ನಿಯಮಗಳನ್ನು ಗುರುತಿಸಿ, ಪ್ರತ್ಯೇಕಿಸಿ, ಹೆಸರಿಸಿ, ವಿವರಿಸಿ, ವಿಶ್ಲೇಶಿಸಿ 'ವ್ಯಾಕರಣ ಶಾಸ್ತ್ರ' ಎಂದು ಹೆಸರಿಟ್ಟದ್ದು ಮಾತ್ರ ಭಾಷೆ ಹುಟ್ಟಿ ಅದೆಷ್ಟೋ ವರ್ಷಗಳ ಬಳಿಕವೇ. ವ್ಯಾಕರಣವೆಂಬುದು ಒಂದು ಬಂಧ. ಭಾಷೆಗೊಂದು ರೂಪವನ್ನು, ಭಾಷೆಗೊಂದಷ್ಟು ನಿರ್ಬಂಧಗಳನ್ನು, ಭಾಷೆಗೊಂದು ನಿರ್ದಿಷ್ಟ ಹಾಗೂ ಖಚಿತ ಚೌಕಟ್ಟನ್ನು ಒದಗಿಸುವುದು ವ್ಯಾಕರಣ.

ಬುದ್ಧಿಪೂರ್ವಕವಾಗಿ ಮನುಷ್ಯ ಭಾಷೆಯನ್ನು ರೂಢಿಸಿಕೊಂಡಾಗ ವ್ಯಾಕರಣವೂ ಅದರೊಂದಿಗೇ ಹುಟ್ಟಿಕೊಂಡಿತ್ತು. ಆದರೆ ಅದನ್ನು ಗುರುತಿಸಿ ಪ್ರತ್ಯೇಕಿಸಿದ್ದು ನಂತರದ ಕಾಲಘಟ್ಟದಲ್ಲಿ. ಪ್ರತಿಯೊಂದು ಭಾಷೆಗೂ ತನ್ನದೇ ಆದ ವೈಶಿಷ್ಟ್ಯವಿರುತ್ತದೆ. ತನ್ನದೇ ಆದ ಗುಣ ಲಕ್ಷಣಗಳಿರುತ್ತದೆ. ತನ್ನದೇ ಆದ ಚೌಕಟ್ಟಿರುತ್ತದೆ. ಅಂತೆಯೇ ಪ್ರತಿಯೊಂದು ಭಾಷೆಗೂ ತನ್ನದೇ ಆದ ವ್ಯಾಕರಣ ಬಂಧಗಳಿರುತ್ತವೆ. ವ್ಯಾಕರಣವಿಲ್ಲದೆ ಭಾಷೆ ಇಲ್ಲ. ವ್ಯಾಕರಣವಿಲ್ಲದ ಭಾಷೆಯೂ ಇಲ್ಲ.

ಔಪಚಾರಿಕವಾದ ಶಾಲಾ ಪರಿಸರದಲ್ಲಿ ವಿದ್ಯಾರ್ಥಿಗಳಿಗೆ ಕನ್ನಡ ಭಾಷೆಯನ್ನು ಕಲಿಸುವಾಗ ವ್ಯಾಕರಣ, ಛಂದಸ್ಸು ಹಾಗೂ ಅಲಂಕಾರಗಳನ್ನು ಎಷ್ಟು ಕಲಿಸಬೇಕು? ಹೇಗೆ

ತಿಳಿಯುತ್ತದೆ. ಅಲ್ಲದೆ, ವ್ಯಾಕರಣ ಕಲಿಸುವ ರೀತಿ ಹಾಗೂ ವ್ಯಾಕರಣದ ಭಾರವು ವಿದ್ಯಾರ್ಥಿಗಳ ಕನ್ನಡ ಭಾಷಾ ಕಲಿಕೆಯನ್ನು ಕುಂಠಿತಗೊಳಿಸುತ್ತಿವೆ ಎಂಬುದು ತಿಳಿದುಬಂದಿದೆ.

ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಿಗೆ, ಪ್ರೌಢಶಾಲಾ ವಿದ್ಯಾರ್ಥಿಗಳಿಗೆ, ಪದವಿಪೂರ್ವ ತರಗತಿಯ ವಿದ್ಯಾರ್ಥಿಗಳಿಗೆ, ಪದವಿ ವಿದ್ಯಾರ್ಥಿಗಳಿಗೆ, ಸ್ನಾತಕೋತ್ತರ ಪದವಿ ತರಗತಿಯ ವಿದ್ಯಾರ್ಥಿಗಳಿಗೆ ವ್ಯಾಕರಣ, ಅಲಂಕಾರ, ಛಂದಸ್ಸುಗಳ ವಿಚಾರಗಳನ್ನು ಏರಿಕೆಯ ಕ್ರಮದಲ್ಲಿ ಹಂಚಿಲ್ಲ. ಎಲ್ಲವನ್ನೂ ಪ್ರಾಥಮಿಕ ಹಾಗೂ ಪ್ರೌಢಶಾಲಾ ಪ್ರಥಮ ಭಾಷಾ ಕನ್ನಡ ಪಠ್ಯಗಳಲ್ಲಿ ಸೇರಿಸಲಾಗಿದೆ. ಪದವಿ ಪೂರ್ವ ಹಾಗೂ ಪದವಿ ವಿದ್ಯಾರ್ಥಿಗಳಿಗೆ ಈ ಹೊರೆಯನ್ನು ಅತ್ಯಂತ ಕಡಿಮೆ ಮಾಡಲಾಗಿದೆ.

ವ್ಯಾಕರಣ, ಅಲಂಕಾರ, ಛಂದಸ್ಸುಗಳ ಸಮಗ್ರ ಜ್ಞಾನವು ಕಲಿಸುವವರಿಗೆ ಇರಬೇಕು. ಕಲಿಯುವವರ ಅಗತ್ಯಕ್ಕೆ ತಕ್ಕಂತೆ ಎಷ್ಟು ಬೇಕೆಂಬುದನ್ನು, ಹಾಗೂ ಹೇಗೆ ಕಲಿಸಬೇಕೆಂಬುದನ್ನು ಕಲಿಸುವವರು ಅರಿತು ಬೋಧಿಸಬೇಕು. ಸೂಕ್ಷ್ಮವಾಗಿ ಗಮನಿಸಿದರೆ ವ್ಯಾಕರಣ ಅಲಂಕಾರ, ಛಂದಸ್ಸುಗಳ ಕುರಿತು ಹಾಗೂ ಅವುಗಳನ್ನು ಹೇಗೆ ಬೋಧಿಸಬೇಕೆಂಬ ಕುರಿತು ಶಿಕ್ಷಕರಿಗೆ ಎಲ್ಲಿಯೂ ಸಮಗ್ರ ತರಬೇತಿಯಿಲ್ಲ. ಪದವಿ ಪೂರ್ವ ಹಂತದಲ್ಲಿ ವ್ಯಾಕರಣವಿಲ್ಲ. ಪದವಿ ಹಂತದಲ್ಲೂ ಆಳ ಅಧ್ಯಯನಗಳಿಲ್ಲ. ಬಿ.ಎಡ್ ತರಬೇತಿಯಂತೂ ಹನ್ನೊಂದು ತಿಂಗಳ ತರಾತುರಿಯ ತರಬೇತಿ. ಇಲ್ಲಿಯೂ ವ್ಯಾಕರಣದ ಕುರಿತು ಹಾಗೂ ವ್ಯಾಕರಣ ಭಾಗವನ್ನು ಹೇಗೆ ಬೋಧಿಸಬೇಕೆಂಬ ಕುರಿತು ಆಳ ಅಧ್ಯಯನಗಳಿಲ್ಲ. ಇದರಿಂದಾಗಿ ಹೆಚ್ಚಿನ ಶಾಲೆಗಳಲ್ಲಿ ಶಿಕ್ಷಕರು ಪಠ್ಯಪುಸ್ತಕದಲ್ಲಿ ನಿಗದಿಯಾಗಿರುವ ವ್ಯಾಕರಣವನ್ನು ಯಥಾವತ್ತಾಗಿ ಓದಿಸಿ, ವಿವರಿಸಿ, ಟಿಪ್ಪಣಿ ಪುಸ್ತಕದಲ್ಲಿ ಬರೆಸಿಬಿಡುತ್ತಿದ್ದಾರೆ. ಇದನ್ನು ಅರಗಿಸಿಕೊಳ್ಳಲಾಗದ ವಿದ್ಯಾರ್ಥಿಗಳು ಕಂಠಪಾಠ ಮಾಡುತ್ತಿದ್ದಾರೆ. ಪರೀಕ್ಷೆಗಳಲ್ಲಿ ಬರೆದರೆ ಅಂಕ, ಬರೆಯದಿದ್ದರೆ ಇಲ್ಲ ಎಂಬ ಪರಿಸ್ಥಿತಿ ಪ್ರೌಢಶಾಲಾ ಕನ್ನಡ ಕಲಿಕಾ ವಾತಾವರಣದಲ್ಲಿರುವುದರಿಂದ ಕಂಠಪಾಠವು ವಿದ್ಯಾರ್ಥಿಗಳಿಗೆ ಅನಿವಾರ್ಯವಾಗಿದೆ.

ಮಾತೃಭಾಷಾ ಬೋಧನೆಯ ಉದ್ದೇಶಗಳ ಹಿನ್ನೆಲೆಯಲ್ಲಿ ಪಠ್ಯಪುಸ್ತಕ ರಚನಾ ಸಮಿತಿಯು ಇಂತಿಷ್ಟು ವ್ಯಾಕರಣ, ಛಂದಸ್ಸು, ಅಲಂಕಾರಗಳನ್ನು ಪಠ್ಯಗಳಲ್ಲಿ ಸೇರಿಸಿಬಿಡುತ್ತದೆ. ಇಲ್ಲಿಗೆ ಪಠ್ಯಪುಸ್ತಕ ರಚನಾ ಸಮಿತಿಯ ಕಾರ್ಯ ಮುಗಿಯುತ್ತದೆ. ಪಠ್ಯಪುಸ್ತಕ ರಚನಾ ಸಮಿತಿಯವರು ನೀಡಿದ ಪಠ್ಯಕ್ರಮವನ್ನು ನಿಗದಿತ ಅವಧಿಯೊಳಗೆ ಬೋಧಿಸಿದರೆ ಶಿಕ್ಷಕರ ಕೆಲಸ ಮುಗಿದಂತೆ. ವಿದ್ಯಾರ್ಥಿಗಳು ಪಡುವ ಬವಣೆಯನ್ನು ವಿದ್ಯಾರ್ಥಿಯ ನೆಲೆಯಿಂದ ಗಮನಿಸುವವರೇ ಇಲ್ಲವಾಗಿದೆ. ಪಠ್ಯಪುಸ್ತಕ ರಚಿಸಿದವರಿಗೆ ಆರು ತಿಂಗಳ ಅಥವಾ ಒಂದು ವರ್ಷದ ಬಳಿಕ ತಾವು ರಚಿಸಿದ ಪಠ್ಯವನ್ನು ಅಧ್ಯಾಪಕರು ಹೇಗೆ ಸ್ವೀಕರಿಸಿದ್ದಾರೆ? ತಮ್ಮ ರಚನಾ ಕೌಶಲದಿಂದ ವಿದ್ಯಾರ್ಥಿಗಳು ಭಾಷೆಯಲ್ಲಿ ಎಷ್ಟು ಪ್ರಭುತ್ವ ಸಾಧಿಸಿದ್ದಾರೆಂಬುದನ್ನು ತಿಳಿಯಲು ನೇಮಿಸಬೇಕಾಗಿದೆ. ಇದರಿಂದ ಪಠ್ಯಪುಸ್ತಕ ರಚನೆಯ ಮೌಲ್ಯಮಾಪನವೂ ನಡೆದಂತಾಗುತ್ತದೆ.

## ೩.೧೦.೨ ಮಕ್ಕಳ ಗ್ರಹಿಕೆಗೆ ಮೀರಿದ ವ್ಯಾಕರಣ, ಛಂದಸ್ಸು ಹಾಗೂ ಅಲಂಕಾರಗಳ ಭಾಗಗಳು

ಅಧ್ಯಯನದಲ್ಲಿ ಕಂಡುಕೊಂಡ ಫಲಿತದಂತೆ ಈ ಕೆಳಗಿನ ವ್ಯಾಕರಣ ಭಾಗ, ಅಲಂಕಾರ, ಛಂದಸ್ಸುಗಳ ಭಾಗಗಳು ವಿದ್ಯಾರ್ಥಿಗಳಿಗೆ ಹೊರೆಯಾಗಿದೆ ಎಂಬುದು ತಿಳಿದು ಬರುತ್ತದೆ. ಹಲವು ಅಧ್ಯಾಪಕರೂ ಕೂಡ ಇವುಗಳನ್ನು ವಿದ್ಯಾರ್ಥಿಗಳಿಗೆ ಅರ್ಥಮಾಡಿಸುವುದು ಕಷ್ಟದ ಕೆಲಸ ಎಂಬ ಅಭಿಪ್ರಾಯವನ್ನು ನೀಡಿದ್ದಾರೆ. ಕೆಲವು ವ್ಯಾಕರಣಾಂಶಗಳು ಇಂದಿನ ಕನ್ನಡದಲ್ಲಿ ಬಳಕೆಯಾಗುತ್ತಿಲ್ಲ. ಬಳಕೆಯಲ್ಲಿ ಬೇರೆಯೇ ನಿಯಮಗಳಿವೆ ಎಂಬ ವಿಚಾರವೂ ಗಮನಾರ್ಹ.

ವೃದ್ಧಿಸಂಧಿ, ಯಣ್, ಶ್ಚುತ್ವ, ಜಸ್ತ್ವ, ಅನುನಾಸಿಕ ಸಂಧಿಗಳು, ಸಂಯೋಜಿತ ವಾಕ್ಯ, ಮಿಶ್ರವಾಕ್ಯ, ಉತ್ತ, ದ, ವ ಎಂಬ ಕಾಲಸೂಚಕ ಪ್ರತ್ಯಯಗಳು, ಅವ್ಯಯಗಳು, ಕರ್ತರಿ, ಕರ್ಮಣಿ ಪ್ರಯೋಗಗಳು, ಬಹುವ್ರೀಹಿ, ಅಂಶಿ, ಗಮಕ ಸಮಾಸಗಳು, ಸಕರ್ಮಕ ಅಕರ್ಮಕ ಧಾತುಗಳು, ಕೃದಂತ, ಕೃದಂತ ನಾಮ, ವರ್ತಮಾನ ಕೃದಂತ, ಭೂತ ಕೃದಂತ, ನಿಷೇಧ ಕೃದಂತ, ಕೃದಂತ ಭಾವ ನಾಮ, ಕೃದಂತಾವ್ಯಗಳು. ತದ್ಧಿತ ಪ್ರತ್ಯಯ, ತದ್ಧಿತಾಂತ ನಾಮ, ತದ್ಧಿತಾಂತ ಭಾವ ನಾಮ, ತದ್ಧಿತಾಂತಾವ್ಯಯಗಳು. ಸುಳಾದಿ, ಉಗಾಭೋಗಗಳ ವಿವರಣೆ, ಉತ್ಪ್ರೇಕ್ಷಾಲಂಕಾರ, ದೃಷ್ಟಾಂತಾಲಂಕಾರ, ಅರ್ಥಾಂತರನ್ಯಾಸಾಲಂಕಾರ, ಶ್ಲೇಷಾಲಂಕಾರ, ವೃತ್ಯನುಪ್ರಾಸ, ಛೇಕನುಪ್ರಾಸ, ಯಮಕಾಲಂಕಾರ, ಚಿತ್ರಕವಿತ್ವ, ಉಪಮೇಯಲುಪ್ತೋಪಮೆ, ಧರ್ಮಲುಪ್ತೋಪಮೆ, ವಾಚಕಲುಪ್ತೋಪಮೆ, ವಾಚಕಧರ್ಮಲುಪ್ತೋಪಮೆ, ವಾಚಕಧರ್ಮೋಪಮಾನಲುಪ್ತೋಪಮೆ...... ಇವುಗಳನ್ನು ವಿದ್ಯಾರ್ಥಿಗಳಿಗೆ ಹೊರೆಯಾಗುವಂತೆ ಪಠ್ಯಗಳಲ್ಲಿ ತುಂಬಿಸಲಾಗಿದೆ. ಮಕ್ಕಳ ಮಟ್ಟಕ್ಕೆ ಮೀರಿದ ಈ ವಿಚಾರಗಳಿಂದ ವಿದ್ಯಾರ್ಥಿಗಳ ಕನ್ನಡ ಕಲಿಕಾ ಆಸಕ್ತಿ ಕುಂಠಿತಗೊಳ್ಳುತ್ತಿದೆ.

"ಕಾವ್ಯಕ್ಕೆ ಪ್ರಮಾಣಂ ಕರ್ಣಂ; ವ್ಯಾಕರಣಮೇಕೇಂಬೆಯೇಂ ಮರೆವುದಕ್ಕೆ ಕಲ್ತು' ಎಂದು ಕವಿ ಕುವೆಂಪು ಅವರು ಉದ್ಗರಿಸಿದ್ದರು. ನಿಜ. ಕವಿಗೆ ವ್ಯಾಕರಣದ ಹಂಗು ಅಷ್ಟಾಗಿ ಇಲ್ಲ. 'ಗದ್ಯದ ವ್ಯಾಕರಣ ನಿಯಮಗಳನ್ನು ಮುರಿಯುವುದೇ ಪದ್ಯದ ಹಾಗೂ ಕವಿಯ ಕೆಲಸ. ನಮ್ಮ ಶಾಲೆಗಳಲ್ಲಿ ವ್ಯಾಕರಣ ನಿಯಮಗಳನ್ನು ಕಲಿತು ಮರೆಯುವ ಕೆಲಸ ಚೆನ್ನಾಗಿ ನಡೆಯುತ್ತಿದೆ. ನಾವು ವಿದ್ಯಾರ್ಥಿಗಳಿಗೆ ಹತ್ತು ಹದಿನೈದು ವರ್ಷಗಳ ಕಾಲ ಎರಡು, ಮೂರು ಭಾಷೆಗಳನ್ನು ಕಲಿಸುತ್ತೇವೆ. ವ್ಯಾಕರಣ ಕಲಿಯದಿದ್ದರೆ ಮಕ್ಕಳಿಗೆ ಭಾಷೆ ಬರುವುದಿಲ್ಲ ಎಂದು ಭ್ರಮಿಸಿ ವಿದ್ಯಾಭ್ಯಾಸದ ವಿವಿಧ ಹಂತಗಳಲ್ಲಿ ವ್ಯಾಕರಣವನ್ನು ಮಕ್ಕಳ ತಲೆಗೆ ತುರುಕುತ್ತೇವೆ. ಹೀಗೆ ಮಾಡುವಾಗ ಯಾವ ಶಾಲೆಗೂ ಹೋಗದೆ ಯಾವ ವ್ಯಾಕರಣವನ್ನೂ ಅಭ್ಯಾಸ ಮಾಡದೆ ಸಹಜವಾಗಿ ಚೆನ್ನಾಗಿ ಮಾತನಾಡಲು ಕಲಿತ ಹಳ್ಳಿಗರನ್ನು ಮರೆಯುತ್ತೇವೆ. ಶಾಲೆಗೆ ಹೋಗಿ ವ್ಯಾಕರಣವನ್ನು ಕಲಿತ ನಮ್ಮ ವಿದ್ಯಾರ್ಥಿಗಳು ಈ ಹಳ್ಳಿಗರಿಗಿಂತಲೂ ಕೆಟ್ಟದಾಗಿ ಭಾಷೆಯನ್ನು ಬಳಸುವುದನ್ನು ಕಂಡಾಗ ದಿಗಿಲಾಗಿತ್ತದೆ"[೧೦].

ಪ್ರೌಢಶಾಲೆಗಳಲ್ಲಿ ಕನ್ನಡ ಬೋಧನೆಯ ಗುರಿಗಳನ್ನು ಗೊತ್ತುಪಡಿಸಲಾಗಿದ್ದರೂ ಬಹಳಷ್ಟು ಶಿಕ್ಷಕರ ಗಮನ ಇತ್ತ ಹರಿದಂತೆ ಕಾಣುವುದಿಲ್ಲ. ನಾವು ಏಕೆ ಬೋಧಿಸುತ್ತಿದ್ದೇವೆ ಎಂಬ ಸ್ಪಷ್ಟ ಕಲ್ಪನೆ ಇಲ್ಲದೇ ಹೋದರೆ ಗುರಿ ತಪ್ಪಿ ಎತ್ತಲೋ ಸಾಗುತ್ತೇವೆ. ಇದರ ಪರಿಣಾಮವಾಗಿ ನಮ್ಮ ಶಾಲೆ ಕಾಲೇಜುಗಳಿಂದ ಹೊರಬರುವ ವಿದ್ಯಾರ್ಥಿಗಳ ಭಾಷಾ ಶಕ್ತಿ ನಿರೀಕ್ಷಿತ ಮಟ್ಟದಲ್ಲಿ ಬೆಳೆಯುತ್ತಿಲ್ಲ. ಉದ್ದಿಷ್ಟಗಳ ಸ್ಪಷ್ಟ ಕಲ್ಪನೆ ಶಿಕ್ಷಕರಿಗೆ ಇರುತ್ತಿದ್ದರೆ ಅವುಗಳ ಈಡೇರಿಕೆಗಾಗಿ ಹಲವಾರು ಚಟುವಟಿಕೆಗಳನ್ನು ಕಾಲಕಾಲಕ್ಕೆ ಹಮ್ಮಿಕೊಳ್ಳಲು ಯತ್ನಿಸುತ್ತಿದ್ದರು. ಎಷ್ಟೋ ಶಿಕ್ಷಕರು ಪಠ್ಯಸೂಚಿಯನ್ನು ಗಮನಿಸುವ, ಬೋಧನೋದ್ದೇಶಗಳೇನೆಂದು ತಿಳಿದುಕೊಳ್ಳುವ ಗೋಜಿಗೆ ಹೋಗುವುದಿಲ್ಲ.

ಪಠ್ಯಪುಸ್ತಕಗಳಲ್ಲಿರುವ ಪಾಠಗಳನ್ನು ಯಾವ ಉದ್ದೇಶದಿಂದ ಆಯ್ಕೆ ಮಾಡಿರಬಹುದು? ಈ ಪಾಠಗಳ ಬೋಧನೆಯಿಂದ ಸಾಧಿಸಬೇಕಾದ ಮೌಲ್ಯಗಳೇನು?, ವಿದ್ಯಾರ್ಥಿಗಳಿಗೆ ಪ್ರಯೋಜನಕಾರಿಯಾಗುವಂತೆ ಬೋಧಿಸುವುದು ಹೇಗೆ? ಎಂಬ ಅಂಶಗಳ ಕಡೆಗೆ ಶಿಕ್ಷಕರ ಗಮನ ಅಷ್ಟಾಗಿ ಹರಿಯುತ್ತಲಿಲ್ಲ. "ಬಹಳಷ್ಟು ಶಿಕ್ಷಕರ ಕೈಯಲ್ಲಿ ಕನ್ನಡ ಪಠ್ಯ ಪುಸ್ತಕವು ವ್ಯಾಖ್ಯಾನದ ಸಲಕರಣೆಯಾಗಿಬಿಟ್ಟಿದೆ. ಇದರಿಂದಾಗಿ ಸಾಹಿತ್ಯವನ್ನು ಸ್ವಯಂ ಗ್ರಹಿಸುವ, ಸವಿಯುವ ಅವಕಾಶಗಳು ವಿದ್ಯಾರ್ಥಿಗಳಿಗೆ ದೊರೆಯುತ್ತಿಲ್ಲ. ಸಾಹಿತ್ಯ ರಸಾಸ್ವಾಧನೆಯ ಮಾರ್ಗಗಳನ್ನು ಶಿಕ್ಷಕರು ತೆರೆದು ತೋರಬೇಕಲ್ಲದೆ ತಾವೇ ರಸವನ್ನೆಲ್ಲ ಹೀರಿ ಉಗುಳುವುದಲ್ಲ! ಈಗ ಅನೇಕ ಕಡೆಗಳಲ್ಲಿ ಆಗುತ್ತಿರುವುದು ಇದೇ. ಇದರಿಂದಾಗಿ ವಿದ್ಯಾರ್ಥಿಗಳು ಭವಿಷ್ಯ ಜೀವನದಲ್ಲಿ ಪರತಂತ್ರರಾಗಿ, ಏನನ್ನಾದರೂ ಸ್ವತಂತ್ರವಾಗಿ ಓದಿ ವ್ಯಾಖ್ಯಾನಿಸುವ, ವಿಮರ್ಶಿಸುವ ಶಕ್ತಿ ಇಲ್ಲದೆ ಸೊರಗುತ್ತಾರೆ"[೧೧].

ಅಧ್ಯಯನದ ಸಂದರ್ಭಗಳಲ್ಲಿ ಅಧ್ಯಾಪಕರೊಂದಿಗೆ ಹಾಗೂ ವಿದ್ಯಾರ್ಥಿಗಳೊಂದಿಗೆ ನಡೆಸಿದ ಚರ್ಚೆ ಹಾಗೂ ಸಂಗ್ರಹಿಸಿದ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಹಾಗೂ ಅವಲೋಕನ ವಿಧಾನದ ಮೂಲಕ ಕಂಡುಕೊಂಡ ಅಂಶಗಳು ಹಾಗೂ ತರಗತಿಗಳಲ್ಲಿ ನಡೆಸಿದ ಚಟುವಟಿಕೆಗಳ ಫಲಿತಗಳ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರೌಢಶಾಲಾ ಪ್ರಥಮ ಭಾಷಾ ಕನ್ನಡ ಪಠ್ಯ ಪುಸ್ತಕಗಳ ಕುರಿತು ಈ ಕೆಳಗಿನ ತೀರ್ಮಾನಗಳಿಗೆ ಬರಲಾಗಿದೆ.

- ❖ ಕನ್ನಡ ಭಾಷಾ ಕಲಿಕೆ ಮತ್ತು ಭಾಷಾ ಕೌಶಲಗಳ ಕಲಿಕೆಯು ಪಠ್ಯಪುಸ್ತಕಕ್ಕೆ ಮಾತ್ರ ಸೀಮಿತವಾಗಿದೆ.
- ❖ ಪಠ್ಯಗಳ ರಚನೆಯು ಅತ್ಯಂತ ಸಾಂಪ್ರದಾಯಿಕ ಧೋರಣೆಯಿಂದಲೇ ರಚಿತವಾಗಿದೆ.
- ❖ ಆಧುನಿಕ ಸಿದ್ಧಾಂತ, ತಂತ್ರಜ್ಞಾನಗಳನ್ನು ಪಠ್ಯಗಳು ಸಂಪೂರ್ಣವಾಗಿ ಕಡೆಗಣಿಸಿವೆ.

- ಪಠ್ಯದಲ್ಲಿನ ವಿಚಾರಗಳನ್ನು ನೆನಪಿಟ್ಟುಕೊಂಡು ಪರೀಕ್ಷೆಗಳಲ್ಲಿ ಬರೆದು ಉತ್ತೀರ್ಣವಾಗುವುದೇ ಕನ್ನಡದ ಕಲಿಕೆ ಎಂಬ ಪರಿಸ್ಥಿತಿಯಿದೆ.
- ಪಠ್ಯ ಪುಸ್ತಕಗಳಲ್ಲಿನ ಅನೇಕ ವಿಚಾರಗಳು ವಿದ್ಯಾರ್ಥಿಗಳ ಮಟ್ಟವನ್ನು ಮೀರಿವೆ.
- ಬಳಕೆಯಲ್ಲಿ ಇಲ್ಲದ ಅನೇಕ ಬಗೆಯ ವ್ಯಾಕರಣಾಂಶಗಳನ್ನು ಈಗಲೂ ಬಳಕೆಯಲ್ಲಿರುವಂತೆ ಬಿಂಬಿಸಿ ಪಠ್ಯಗಳಲ್ಲಿ ಅಳವಡಿಸಲಾಗಿದೆ.
- ವ್ಯಾಕರಣಾಂಶಗಳು ಪ್ರಾದೇಶಿಕವಾಗಿ ಭಿನ್ನವಾಗಿದ್ದರೂ ಅದನ್ನು ಪಠ್ಯಗಳಲ್ಲಿ ಗುರುತಿಸುವ ಹಾಗೂ ವಿದ್ಯಾರ್ಥಿಗಳಿಗೆ ಪರಿಚಯಿಸುವ ಪ್ರಯತ್ನವಿಲ್ಲ.
- ಆಧುನಿಕ ಬೋಧನೋಪಕರಣಗಳನ್ನು ಉಪಯೋಗಿಸಿಕೊಂಡು ಕಲಿಕೆಯನ್ನು ಸ್ಥಿರೀಕರಿಸುವ ಪ್ರಯತ್ನಗಳಿಲ್ಲ.
- ಗದ್ಯ, ಕಾವ್ಯ, ವ್ಯಾಕರಣ, ಛಂದಸ್ಸು ಹಾಗೂ ಲೇಖನಗಳ ಬೋಧನೆ ಆಧುನಿಕ ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ನಡೆಯುತ್ತಿಲ್ಲ.
- ಕನ್ನಡ ಸಾಹಿತ್ಯ ಚರಿತ್ರೆಯ ಸಮಗ್ರ ವಿಚಾರಗಳನ್ನು ಪ್ರೌಢಶಾಲಾ ಹಂತದಲ್ಲಿನ ಪಠ್ಯ ಪುಸ್ತಕಗಳಲ್ಲಿ ತಂದಿರುವುದರಿಂದ ವಿದ್ಯಾರ್ಥಿಗಳ ಭಾಷಾ ಕಲಿಕಾ ಸನ್ನಿವೇಶಗಳಲ್ಲಿ ಸಾಹಿತ್ಯದ ಕಲಿಕೆಯೇ ಪ್ರಧಾನವಾಗಿದೆ.
- ಹೆಚ್ಚಿನ ವಿದ್ಯಾರ್ಥಿಗಳು ಲಿಪಿಗ್ರಹಿಕೆಯ ಸಂದರ್ಭದಲ್ಲಿಯೇ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವುದರಿಂದ ಪಠ್ಯಗಳನ್ನು ಸ್ವ ಅಧ್ಯಯನ ಮಾಡಲು ಸಾಧ್ಯವಾಗುತ್ತಿಲ್ಲ.
- ಪ್ರಸ್ತುತ ಪ್ರೌಢಶಾಲಾ ಪ್ರಥಮ ಭಾಷಾ ಪಠ್ಯ ಪುಸ್ತಕಗಳುವಿದ್ಯಾರ್ಥಿಗಳ ಸ್ವ ಕಲಿಕೆಗೆ ಪೂರಕವಾಗಿಲ್ಲ. ಶಿಕ್ಷಕ ಕೇಂದ್ರಿತ ಹಾಗೂ ಮೌಲ್ಯ ಮಾಪನ ಕೇಂದ್ರಿತವಾಗಿವೆ.
- ಪ್ರತೀ ಪಾಠ ಪದ್ಯಗಳ ಕೊನೆಯಲ್ಲಿ ಕೆಲವು ಸಿದ್ಧಮಾದರಿಯ ಪ್ರಶ್ನೆಗಳನ್ನು ಕೊಟ್ಟಿರುವುದರಿಂದ ಹಾಗೂ ಮೌಲ್ಯಮಾಪನಕ್ಕೆ ಆ ಪ್ರಶ್ನೆಗಳನ್ನೇ ಕೇಳುವುದರಿಂದ ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಗಳನ್ನು ಬರೆದು ಕಂಠಪಾಠಮಾಡುವುದೇ ಕನ್ನಡದ ಕಲಿಕೆಯೆಂಬಂತಾಗಿದೆ.
- ಕನ್ನಡ ಭಾಷಾ ಪಠ್ಯ ರಚನಾ ತತ್ವಗಳಲ್ಲಿ ಆಧುನಿಕ ಭಾಷಾ ವಿಜ್ಞಾನದ ದೃಷ್ಟಿಗಿಂತ ಮಾನವೀಯ ಮೌಲ್ಯ, ಸಾಂಸ್ಕೃತಿಕ ತತ್ವ, ಸಾಹಿತ್ಯ ತತ್ವ, ಪ್ರಜಾಪ್ರಭುತ್ವ ಹಾಗೂ ರಾಷ್ಟ್ರೀಯ ಭಾವೈಕ್ಯತೆ, ಜೀವನಾನುಭವ ಮೊದಲಾದ ತತ್ವಗಳಿಗೆ ಮಹತ್ವ ನೀಡಲಾಗಿದೆ. ಇದರಿಂದಾಗಿಕನ್ನಡ ಕಲಿಕೆ ಹಾಗೂ ಬೋಧನೆಯ ಸನ್ನಿವೇಶಗಳಲ್ಲಿ ಭಾಷಾ ವಿಜ್ಞಾನದ ಚಟುವಟಿಕೆಗಳಿಗಿಂತ ಉಳಿದ ಮೌಲ್ಯಗಳ ಕಲಿಕೆಯು ಪ್ರಧಾನವಾಗಿ ಕನ್ನಡ ಕಲಿಕೆಯೆಂದರೆ ಮೌಲ್ಯಗಳಿಕೆ ಎಂಬ ಪರಿಸ್ಥಿತಿ ನಿರ್ಮಾಣವಾಗಿದೆ.

❖ ೨೦೦೫ ರ ರಾಷ್ಟ್ರೀಯ ಪಠ್ಯಕ್ರಮವು ಹೇಳುವ ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸುವುದು. ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು. ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು. ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು. ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು. ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು. ವಿಷಯಗಳ ಮೇರೆಗಳನ್ನು ಮುರಿದು ಅವುಗಳ ಸಮಗ್ರ ದೃಷ್ಟಿಯ ಬೋಧನೆಯನ್ನು ಅಳವಡಿಸುವುದು. ಶಾಲೆಯ ಹೊರಬದುಕಿಗೆ ಜ್ಞಾನಸಂಯೋಜನೆ. ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿಪಡಿಸುವುದು ಎಂಬ ವಿಚಾರಗಳಿಗೂ ಹಾಗೂ ಪಠ್ಯಗಳ ಬೋಧನೆಯಿಂದಾಗುತ್ತಿರುವ ಪರಿಣಾಮಗಳಿಗೂ ಹೊಂದಿಕೆಯಾಗದಿರುವಂಥಹ ಸನ್ನಿವೇಶಗಳೇ ಕಂಡುಬರುತ್ತಿವೆ.

**ಅಡಿಟಿಪ್ಪಣಿಗಳು**

೧. ಡಾ. ಮಹಾಬಲೇಶ್ವರ ರಾವ್. ೧೯೯೯. **ಶಿಕ್ಷಣ ಸಂವಹನ.** ಪುಟ ೫೯,೬೦. ಕೈಂತಜೆ ಪ್ರಕಾಶನ. ದಕ್ಷಿಣ ಕನ್ನಡ .

೨. **'ಕನ್ನಡ ಸಂಪದ', ಕನ್ನಡ ವಿಷಯ ಸಂಪದೀಕರಣ ಮತ್ತು ವಿಷಯಾಧಾರಿತ ಬೋಧನಾ ಪದ್ಧತಿ.**ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು.

೩. **'ಶಿಕ್ಷಕರ ಕೈಪಿಡಿ.'** ಹತ್ತನೆಯ ತರಗತಿ, ಪ್ರಥಮ ಭಾಷೆ ಕನ್ನಡ. ಪುಟ೧೫, ಪಠ್ಯಪುಸ್ತಕ ನಿರ್ದೇಶನಾಲಯ ಬೆಂಗಳೂರು.

೪. **'ಶಿಕ್ಷಕರ ಕೈಪಿಡಿ.'** ಹತ್ತನೆಯ ತರಗತಿ, ಪ್ರಥಮ ಭಾಷೆ ಕನ್ನಡ. ಪುಟ ೪೮ ರಿಂದ ೫೧ ಪಠ್ಯಪುಸ್ತಕ ನಿರ್ದೇಶನಾಲಯ ಬೆಂಗಳೂರು.

೫. **'ಕನ್ನಡ ಕಸ್ತೂರಿ'** ಎಂಟು, ಒಂಭತ್ತು ಮತ್ತು ಹತ್ತನೆಯ ತರಗತಿಯ ಕನ್ನಡ ಪ್ರಥಮ ಭಾಷಾ ಪಠ್ಯಪುಸ್ತಕಗಳು-೨೦೧೦

೬. **'ಸಿರಿ ಕನ್ನಡ'**. ಪ್ರಥಮಭಾಷಾ ಕನ್ನಡ ಪಠ್ಯ ಪುಸ್ತಕದ ಮುನ್ನುಡಿ. ಎಂಟನೆಯ ತರಗತಿ-೨೦೧೨.

೭. **'ಸಿರಿ ಕನ್ನಡ'**. ಅಧ್ಯಕ್ಷರ ಮಾತು. ಪ್ರಥಮಭಾಷಾ ಕನ್ನಡ ಪಠ್ಯ ಪುಸ್ತಕ. ಎಂಟನೆಯ ತರಗತಿ-೨೦೧೨

೮. **'ಸಿರಿ ಕನ್ನಡ'**. ಪ್ರಥಮಭಾಷಾ ಕನ್ನಡ ಪಠ್ಯ ಪುಸ್ತಕ. ಎಂಟನೆಯ ತರಗತಿ-೨೦೧೨.

೯. **'ಸಿರಿ ಕನ್ನಡ'**. ಪ್ರಥಮಭಾಷಾ ಕನ್ನಡ ಪಠ್ಯ ಪುಸ್ತಕ. ಎಂಟನೆಯ ತರಗತಿ-೨೦೧೨.

೧೦. ಡಾ. ಮಹಾಬಲೇಶ್ವರ ರಾವ್, ೧೯೯. **'ಶಿಕ್ಷಣ ಸಂವಹನ.'** ಪುಟ ೫೬. ಕೈಂತಜೆ ಪ್ರಕಾಶನ. ಮಂಗಳೂರು.

೧೧. ಡಾ. ಮಹಾಬಲೇಶ್ವರ ರಾವ್. ೧೯೯೯. **ಶಿಕ್ಷಣ ಸಂವಹನ.** ಪುಟ ೫೯,೬೦. ಕೈಂತಜೆ ಪ್ರಕಾಶನ. ದಕ್ಷಿಣ ಕನ್ನಡ.

# ಅಧ್ಯಾಯ - ೪

## ಕನ್ನಡ ಭಾಷಾ ಕಲಿಕೆಯಲ್ಲಿ ಸಾಹಿತ್ಯದ ಸ್ವರೂಪ

೪.೧. ಕಾವ್ಯ

೪.೨. ಗದ್ಯ

೪.೩. ವ್ಯಾಕರಣ

೪.೪. ಲೇಖನ

೪.೫. ಭಾಷಾ ಪಠ್ಯರಚನಾ ತತ್ವ ಮತ್ತು ಸದಾಚಾರ ಸಂಹಿತೆ

೪.೬. ಭಾಷಾ ಕಲಿಕೆ ಮತ್ತು ಸಾಹಿತ್ಯ ಕಲಿಕೆಗಳ ಕುರಿತು ಶಿಕ್ಷಕರ ಅಭಿಪ್ರಾಯ

೪

# ಕನ್ನಡ ಭಾಷಾ ಕಲಿಕೆಯಲ್ಲಿ ಸಾಹಿತ್ಯದ ಸ್ವರೂಪ

ಭಾಷೆಯ ಕಲಿಕೆಗೂ, ಭಾಷೆಯ ಕುರಿತ ಕಲಿಕೆಗೂ ಹಾಗೂ ಭಾಷೆಯ ಮೂಲಕ ಕಲಿಕೆಗೂ ಸೂಕ್ಷ್ಮವಾದ ಬಹಳಷ್ಟು ವ್ಯತ್ಯಾಸಗಳಿವೆ. ಕರ್ನಾಟಕದ ಸನ್ನಿವೇಶದ ಭಾಷಾ ಕಲಿಕೆಯಲ್ಲಿ ಈ ಕುರಿತು ಹಲವು ಗೊಂದಲಗಳಿವೆ. ಇಲ್ಲಿಯ ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಗಳಲ್ಲಿ, ಭಾಷೆಯ ಕಲಿಕೆಯೂ ಇದೆ, ಭಾಷೆಯ ಕುರಿತ ಕಲಿಕೆಯೂ ಇದೆ ಹಾಗೂ ಭಾಷೆಯ ಮೂಲಕ ಕಲಿಕೆಯೂ ಇದೆ. ಭಾಷೆಯ ಕಲಿಕೆಯೊಂದಿಗೆ ಭಾಷೆಯ ಕುರಿತ ಕಲಿಕೆಯನ್ನು ಅಂದರೆ ಸಾಹಿತ್ಯದ ಕಲಿಕೆಯನ್ನು ಮಿಶ್ರಣ ಮಾಡಿರುವುದರಿಂದ ಭಾಷಾ ಬೋಧನಾ ಉದ್ದೇಶಗಳಲ್ಲಿ ಗೊಂದಲಗಳಿವೆ.

ಕರ್ನಾಟಕದಲ್ಲಿ ಹಲವು ಕನ್ನಡಗಳಿವೆ. ಉಚ್ಚಾರಣೆ, ಧ್ವನಿ, ಅರ್ಥ, ಉಚ್ಚಾರಣಾ ವೇಗ, ಶೈಲಿ ಇತ್ಯಾದಿಗಳಿಂದಾಗಿ ಆ ಎಲ್ಲಾ ಕನ್ನಡದ ಸಂದರ್ಭಗಳು ಭಿನ್ನವಾಗಿವೆ. ಗ್ರಂಥಸ್ಥ ಕನ್ನಡಕ್ಕೂ ಆಡುನುಡಿಗೂ ಬಹಳಷ್ಟು ವ್ಯತ್ಯಾಸಗಳಿವೆ. ಮಕ್ಕಳು ಗ್ರಂಥಸ್ಥ ಕನ್ನಡವನ್ನು ಅಥವಾ ಪಠ್ಯದಲ್ಲಿರುವ ಕನ್ನಡವನ್ನು ಆಡುಮಾತಾಗಿ ಎಲ್ಲಿಯೂ ಬಳಸುವುದಿಲ್ಲ ಎಂಬುದು ಅತ್ಯಂತ ಮುಖ್ಯವಾಗಿ ಗಮನಿಸಬೇಕಾದ ಸಂಗತಿ. ಕರ್ನಾಟಕದ ಸಂದರ್ಭದಲ್ಲಿ ಪ್ರೌಢಶಾಲಾ ಶಿಕ್ಷಣದ ಭಾಷಾ ಕಲಿಕೆಯು ಕೇಂದ್ರೀಕೃತವಾಗಿದೆ. ಹಲವು ಕನ್ನಡಗಳ ಹಿನ್ನೆಲೆಯಿರುವುದರಿಂದ ಕನ್ನಡ ಭಾಷಾ ಕಲಿಕೆ, ಕನ್ನಡ ಪಠ್ಯಪುಸ್ತಕಗಳು, ಕನ್ನಡ ಸಾಹಿತ್ಯ-ವ್ಯಾಕರಣ ವಿಚಾರಗಳು ವಿಕೇಂದ್ರೀಕರಣಗೊಳ್ಳಬೇಕಿದೆ ಎಂದು ಹಲವು ಶಿಕ್ಷಕರು ಅಭಿಪ್ರಾಯಪಟ್ಟಿದ್ದಾರೆ. ಗ್ರಂಥಸ್ಥ ಕನ್ನಡದ ಸಾಹಿತ್ಯವನ್ನು ಪಠ್ಯದಲ್ಲಿ ಕೇಂದ್ರೀಕರಿಸಿ ಬಳಸಿಕೊಳ್ಳಲಾಗಿದೆ. ಸಾಂಪ್ರದಾಯಿಕ ಮನೋಭಾವದ ಹಿನ್ನೆಲೆಯ ಬೋಧನೆಯ ಕಾರಣದಿಂದಾಗಿ ಹಾಗೂ ಆಧುನಿಕ ಭಾಷಾವಿಜ್ಞಾನದ ಗಂಭೀರ ಅಳವಡಿಕೆಯು ಪಠ್ಯದಲ್ಲಿ ಮತ್ತು ಶಿಕ್ಷಕರ ತರಬೇತಿಗಳಲ್ಲಿ ಇಲ್ಲದ ಕಾರಣಗಳಿಂದಾಗಿ ಪ್ರೌಢಶಾಲಾ ಕನ್ನಡ ಕಲಿಕಾ ಸನ್ನಿವೇಶಗಳಲ್ಲಿ ಅನೇಕ ಸಮಸ್ಯೆಗಳು ವಿದ್ಯಾರ್ಥಿಗಳನ್ನು ಕಾಡುತ್ತಿವೆ. ಅಲ್ಲದೆ, ಏಳು ಎಂಟು ವರ್ಷಗಳ ಬೋಧನೆಯಿದ್ದರೂ ವಿದ್ಯಾರ್ಥಿಗಳಿಗೆ ಭಾಷಿಕ ಕನಿಷ್ಠ ಸಾಮರ್ಥ್ಯಗಳು ಸಿದ್ಧಿಸುತ್ತಿಲ್ಲ.

"ಮಕ್ಕಳ ಶೈಕ್ಷಣಿಕ ಜೀವನದ ಅವಿಭಾಜ್ಯ ಅಂಗವೇ ಭಾಷಾಸಂಪನ್ನತೆ. ಮಕ್ಕಳ ಸರ್ವಾಂಗೀಣ ಬೆಳವಣಿಗೆಯಾಗುವುದು ಭಾಷಾಕಲಿಕೆ ಮತ್ತು ಬಳಕೆಯಿಂದಲೇ ಎಂಬುದು ಸತ್ಯ. ಮಕ್ಕಳ ವಯಸ್ಸು, ಮಾನಸಿಕ ಬೆಳವಣಿಗೆ ಹಾಗೂ ಸಾಂಸ್ಕೃತಿಕ ನೆಲೆಗೆ ಅನುವಾಗುವಂತೆ ಭಾಷಿಕ ಕಲಿಕಾ ಪೂರಕ ವಿಚಾರವನ್ನು ಗಂಭೀರವಾಗಿ ಪರಿಗಣಿಸಿ, ಕನ್ನಡ ಭಾಷಾ ಕಲಿಕೆಯ ಜತೆಯಲ್ಲೇ ಪರೋಕ್ಷವಾಗಿ ಪರಿಚಯಿಸಿ ಉದ್ದೀಪನಗೊಳಿಸುವ ಉದ್ದೇಶದಿಂದ ಪಠ್ಯಪುಸ್ತಕಗಳನ್ನು ಪರಿಷ್ಕಾರಗೊಳಿಸಿ ರಚಿಸಲಾಗಿದೆ"[೧]. ಯಾವುದೇ ಭಾಷೆಯಾಗಲೀ

ಆಲಿಸುವ ಮತ್ತು ಮಾತೃಭಾಷೆಯಲ್ಲಿ ಮಾತನಾಡುವ ಕೌಶಲವನ್ನು ಅನೌಪಚಾರಿಕ ಶಿಕ್ಷಣ ಸಂಸ್ಥೆಯಾದ ಕುಟುಂಬದಲ್ಲಿ ಮಕ್ಕಳು ಗಳಿಸಿಕೊಂಡಿರುತ್ತಾರೆ. ಈ ಕೌಶಲವು ಆಯಾಯ ಪ್ರದೇಶದ ಕನ್ನಡದ್ದೇ ಹೊರತು ಗ್ರಂಥಸ್ಥ ಕನ್ನಡವನ್ನಲ್ಲ ಎಂಬುದು ಬಹುಮುಖ್ಯ ಸಂಗತಿ. ಶ್ರವಣ ರೂಪೀ ಭಾಷೆಯನ್ನು ಚಾಕ್ಷುಷವಾಗಿ ವಿದ್ಯಾರ್ಥಿಗಳು ನೋಡುವುದು ಶಿಕ್ಷಣ ಸಂಸ್ಥೆಯ ಪಠ್ಯಪುಸ್ತಕಗಳಲ್ಲಿ. ಆಡುವ ಭಾಷೆಗೊಂದು ಲಿಪಿಯನ್ನು ಹೊಂದಿಸಿಕೊಳ್ಳುವ ಕೆಲಸ ಶಾಲೆಯಲ್ಲಾಗುತ್ತದೆ. ತಾನು ಉಚ್ಚರಿಸುವ ಧ್ವನಿಗೆ ಒಂದು ರೇಖಾ ವಿನ್ಯಾಸವನ್ನು ಹೊಂದಿಸಿಕೊಂಡು ಭಾಷೆಯನ್ನು ಬರವಣಿಗೆಯನ್ನಾಗಿಸುವ, ಭಾಷೆಯನ್ನು ಓದುವಿಕೆಯನ್ನಾಗಿ ರೂಪಿಸಿ, ರೂಢಿಸಿಕೊಳ್ಳುವ ಕೌಶಲದ ಕಲಿಕೆ ಭಾಷಾ ತರಗತಿಗಳಲ್ಲಿ ನಡೆಯುತ್ತದೆ. ಇಲ್ಲಿ ಮಾತೃಭಾಷೆಗಿಂತ ಭಿನ್ನವಾದ ಗ್ರಂಥಸ್ಥಭಾಷೆಯ ಕನ್ನಡವನ್ನು ಕಲಿಸಲಾಗುತ್ತದೆ. ಮಗುವಿಗೆ ಅದೆಷ್ಟೋ ಪದ, ವಾಕ್ಯ, ವ್ಯಾಕರಣಾಂಶಗಳು ತನ್ನ ಆಡುನುಡಿಯದ್ದಾಗಿರದ ಕಾರಣ ಬಹಳಷ್ಟು ಗೊಂದಲಗಳನ್ನು ಎದುರಿಸುತ್ತಿರುತ್ತದೆ. ಗ್ರಂಥಸ್ಥ ಕನ್ನಡವನ್ನು ಮಗುವಿಗೆ ಕಲಿಸುವಾಗಲೂ ಅದರ ಮಾತೃಭಾಷೆಯಲ್ಲಿಯೇ ಕಲಿಕೆ ನಡೆಯುತ್ತಿದೆ ಎಂಬ ಕಲ್ಪನೆ ನಮ್ಮಲ್ಲಿದೆ. ವಾಸ್ತವವಾಗಿ ಮಗುವು ಇದನ್ನು ಹೊಸ ಭಾಷೆ ಕಲಿಯುವ ರೀತಿಯಲ್ಲಿ ಇರುತ್ತದೆ ಎಂಬುದು ಇಲಾಖೆಗಾಗಲೀ, ಅಧ್ಯಾಪಕರಿಗಾಗಲೀ ತಿಳಿಯುತ್ತಿಲ್ಲ. ಮಕ್ಕಳ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಗಮನಿಸಿದರೆ ಮಾತ್ರ ಈ ಅಂಶ ತಿಳಿದುಬರುತ್ತದೆ. ಆಧುನಿಕ ಭಾಷಾ ವಿಜ್ಞಾನದ ದಟ್ಟ ಅರಿವು ಇರದಿರುವುದರಿಂದ ಶಿಕ್ಷಕರು, ಇಲಾಖೆಯು ತಮಗೆ ಪೂರೈಸುವ ಪಠ್ಯದ ಬೋಧನೆಯೇ ಕನ್ನಡ ಭಾಷಾ ಕಲಿಕೆಯೆಂದು ಬೋಧಿಸುವ ವಾತಾವರಣವಿದೆ.

ಕರ್ನಾಟಕದಲ್ಲಿ ಕನ್ನಡ ಮಾಧ್ಯಮದವರಿಗೂ ಕೂಡ ಕನ್ನಡವನ್ನು ಎಷ್ಟು ವರ್ಷದವರೆಗೆ ಭಾಷೆಯನ್ನಾಗಿ ಕಲಿಸಬೇಕು? ಎಲ್ಲಿಯ ನಂತರ ಸಾಹಿತ್ಯ ಕಲಿಕೆಯನ್ನು ಮಾಡಿಸಬೇಕು? ಭಾಷೆಯಲ್ಲಿ ಸಾಹಿತ್ಯದ ಸ್ಥಾನವೇನು? ಪ್ರೌಢಶಾಲಾ ಮಟ್ಟದ ಕನ್ನಡ ಭಾಷಾ ಪಠ್ಯಕ್ಕೆ ಸಾಹಿತ್ಯ ಅನಿವಾರ್ಯವೇ? ಅನಿವಾರ್ಯವೆಂದಾದರೆ ಅದರ ಪ್ರಮಾಣವೆಷ್ಟು? ಭಾಷೆಯನ್ನು ಸಾಹಿತ್ಯದಿಂದ ಹೊರತುಪಡಿಸಿ ಬೋಧಿಸಬಹುದೆ? ಅಂದರೆ ಸಮಾಜವಿಜ್ಞಾನದಲ್ಲಿ ಪೌರನೀತಿಯನ್ನು ಪ್ರತ್ಯೇಕವಾಗಿ ಬೋಧಿಸುವಂತೆ ಸಾಹಿತ್ಯ ಕಲಿಕೆಯನ್ನೇ ಭಾಷಾ ಪಠ್ಯದಲ್ಲಿ ಪ್ರತ್ಯೇಕವಾಗಿ ಬೋಧಿಸಬಹುದೇ? ಸಾಹಿತ್ಯದ ಎಲ್ಲಾ ಪ್ರಕಾರಗಳನ್ನು ಪ್ರೌಢಶಾಲಾ ಹಂತದಲ್ಲಿ ಕಲಿಸುವ ಅಗತ್ಯವಿದೆಯೇ? ಇದು ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಹೊರೆಯಲ್ಲವೇ? ಕರ್ನಾಟಕದಾದ್ಯಂತ ಏಕರೂಪಿಯಾಗಿರುವ ಪಠ್ಯವನ್ನು ವಿಕೇಂದ್ರೀಕರಣಗೊಳಿಸಿ ಸಂಸ್ಕೃತಿಯ ಮೂಲಕ ಭಾಷೆಯನ್ನು ಕಲಿಸಬಹುದಾದ ಸಾಧ್ಯತೆಗಳಿವೆಯೇ? ಎಂಬ ವಿಚಾರಗಳನ್ನು ಕಂಡುಕೊಳ್ಳುವ ಭಿನ್ನ ಚಿಂತನೆಗಳ ಕುರಿತು ಭಾಷಾವಿಜ್ಞಾನದ ನೆಲೆಯಲ್ಲಿ ಗಂಭೀರ ಚರ್ಚೆಗಳಾಗಿಲ್ಲ. ಭಾಷೆಯೊಂದಿಗೆ ಸಾಹಿತ್ಯದ ಕಲಿಕೆಯ ವಾತಾವರಣ ಇಲ್ಲಿನ ಶಿಕ್ಷಣ ವ್ಯವಸ್ಥೆಯೊಳಗಿದೆ. ಸಾಹಿತ್ಯ ಕಲಿಸುವಾಗ ಭಾಷೆಯು

ಬಂದೇ ಬರುತ್ತದೆ ಎಂಬ ಚಿಂತನೆ ಇದ್ದಂತಿದೆ. ಪ್ರಾಥಮಿಕ ಶಾಲೆಗಳಿಂದ ಮೊದಲ್ಗೊಂಡು ಹತ್ತನೆಯ ತರಗತಿಯವರೆಗೆ ಈ ರೀತಿಯ ಮಿಶ್ರಣ ಸಧ್ಯದ ಕನ್ನಡ ಕಲಿಕೆಯಲ್ಲಿದೆ.

ಭಾಷೆಯ ಕೌಶಲಗಳಾದ ಆಲಿಸುವಿಕೆ, ಮಾತನಾಡುವಿಕೆ, ಓದು ಹಾಗೂ ಬರಹಗಳನ್ನು ಕಲಿಸುವುದು ಅವುಗಳನ್ನು ಹೆಚ್ಚು ಪ್ರಮಾಣಬದ್ಧ ಭಾಷೆಗೆ ಪರಿವರ್ತಿಸುವುದು ಇವುಗಳನ್ನು ಹಂತ ಹಂತವಾಗಿ ಬೆಳೆಸುತ್ತಾಹೋಗುವುದು ಭಾಷಾ ಕಲಿಕೆಯ ಮೂಲಭೂತ ಉದ್ದೇಶಗಳಾಗಿವೆ. ಈ ಉದ್ದೇಶ ಸಾಧನೆಯ ಹಿನ್ನೆಲೆಯಲ್ಲಿ ಅನೇಕ ಚಟುವಟಿಕೆಗಳು ಕೇಂದ್ರೀಕೃತವಾಗುತ್ತವೆ. ಭಾಷಾ ಕಲಿಕೆಗೂ ಭಾಷಾ ಕೌಶಲಗಳ ಕಲಿಕೆಗೂ ಸಾಹಿತ್ಯಾಂಶಗಳು ಬೇಕೇ ಬೇಕು. ಆದರೆ ಭಾಷಾಂಶಗಳೆಷ್ಟಿರಬೇಕು ಸಾಹಿತ್ಯಾಂಶಗಳೆಷ್ಟಿರಬೇಕೆಂಬುದನ್ನು ನಿಗದಿಗೊಳಿಸಿಕೊಳ್ಳಬೇಕಾದುದು ಅನಿವಾರ್ಯ. ಇಲ್ಲದಿದ್ದಲ್ಲಿ ಬೋಧನೆಯ ಗುರಿಗಳು ದಿಕ್ಕು ತಪ್ಪುತ್ತವೆ.

ಭಾಷೆಯ ಕಲಿಕೆಗೂ, ಭಾಷೆಯ ಬಗೆಗಿನ ಕಲಿಕೆಗೂ, ಭಾಷೆಯ ಮೂಲಕ ಕಲಿಕೆಗೂ ಇರುವ ಬಹಳಷ್ಟು ವ್ಯತ್ಯಾಸಗಳನ್ನು ಶೈಕ್ಷಣಿಕ ತತ್ವಗಳ ಹಿನ್ನೆಲೆಯಲ್ಲಿ ಅತ್ಯಂತ ಸೂಕ್ಷ್ಮವಾಗಿ ವಿವೇಚಿಸಬೇಕಾಗುತ್ತದೆ. ಈ ಮೂರೂ ವಿಭಾಗದ ಕಲಿಕೆಯ ಸನ್ನಿವೇಶಗಳು ಭಿನ್ನವಾಗಿರುತ್ತವೆ. ಜೊತೆಗೆ ಈ ಮೂರೂ ವಿಭಾಗಗಳಲ್ಲಿ ಬೋಧನೆಯ ಉದ್ದೇಶಗಳೂ ಭಿನ್ನವಾಗಿರುತ್ತವೆ. ಶಿಕ್ಷಕರಿಗೆ ಈ ಕುರಿತು ಯಾವುದೇ ಬಗೆಯ ತರಬೇತಿಗಳಿಲ್ಲ. ಈ ಭಿನ್ನ ನೆಲೆಗಳಲ್ಲಿ ತರಗತಿಯ ಭಾಷಾ ಕಲಿಕೆಯ ಚಟುವಟಿಕೆಗಳನ್ನು ಏರ್ಪಡಿಸುವಲ್ಲಿ ಭಾಷಾ ಶಿಕ್ಷಕರಿಗೆ ಅನೇಕ ಗೊಂದಲಗಳಿವೆ. ಹೆಚ್ಚಿನ ಶಿಕ್ಷಕರು ಈ ನೆಲೆಯ ಚಿಂತನೆಯನ್ನೇ ಮಾಡದ ಸ್ಥಿತಿಯಲ್ಲಿದ್ದಾರೆ. ಇಂದಿನ ಪ್ರಾಥಮಿಕ ಹಾಗೂ ಪ್ರೌಢಶಾಲಾ ಕನ್ನಡ ಶಿಕ್ಷಕರು ಕನ್ನಡ ಸಾಹಿತ್ಯಾಂಶಗಳನ್ನು ಸಾಂಪ್ರದಾಯಿಕ ಮಾದರಿಯಲ್ಲಿಯೇ ಕಲಿತು ಬಂದವರಾಗಿದ್ದಾರೆ. ಆಧುನಿಕ ಭಾಷಾ ವಿಜ್ಞಾನದ ದಟ್ಟ ಹಿನ್ನೆಲೆಯವರಲ್ಲ. ಆಧುನಿಕ ಭಾಷಾವಿಜ್ಞಾನದ ಆಳ ಅರಿವು, ಆ ಕುರಿತ ಗಂಭೀರ ಚಿಂತನೆ, ಹೊಸ ಅಧ್ಯಯನಗಳ ಫಲಿತಗಳು, ಶಿಕ್ಷಣದಲ್ಲಿ ಅದರ ಅಳವಡಿಕೆ ಈ ಮೊದಲಾದ ವಿಚಾರಗಳ ಕುರಿತು ಶಿಕ್ಷಕರನ್ನು ತರಬೇತಿಗೊಳಿಸುವ ಕುರಿತು ವ್ಯವಸ್ಥೆಗಳಿಲ್ಲ.

ಪಠ್ಯಪುಸ್ತಕ ರಚನಾ ಸಮಿತಿಯು ಈ ಕುರಿತು ನಿರ್ದಿಷ್ಟ ಸೂಚನೆಯನ್ನು ನೀಡಿರುವುದಿಲ್ಲ. ಪ್ರಾಥಮಿಕ ಶಿಕ್ಷಣದಿಂದಲೂ ಭಾಷಾ ಬೋಧನೆಯ ಉದ್ದೇಶಗಳೊಂದಿಗೆ ಸಾಹಿತ್ಯ ಬೋಧನೆಯ ಉದ್ದೇಶಗಳನ್ನು ಸೇರಿಸಿರುವುದು, ಗ್ರಂಥಸ್ಥ ಕನ್ನಡವನ್ನೇ ಮಾತೃಭಾಷಾ ಬೋಧನೆ ಎಂಬ ನೆಲೆಯಲ್ಲಿ ಕಲಿಸುತ್ತಿರುವುದು ಪ್ರೌಢಶಾಲಾ ವಿದ್ಯಾರ್ಥಿಗಳ ಭಾಷಾ ಕಲಿಕೆಯ ಸನ್ನಿವೇಶಗಳಲ್ಲಿ ಗೊಂದಲಗಳನ್ನು ಮೂಡಿಸಿವೆ.

ರಾಷ್ಟ್ರೀಯ ಶಿಕ್ಷಣ ನೀತಿಯ ನಿರ್ದೇಶನಗಳ ಹಿನ್ನೆಲೆಯಲ್ಲಿ ರಾಜ್ಯ ಸಾರ್ವಜನಿಕ ಶಿಕ್ಷಣ ಇಲಾಖೆಯು ಕನ್ನಡ ಭಾಷಾಕಲಿಕೆಯ ರೂಪುರೇಷೆಗಳನ್ನು ನಿರ್ಧರಿಸಿ ಪಠ್ಯಪುಸ್ತಕಗಳನ್ನು ರಚಿಸಿದೆ. ಇಲಾಖೆಯು ಪ್ರೌಢಶಿಕ್ಷಣದಲ್ಲಿ ಕನ್ನಡ ಭಾಷಾ ಕಲಿಕೆಯನ್ನು, ಕನ್ನಡ ಸಾಹಿತ್ಯ ಕಲಿಕೆಯೊಂದಿಗೆ ನಡೆಯುವಂತೆ ಪಠ್ಯಗಳನ್ನು ರಚಿಸಿದೆ. ಬೋಧನೋದ್ದೇಶಗಳಲ್ಲಿಯೂ ಕೂಡ ಭಾಷಾ ಕಲಿಕೆ ಹಾಗೂ ಸಾಹಿತ್ಯದ ಕಲಿಕೆ ಎಂಬ ವಿಭಜನೆಯಿಲ್ಲ. ಭಾಷಾ ಕಲಿಕೆಯೊಂದಿಗೆ ಸಾಹಿತ್ಯದ ಕಲಿಕೆಯು ಜೊತೆ ಜೊತೆಯಲ್ಲೇ

ಸಾಗಬೇಕೆಂಬ ಉದ್ದೇಶಗಳೇ ಎದ್ದು ಕಾಣುತ್ತವೆ. ಆದುದರಿಂದ ತರಗತಿಯಲ್ಲೂ ಕೂಡ ಭಾಷಾ ಕಲಿಕೆಯು ಪ್ರತ್ಯೇಕವಾಗಿ ನಡೆಯುತ್ತಿಲ್ಲ. ಸಾಹಿತ್ಯದ ಕಲಿಕೆಯ ಧ್ಯೇಯಗಳೊಂದಿಗೆ ಭಾಷಾ ಕಲಿಕೆಯು ಸಾಗುತ್ತಿದೆ.

ಗದ್ಯ, ಪದ್ಯ, ಕಾವ್ಯ, ವ್ಯಾಕರಣ, ಲೇಖನಗಳ ಸ್ವರೂಪಗಳನ್ನು ಭಾಷಾ ಬೋಧನೆಯ ಹಿನ್ನೆಲೆಯಲ್ಲಿಯೇ ವಿದ್ಯಾರ್ಥಿಗಳು ಕಲಿಯುವ ಸನ್ನಿವೇಶವಿದೆ. ಭಾಷಿಕ ಸ್ವರೂಪ ಹಾಗೂ ಸಾಹಿತ್ಯದ ಸ್ವರೂಪಗಳಲ್ಲದೇ ನೀತಿ ಶಿಕ್ಷಣದ ಮೌಲ್ಯಗಳನ್ನು ಕೂಡ ಕನ್ನಡ ಭಾಷಾ ಕಲಿಕಾ ಸ್ವರೂಪದೊಂದಿಗೆ ಸೇರಿಸಲಾಗಿದೆ. ಈ ನಿಟ್ಟಿನಲ್ಲಿ ಕನ್ನಡ ಭಾಷಾ ಕಲಿಕೆಯಲ್ಲಿ ಸಾಹಿತ್ಯದ ಸ್ವರೂಪವನ್ನು ಪ್ರತ್ಯೇಕವಾಗಿ ಗಮನಿಸುವುದು ಮುಖ್ಯವಾಗುತ್ತದೆ.

### ೪.೧ ಕಾವ್ಯ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಾವ್ಯ ಕ್ಷೇತ್ರವೊಂದು ವಿಶಿಷ್ಟವಾದ ಬಗೆ. ಶಬ್ದಾರ್ಥ ಸಹಿತವಾಗಿ, ರಸಾತ್ಮಕ ವಾಕ್ಯಗಳಿಂದ, ರಮಣೀಯವಾದ ಅರ್ಥವನ್ನು ಪ್ರತಿಪಾದನೆ ಮಾಡುವ ವಿಶಿಷ್ಟ ಗುಣ ಕಾವ್ಯದ್ದು. ಬದುಕಿನ ಸೌಂದರ್ಯವನ್ನು ಹೆಚ್ಚಿಸುವಲ್ಲಿ ಇವುಗಳ ಪ್ರಭಾವ ಗಹನವಾದದ್ದು. ಪ್ರೌಢಶಾಲಾ ಪ್ರಥಮ ಭಾಷಾ ಕನ್ನಡ ಪಠ್ಯಗಳಲ್ಲಿ ಕನ್ನಡ ಸಾಹಿತ್ಯದಲ್ಲಿರುವ ಎಲ್ಲ ಬಗೆಯ ಕಾವ್ಯಭಾಗಗಳಿವೆ.

ಪಠ್ಯದ ಪದ್ಯಭಾಗದ ಕಲಿಕೆಯಲ್ಲಿ ನವೋದಯ, ನವ್ಯ, ಜನಪದ, ಕೀರ್ತನೆ, ಉಗಾಭೋಗ, ಸುಳಾದಿ, ವಚನ, ರಗಳೆ, ಷಟ್ಪದಿ, ಕಂದ, ಖ್ಯಾತ ಕರ್ನಾಟಕಗಳ ಪರಿಚಯ ಹಾಗೂ ವಿವರಣೆ ಪ್ರಧಾನವಾಗಿವೆ. ಭಾಷಾಂಶದ ಕಲಿಕೆಗಿಂತ ಸಾಹಿತ್ಯಾಂಶದ ಕಲಿಕೆಯು ಇಲ್ಲಿ ಮುಖ್ಯವಾಹಿನಿಗೆ ಬಂದಿದೆ. ಉಳಿದಂತೆ ತರಗತಿಯ ಬೋಧನೆಯ ಸಂದರ್ಭಗಳಲ್ಲಿ ಪದ್ಯದ ಭಾವಾಂಶಗಳೇ ದ್ವಿತೀಯ ಪ್ರಧಾನಗಳಾಗುತ್ತಿವೆ. ಮೌಲ್ಯಮಾಪನದ ಸಂದರ್ಭಗಳಲ್ಲಿಯೂ ಕಂಠಪಾಠದ ಪ್ರಕ್ರಿಯೆ ಬಹಳ ಕೆಲಸ ಮಾಡುತ್ತಿರುವುದು ಕಂಡು ಬಂದಿದೆ. ಮೌಲ್ಯಮಾಪನವು ಬರೀ ಬರವಣಿಗೆಗೆ ಸೀಮಿತವಾಗಿರುವುದರಿಂದ ಹಾಗೂ ಈ ಪ್ರಶ್ನೆಗೆ ಹೀಗೆ ಉತ್ತರವೆಂಬ ಟಿಪ್ಪಣಿ ಪುಸ್ತಕದ ಸಿದ್ಧ ಮಾದರಿಗಳಿರುವುದರಿಂದ ಕಂಠಪಾಠದ ಹಾದಿಯಲ್ಲಿ ವಿದ್ಯಾರ್ಥಿಗಳು ಸಾಗುತ್ತಿದ್ದಾರೆ. ನಿರಂತರ ಮೌಲ್ಯಮಾಪನವಿಲ್ಲದ ಕಾರಣ, ಪ್ರೌಢಶಾಲಾ ಹಂತದ ಕನ್ನಡ ಭಾಷಾ ಪದ್ಯ ಭಾಗದ ಕಲಿಕೆಯಲ್ಲಿ ಭಾಷಾ ಕಲಿಕೆಯ ಧ್ಯೇಯೋದ್ದೇಶಗಳು ಸಾಧಿತವಾಗುತ್ತಿಲ್ಲ.

ಶಿಕ್ಷಣ ನೀತಿಯ ಧ್ಯೇಯೋದ್ದೇಶಗಳು ಪ್ರೌಢಶಾಲೆಗಳಲ್ಲಿ ಕಾವ್ಯ ಬೋಧನಾ-ಕಲಿಕಾಸನ್ನಿವೇಶಗಳು, ಮೌಲ್ಯ ಮಾಪನ ಇತ್ಯಾದಿ ವಿಚಾರಗಳನ್ನು ಈ ಹಿನ್ನೆಯಲ್ಲಿ ಗಮನಿಸುವುದು ಮುಖ್ಯವಾಗುತ್ತದೆ.

ಒಂದು ಪಠ್ಯಪುಸ್ತಕದಲ್ಲಿ ಪದ್ಯಗಳು, ಕಾವ್ಯಖಂಡಗಳು ಸೇರಿಸಲ್ಪಟ್ಟಿರುವ ಉದ್ದೇಶಗಳೆಂದರೆ

* "ರಸಾಸ್ವಾದನೆಯನ್ನು ಪಡೆಯಲು ಮಾರ್ಗದರ್ಶನ ನೀಡುವುದು. ಉದ್ದಿಷ್ಟವನ್ನು ಮೆಚ್ಚುಗೆ ಪ್ರಶಂಸೆಯೆಂಬ ಪದಗಳಿಂದ ನಿರ್ದೇಶಿಸುವುದೂ ಇದೆ.
* ಭಾಷೆಯ ಪ್ರಮುಖ ಕವಿಗಳನ್ನು, ಕಾವ್ಯಗಳನ್ನು, ಕಾವ್ಯ ಪ್ರಕಾರಗಳನ್ನು ಪರಿಚಯಿಸುವುದು
* ಮಹಾಕವಿಗಳು ಪ್ರಸ್ತುತ ಪಡಿಸುವ ಮಾನವೀಯ ಕಾವ್ಯ ಮೌಲ್ಯಗಳನ್ನು ಜೀವನ ದೃಷ್ಟಿಯನ್ನು ಪರಿಚಯಿಸುವುದು
* ಪದ್ಯದಿಂದ, ಕಾವ್ಯ ಭಾಗದಿಂದ ರಸಾಸ್ವಾದನೆ, ಪಾತ್ರೋನ್ನತಿ, ಜೀವನ ದೃಷ್ಟಿ, ಜೀವನ ಮೌಲ್ಯಗಳು, ಸ್ವೀಕಾರ್ಯ, ತಿರಸ್ಕಾರ್ಯ, ಭಾಷಾ ಸೌಂದರ್ಯ, ಭಾಷಾ ಪ್ರಯೋಗ ಪರಿಣತಿ ಇವುಗಳು ಅರಿಯಲು ವಿದ್ಯಾರ್ಥಿಗಳಿಗೆ ನೆರವು ನೀಡುವುದು.
* ವಿದ್ಯಾರ್ಥಿಗಳಲ್ಲಿ ಸುಪ್ತವಾಗಿರುವ ಗುಪ್ತ ಕಾವ್ಯ ಪ್ರತಿಭೆಯನ್ನು ಪ್ರಚೋದಿಸಿ ಪ್ರಜ್ವಲನಗೊಳಿಸಿ ಅವರು ಮುಂದೆ ಕಾವ್ಯಾಭ್ಯಾಸವನ್ನೂ ಕಾವ್ಯ ರಚನೆಯನ್ನೂ ಕೈಗೊಳ್ಳುವಂತೆ ಪ್ರೇರೇಪಿಸುವುದು, ಸಿದ್ಧಗೊಳಿಸುವುದು"[೨].

ಶಿಕ್ಷಕರ ಸೇವಾಪೂರ್ವ ಹಾಗೂ ಸೇವಾಂತರ್ಗತ ತರಬೇತಿಗಳಲ್ಲಿ ಕಾವ್ಯ ಬೋಧನೆಯ ಉದ್ದೇಶಗಳನ್ನು ಮೇಲಿನಂತೆ ತಿಳಿಸಲಾಗುತ್ತದೆ. ಈ ಉದ್ದೇಶಗಳು ಸಂಪೂರ್ಣ ಸಾಹಿತ್ಯ ಕಲಿಕಾ ಸಂದರ್ಭದ ಉದ್ದೇಶಗಳಾಗಿವೆ. ಪರಿಚಯಾತ್ಮಕ ನೆಲೆಗಳಲ್ಲಿ ಯಾವ ಅಂಶಗಳಿರಬೇಕು, ಆಳ ಅಧ್ಯಯನಕ್ಕೆ ಯಾವ ವಿಚಾರಗಳಿರಬೇಕು ಎಂಬ ಸ್ಪಷ್ಟತೆ ಇಲ್ಲದಿರುವುದರಿಂದ ಮತ್ತು ಮೌಲ್ಯಮಾಪನದ ಸಂದರ್ಭಗಳಲ್ಲಿ ಸಿದ್ಧ ಉತ್ತರದ ಪ್ರಶ್ನೆಗಳು ಪ್ರಮಾಣಗಳಾಗುವುದರಿಂದ ಕಲಿಕೆಯು ಕಂಠಪಾಠ ಪ್ರಧಾನದ ಕಲಿಕೆಯಾಗುತ್ತಿದೆ. ಭಾಷಾ ಕಲಿಕೆಯ ಅಂಶಗಳು ಇಲ್ಲಿ ಸಂಪೂರ್ಣವಾಗಿ ಕಡೆಗಣಿಸಲ್ಪಟ್ಟಿವೆ.

### ಅ) ಪಠ್ಯಗಳಲ್ಲಿ ಕಾವ್ಯವಿಚಾರ

**೮ನೆಯ ತರಗತಿಯಲ್ಲಿ.**

ಕನ್ನಡ ತಾಯಿಯ ಸುಪ್ರಭಾತ, ದೇವರು ರುಜು ಮಾಡಿದನು, ಕುರುಡು ಕಾಂಚಾಣ, ಹಾಡುವುದೆಂದರೆ, ನಾನೊಂದು ಮರವಾಗಿದ್ದರೆ ಎಂಬ ಆಧುನಿಕ ಕವಿತೆಗಳಿವೆ. ಜನಪದ ತ್ರಿಪದಿ, ಚಾಮರಸ ಕವಿಯ ಪ್ರಭುಲಿಂಗ ಲೀಲೆಯ ಭಾಗವಿದೆ. ಕವಿ ಲಕ್ಷ್ಮೀಶನ ಜೈಮಿನಿ ಭಾರತದ ಕರುಣಾಳು ರಾಘವನಲ್ಲಿ ತಪ್ಪಿಲ್ಲ ಎಂಬ ಭಾಗವಿದೆ. ಬಸವಣ್ಣನ ವಚನಗಳಿವೆ. ರತ್ನಾಕರ ವರ್ಣಿಯ ಭರತೇಶ ವೈಭವದ ಭಾಗವಿದೆ. ಕನಕದಾಸರ ಕೀರ್ತನೆಯಿದೆ.

ಕನ್ನಡ ತಾಯಿಯನ್ನು ಹೊಗಳುತ್ತಾ ಬದುಕನ್ನು ಶ್ರೀಮಂತಗೊಳಿಸಿಕೊಳ್ಳಬೇಕೆಂಬ ಆಶಯ. ಪರರ ಒಳಿತಿಗಾಗಿ ಬಾಳನ್ನು ಸವೆಸುವ ಶುದ್ಧ ಮನಸ್ಕರಾಗಬೇಕು. ತಮ್ಮತನವನ್ನು ಮರೆತ ಕನ್ನಡಿಗರಿಗೆ ಆ ಕುರಿತು ಪ್ರೇರಣೆ ನೀಡುವುದು. ಜನಪದರ ಭಾವನಾ ತೀವ್ರತೆ, ಅನುಭವದ ಗಾಢತೆ, ಬದುಕಿನ ವಿಧಾನಗಳನ್ನು ತಿಳಿಯುವುದು. ಚೈತನ್ಯದ ಚಿಲುಮೆಯಾದ ಕನ್ನಡ ನಾಡಿನ ಸಾಂಸ್ಕೃತಿಕ ಪರಂಪರೆಯನ್ನು ಅರಿತು ಅದನ್ನು ಉಳಿಸಿ-ಬೆಳೆಸುವುದು. ಎಲ್ಲ ಅಸಮಾನತೆಗಳು ತೊಲಗಬೇಕು. ವ್ಯಕ್ತಿಯ ಅಂತರಂಗದಲ್ಲಿ ಪ್ರೀತಿ, ಸ್ನೇಹ, ದಯೆ, ಸಮಾನತೆ, ಸಹಕಾರ ಸೌಹಾರ್ದಭಾವಗಳು ತುಂಬಬೇಕು. ಪಕ್ಷಿ, ಪ್ರಾಣಿ, ಮರಗಳನ್ನಾದರೂ ಪ್ರೀತಿಸುವ ಉನ್ನತವರ್ಗದ ಮಂದಿ ಮನುಷ್ಯರನ್ನು ಪ್ರೀತಿಸುತ್ತಿಲ್ಲ - ಹಾಗಾಗಬಾರದೆಂಬ ಆಶಯಗಳ ಮೌಲ್ಯಗಳನ್ನು ಈ ಪದ್ಯ ಭಾಗಗಳ ಮೂಲಕ ವಿದ್ಯಾರ್ಥಿಗಳಲ್ಲಿ ಬಿತ್ತಬೇಕೆಂದು ಪಠ್ಯ ಪುಸ್ತಕ ತಿಳಿಸುತ್ತದೆ.

**೯ನೆಯ ತರಗತಿಯಲ್ಲಿ.**

ಪ್ರಾರ್ಥನ ಗೀತೆ, ನಮ್ಮಬಲ, ಮಾನವೀಯತೆ, ಇಕ್ಕಳ ಎಂಬ ಹೊಸಗನ್ನಡ ಕವಿತೆಗಳಿವೆ. ಯೋಧ ಮತ್ತು ಹೆಂಗಸು, ಚೈನಾದ ಒಂದು ಹಳೆಯ ಕಥೆ ಎಂಬ ಕಥನ ಕವನವಿದೆ. ಮೂಡಲ್ ಕುಣಿಗಲ್ ಕೆರೆ ಎಂಬ ಜನಪದ ಪದ್ಯವಿದೆ. ಉದರ ವೈರಾಗ್ಯ, ಹಣ ಬಣ್ಣಗಳೆಂಬ ಕೀರ್ತನೆಗಳಿವೆ. ಅಲ್ಲಮಪ್ರಭುವಿನ ನಾಲ್ಕು ವಚನಗಳಿವೆ. ರಾಘವಾಂಕನ ಹರಿಶ್ಚಂದ್ರ ಕಾವ್ಯದ ಭಾಗ ಹರಿಶ್ಚಂದ್ರನಲ್ಲದಿನ್ನಾರು ಗತಿಮತಿ, ಆದಿಕವಿ ಪಂಪನ ವಿಕ್ರಮಾರ್ಜುನ ವಿಜಯದ ಸೂಳ್ಪಡೆಯಲಪ್ಪುದು ಕಾಣಾ ಮಹಾಜಿರಂಗದೊಳ್ ಎಂಬ ಭಾಗವಿದೆ.

ದೇಶದಲ್ಲಿ ಸಮರಸದ ವಾತಾವರಣ ಸೃಷ್ಟಿಯಾಗಬೇಕೆಂಬ ಆಶಯ. ರಾಷ್ಟ್ರರಕ್ಷಣೆಗೆ ನಾವು ಸದಾ ಸಿದ್ಧರಾಗಿರಬೇಕೆಂಬ ಆಶಯ. ಜಗತ್ತಿನಲ್ಲಿ ಮಾನವೀಯತೆಯನ್ನು ಬೆಳೆಸಿ ಒಳ್ಳೆಯ ನಾಗರಿಕ ಸಮಾಜದ ಸೃಷ್ಟಿ ಮಾಡುವುದು. ಜನಪದ ಸಾಹಿತ್ಯವನ್ನು ಪರಿಚಯಿಸಿ ಕೊಡುವುದು ಇತ್ಯಾದಿ ಮೌಲ್ಯಗಳನ್ನು ಈ ಕಾವ್ಯ ಭಾಗಗಳಲ್ಲಿ ಬಿತ್ತಬೇಕಿದೆ.

**೧೦ನೆಯ ತರಗತಿಯಲ್ಲಿ.**

ಜಯ ಭಾರತ ಪುತ್ರ, ಮಾತೃಭೂಮಿ ಎಂಬ ಹೊಸಗನ್ನಡ ಪದ್ಯಗಳಿವೆ. ಮಂಕುತಿಮ್ಮನ ಕಗ್ಗದ ಪದ್ಯಗಳಿವೆ, ಪುಲಿಗೆರೆ ಸೋಮನಾಥನ ಸೋಮೇಶ್ವರ ಶತಕದ ಭಾಗವಿದೆ. ಕನಕದಾಸ, ಗೋಪಾಲದಾಸರ ಕೀರ್ತನೆ ಹಾಗೂ ಉಗಾಭೋಗಗಳಿವೆ. ರಸಬಳ್ಳಿ ಎಂಬ ಜನಪದ ಗೀತೆಯಿದೆ. ಕುಮಾರವ್ಯಾಸನ ಕರ್ನಾಟಕ ಭಾರತ ಕಥಾ ಮಂಜರಿಯಿಂದಾಯ್ದ ಗುರುವರಿಯದನೆ ಮರುಳ ಎಂಬ ಭಾಗವಿದೆ. ಷಡಕ್ಷರದೇವನ ಶಬರ

ಶಂಕರ ವಿಳಾಸದ ಬೇಡ ನಿನಗೇಕೆ ಸಾಹಸದಾಡಂಬರ ಎಂಬ ಭಾಗವಿದೆ. ಮುಕ್ತಾಯಕ್ಕ ಹಾಗೂ ಅಕ್ಕಮಹಾದೇವಿಯ ವಚನದ ಭಾಗವಿದೆ. ರನ್ನನ ಸಾಹಸ ಭೀಮ ವಿಜಯದ ಕಾಲಾಗ್ನಿ ರುದ್ರಂ ಪೊರಮಡುವವೋಲ್ ಎಂಬ ಭಾಗವಿದೆ. ಶ್ರೀವಿಜಯನ ಕವಿರಾಜಮಾರ್ಗದ ಭಾಗವಿದೆ, ಪಂಪನ ಬನವಾಸಿಯ ವರ್ಣನೆಯಿದೆ. ಕಪ್ಪೆ ಅರಭಟ್ಟ ಹಾಗೂ ಲಕ್ಷ್ಮೀಧರಾಮಾತ್ಯನ ಶಾಸನ ಪದ್ಯಗಳಿವೆ.

ಅನೇಕತೆಯಲ್ಲಿ ಏಕತೆಯನ್ನು ಕಂಡುಕೊಂಡ ಸಂಸ್ಕೃತಿಯ ಭಾರತೀಯರಾದ ನಾವು ಒಂದೆ ತಾಯಿ ಮಕ್ಕಳಂತೆ ಬಾಳಬೇಕು ಎಂಬ ಆಶಯ. ರಾಷ್ಟ್ರ ನಿರ್ಮಾಣ, ರಾಷ್ಟ್ರದ ಅಭ್ಯುದಯದಲ್ಲಿ ವ್ಯಕ್ತಿ ಚಾರಿತ್ರ್ಯ ಅತ್ಯಮೂಲ್ಯ. ಈ ಸಂಪತ್ತಿನ ಗಳಿಕೆಗೆ ನೀತಿ ಕಾವ್ಯದ ಹರವು ಹಾಗೂ ತಿಳಿವು ಅತ್ಯಗತ್ಯ ಎಂಬ ಅರಿವನ್ನು ಬೆಳೆಸುವುದು. ಜನ್ಮಭೂಮಿ ಹಾಗೂ ಭಾಷೆಯ ಮೌಲಿಕತೆಗಿಂತ ಮಿಗಿಲಾದುದು ಏನೂ ಇಲ್ಲ ಎಂಬ ಆಶಯವನ್ನು ಬಿತ್ತುವುದು. ಮಾನವ ಜನ್ಮ ಸಾರ್ಥಕವಾಗಬೇಕಾದರೆ ಸಂಸ್ಕೃತಿ ಪರಂಪರೆಯನ್ನು ಅರಿತು ಸಮಾಜ ಮುಖಿಯಾಗಿ ಬಾಳಬೇಕು. ಇಲ್ಲವಾದರೆ ಬಾಳು ವ್ಯರ್ಥ ಎಂಬ ಧ್ವನಿಪೂರ್ಣ ವಿಮರ್ಶೆಯನ್ನು ಬಿಂಬಿಸುವುದು. ದುಡುಕು–ಅಹಂಕಾರ ಎಂದಿಗೂ ಸಲ್ಲದು. ಸಹನೆಯೇ ಪ್ರಧಾನ ಎಂದು ತಿಳಿಯುವುದರೊಂದಿಗೆ ಜಗತ್ತಿನ ಸರ್ವೋತ್ತಮ ಅಂಶಗಳನ್ನು ಪರಿಚಯ ಮಾಡಿಕೊಡುವುದು. ಭೂಮಿ, ತಾಯಿ ಮತ್ತು ಬದುಕಿನ ಕುರಿತಾಗಿ ಜನಪದರು ಕಟ್ಟಿಕೊಂಡಿದ್ದ ನಂಬಿಕೆ ಮತ್ತು ಪ್ರೀತಿಯನ್ನು ತಿಳಿಸುವುದು. ಚಂಪೂ ಸಾಹಿತ್ಯ ಪ್ರಕಾರವನ್ನು ಪರಿಚಯಿಸುವುದು, ಭಕ್ತಿಯ ಅನನ್ಯತೆಯನ್ನು ಶ್ರುತಪಡಿಸುವುದು.

ಹನ್ನೆರಡನೆಯ ಶತಮಾನದಲ್ಲಿ ಪುರುಷನಿಗೆ ಹೆಗಲೆಣೆಯಾಗಿ ಅನುಭಾವದ ಹಂತವನ್ನೇರಿ, ಆತ್ಮೋದ್ಧಾರದ ಹಂಬಲ ಹೊಂದಿದ ಶಿವಶರಣೆಯರನ್ನು ಪರಿಚಯಿಸುವ ಆಶಯ. ಸಿಂಹಾವಲೋಕನ ಕ್ರಮದಿಂದ ಮಹಾಭಾರತದ ಕಥೆಯನ್ನು ಅವಲೋಕಿಸಿದ ರನ್ನನ 'ಸಾಹಸಭೀಮವಿಜಯ' ಕೃತಿಯನ್ನೂ ಶೈಲಿಯನ್ನೂ ಪರಿಚಯಿಸುವುದು. ಕನ್ನಡಿಗರ ಜಾಣ್ಮೆ, ಕೆಚ್ಚು, ದಾನಗುಣ, ಕನ್ನಡನಾಡಿನ ಭೌಗೋಳಿಕ ಹರವಿನ ಸಾಂಸ್ಕೃತಿಕ ವೈಭವವನ್ನು ಮನಸಾರೆ ಹೊಗಳಿದ ಪ್ರಾಚೀನ ಕವಿ–ಕೃತಿಗಳನ್ನು ಪರಿಚಯಿಸುವುದು ಈ ಮೊದಲಾದ ಮೌಲ್ಯಗಳನ್ನು ಕಾವ್ಯ ಭಾಗದ ಮೂಲಕ ವಿದ್ಯಾರ್ಥಿಗಳಲ್ಲಿ ಮೂಡಿಸಬೇಕೆಂದು ಪಠ್ಯವು ತಿಳಿಸುತ್ತದೆ.

ಪ್ರೌಢಶಾಲಾ ಕನ್ನಡ ಪ್ರಥಮ ಭಾಷೆಯ ಪಠ್ಯಗಳಲ್ಲಿ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬರುವ ಕಾವ್ಯದ ಎಲ್ಲಾ ಪ್ರಕಾರಗಳನ್ನು ಪರಿಚಯಿಸಲಾಗಿದೆ. ಆಧುನಿಕ ಕವಿತೆಗಳಲ್ಲಿ ಹಾಗೂ ಅದರೊಳಗಿನ ನವೋದಯ, ನವ್ಯ, ಬಂಡಾಯದ ಕವಿತೆಗಳು, ಜನಪದ ಗೀತೆಗಳು, ಕೀರ್ತನೆಗಳು, ಉಗಾಭೋಗ, ಸುಳಾದಿ, ಕಂದ, ರಗಳೆ, ಷಟ್ಪದಿ, ಖ್ಯಾತ ಕರ್ನಾಟಕಗಳು ಹಾಗೂ ಹೊಸಗನ್ನಡ, ನಡುಗನ್ನಡ, ಹಳಗನ್ನಡ ವಿಭಾಗಗಳನ್ನು ಪಠ್ಯಗಳಲ್ಲಿ ಅಳವಡಿಸಲಾಗಿದೆ.

ಕಾವ್ಯಾಂಗಗಳಾದ ಶರ, ಕುಸುಮ, ಭೋಗ, ವಾರ್ಧಕ, ಭಾಮಿನಿ, ಪರಿವರ್ಧಿನಿ ಷಟ್ಪದಿಗಳನ್ನು, ಕಂದ ಪದ್ಯಗಳನ್ನು ಮಂದಾನಿಲ, ಲಲಿತ, ಉತ್ಸಾಹ ರಗಳೆಗಳು, ಎಲ್ಲಾಬಗೆಯ ಅಲಂಕಾರಗಳು, ಅಕ್ಷರ ಗಣಗಳು, ಮಾತ್ರಾಗಣಗಳು, ಅಂಶಗಣಗಳು, ಪ್ರಾಸ ವಿವರಗಳು, ಗುರು ಲಘು ವಿಭಾಗಗಳು, ಶಬ್ದಾಲಂಕಾರಗಳು, ಅನುಪ್ರಾಸ, ಯಮಕ, ಚಿತ್ರ ಕವಿತ್ವಗಳ ವಿಚಾರಗಳನ್ನು ಪಠ್ಯಗಳಲ್ಲಿ ಅಳವಡಿಸಲಾಗಿದೆ.

ಕಾವ್ಯ ಬಾಗದ ಬೋಧನೆಯು ಭಾಷಾಂಶಗಳನ್ನು ಸಂಪೂರ್ಣವಾಗಿ ಕಡೆಗಣಿಸಿದೆ. ಸಾಹಿತ್ಯ ಕಲಿಕೆಯೇ ಸಮಗ್ರವಾಗಿದೆ. ಕಾವ್ಯ, ಕಾವ್ಯಭಾಗ, ಕಾವ್ಯಾಂಗಗಳ ಅಧ್ಯಯನವೇ ಪ್ರಧಾನವಾಗುವಂತೆ ಪಠ್ಯಗಳ ರಚನೆಯಾಗಿದೆ. ಕಾವ್ಯಭಾಗದ ಆಶಯಗಳಲ್ಲಿಯೂ ಕೂಡ ವಿದ್ಯಾರ್ಥಿಗಳ ಭಾಷಾ ಕಲಿಕೆಯ ಸಾಮರ್ಥ್ಯವನ್ನು ಪರಿಗಣಿಸಿಲ್ಲ. ವಿದ್ಯಾರ್ಥಿಗಳು ಉತ್ತಮ ಭಾಷಾ ಸಾಮರ್ಥ್ಯವನ್ನು ಹೊಂದಿದವರೆಂಬ ಕಲ್ಪನೆಯನ್ನು ಇಟ್ಟುಕೊಂಡೇ ಕಾವ್ಯಭಾಗದ ಆಶಯಗಳನ್ನು ರೂಪಿಸಲಾಗಿದೆ. ಸ್ಪಷ್ಟವಾಗಿ ಓದು ಬರಹಗಳ ಕೌಶಲಗಳನ್ನು ಗಳಿಸಿಕೊಳ್ಳದ ವಿದ್ಯಾರ್ಥಿಗಳ ಸಂಖ್ಯೆ ದೊಡ್ಡದಿರುವ್ಯದರಿಂದ, ಕಲ್ಪಿತ ವಿದ್ಯಾರ್ಥಿಗಳಿಗಿಂತ ಸಮಸ್ಯೆಗಳನ್ನು ಎದುರಿಸುತ್ತಿರುವ ವಿದ್ಯಾರ್ಥಿಗಳ ಸಂಖ್ಯೆಯೇ ದೊಡ್ಡದಿರುವುದರಿಂದ ಪಠ್ಯದ ಮೂಲ ಉದ್ದೇಶ ಈಡೇರದ ಸಂದರ್ಭಗಳು ಪ್ರೌಢಶಾಲಾ ಕನ್ನಡ ಕಲಿಕಾ ಸನ್ನಿವೇಶದಲ್ಲಿದೆ.

## ಆ) ತರಗತಿಯ ವಾಸ್ತವ

ಅಧ್ಯಯನದ ಸಂದರ್ಭದಲ್ಲಿ ವಿದ್ಯಾರ್ಥಿಗಳ ಮಟ್ಟವನ್ನು ಮೀರಿದ ಅಂಶಗಳನ್ನು ಸಂಗ್ರಹಿಸಲಾಗಿದೆ. ಅಧ್ಯಾಪಕರೊಂದಿಗೆ ಚರ್ಚೆ ಹಾಗೂ ವಿದ್ಯಾರ್ಥಿಗಳ ಅಭಿಪ್ರಾಯ ಮತ್ತು ವೀಕ್ಷಣಾ ವಿಧಾನದ ವಿಶ್ಲೇಷಣೆಯಿಂದ ಈ ಕೆಳಗಿನ ಅಂಶಗಳನ್ನು ಗುರುತಿಸಲಾಗಿದೆ.

- ಹೆಚ್ಚಿನ ವಿದ್ಯಾರ್ಥಿಗಳಿಗೆ ಹೊಸಗನ್ನಡ ವಾಕ್ಯಗಳನ್ನು ನಿರರ್ಗಳವಾಗಿ ಓದಲು ಬಾರದು. ಅಂಥವರು ಹಳಗನ್ನಡವನ್ನು ಅನ್ಯ ಭಾಷೆ ಎಂಬಂತೆ ಓದುತ್ತಾರೆ. ಹಳಗನ್ನಡ ಪಾಠ ಪದ್ಯಗಳು ಹೆಚ್ಚಿನ ವಿದ್ಯಾರ್ಥಿಗಳಿಗೆ ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತಾಯ್ತು ಎಂಬಂತಾಗಿದೆ.
- ವಿದ್ಯಾರ್ಥಿಗಳ ಭಾಷಾ ಕೌಶಲಗಳನ್ನು ಉನ್ನತಗೊಳಿಸುವ ವಿಚಾರಗಳು ಕಾವ್ಯಭಾಗಗಳಲ್ಲಿ ಇಲ್ಲ.
- ಕಾವ್ಯ ಭಾಗಗಳ ಬೋಧನೆಗೆ ಸಂಬಂಧಿಸಿದಂತೆ ಆಧುನಿತ ತಂತ್ರಜ್ಞಾನವನ್ನು ಅಳವಡಿಸುವ ವಿಚಾರಗಳನ್ನು ಸಂಪೂರ್ಣವಾಗಿ ಕಡೆಗಣಿಸಲಾಗಿದೆ.
- ಪಠ್ಯದಲ್ಲಿನ ಹಣಬಣ್ಣ, ಉಗಾಭೋಗಗಳ ಸಾಹಿತ್ಯವನ್ನು ಪದವಿ ತರಗತಿಯ ವಿದ್ಯಾರ್ಥಿಗಳು ಕೂಡ ಅರ್ಥ ಮಾಡಿಕೊಳ್ಳುವುದು ಕಷ್ಟ. ತರಗತಿಯಲ್ಲಿ ಇವುಗಳ ವಿವರಣೆಯೂ ಕಷ್ಟವಾಗಿದೆ.

❖ ಅನುಪ್ರಾಸ, ಯಮಕ, ಚಿತ್ರಕವಿತ್ವಗಳ ಪರಿಚಯ ಎಲ್ಲಾ ಷಟ್ಪದಿ, ಎಲ್ಲಾ ರಗಳೆಗಳು, ಎಲ್ಲಾ ಅಲಂಕಾರಗಳು, ಅಕ್ಷರಗಣ, ಮಾತ್ರಾಗಣ, ಅಂಶಗಣಗಳ ವಿವರ, ಖ್ಯಾತ ಕರ್ನಾಟಕಗಳ ಎಲ್ಲಾ ಬಗೆಗಳ ಸೂತ್ರವನ್ನು ಪಠ್ಯಗಳಲ್ಲಿ ಸೇರಿಸಿರುವುದು ವಿದ್ಯಾರ್ಥಿಗಳ ಮಟ್ಟವನ್ನು ಮೀರಿವೆ.

❖ ಪಠ್ಯಗಳಲ್ಲಿನ ಅನೇಕ ಸೂತ್ರಗಳನ್ನು, ವ್ಯಾಖ್ಯೆಗಳನ್ನು ಅರ್ಥ ಮಾಡಿಕೊಳ್ಳಲಾರದ ಬಹಳಷ್ಟು ವಿದ್ಯಾರ್ಥಿಗಳು ಅಂಕಗಳಿಗಾಗಿ ಕಂಠಪಾಠದ ಮೊರೆಹೋಗುತ್ತಿರುವುದು ಸಾಮಾನ್ಯವಾಗಿದೆ.

❖ ವಿದ್ಯಾರ್ಥಿಗಳಲ್ಲಿರುವ ಭಾಷಾ ಕೌಶಲಗಳ ಮಟ್ಟವನ್ನು ಆದರಿಸಿದರೆ ಪ್ರಸ್ತುತ ಪ್ರೌಢಶಾಲಾ ಪ್ರಥಮ ಭಾಷಾ ಕನ್ನಡ ಪಠ್ಯಗಳು ಸ್ವಯಂ ಕಲಿಕೆಗೆ ಪೂರಕವಾಗಿಲ್ಲ.

❖ ವಿದ್ಯಾರ್ಥಿಗಳ ಭಾಷಾ ಸಾಮರ್ಥ್ಯದ ಹಿನ್ನೆಲೆಯಲ್ಲಿ ಗಮನಿಸಿದರೆ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿನ ಸಮಗ್ರ ಕಾವ್ಯಪರಂಪರೆಯನ್ನು, ಕಾವ್ಯಾಂಗಗಳ ಎಲ್ಲಾ ವಿಚಾರಗಳನ್ನು ಪರಿಚಯಿಸುವ ಆಶಯ ಸಮರ್ಥನೀಯವೆನಿಸುವುದಿಲ್ಲ.

❖ ಕಾವ್ಯ ಭಾಗದಲ್ಲಿ ಭಾಷಾಂಶಗಳು ಗೌಣವಾಗಿವೆ. ಭಾಷಾ ಪಠ್ಯವಾದರೂ ಸಾಹಿತ್ಯದ ಕಲಿಕೆ ಹಾಗೂ ಸಾಹಿತ್ಯದ ಕುರಿತ ಕಲಿಕೆಗೆ ಸಂಪೂರ್ಣ ಗಮನ ನೀಡಲಾಗುತ್ತಿದೆ.

❖ ಕಾವ್ಯ ಭಾಗದ ಮೌಲ್ಯ ಮಾಪನಕ್ಕಾಗಿ ಅಭ್ಯಾಸದ ಪ್ರಶ್ನೆಗಳನ್ನು ಕೇಳಲಾಗುತ್ತದೆ.

❖ ಕಾವ್ಯ ಭಾಗದ ಮೌಲ್ಯ ಮಾಪನ ಸಂಪೂರ್ಣ ಬರಹ ಕೇಂದ್ರಿತವಾಗಿದೆ. ಅಂಕ ಕೇಂದ್ರಿತವಾಗಿರುವುದರಿಂದ ಕಲಿಕೆಯು ಕಂಠಪಾಠ ಪ್ರೇರಿತವಾಗಿದೆ.

❖ ಸಿದ್ಧ ಉತ್ತರಗಳ ಮಾದರಿಯಿರುವುದರಿಂದ ವಿದ್ಯಾರ್ಥಿಗಳಿಗೆ ಸ್ವತಂತ್ರ ಅಭಿವ್ಯಕ್ತಿಗೆ ಅವಕಾಶವಿಲ್ಲದ ಸ್ಥಿತಿಯಿದೆ.

❖ ಮಕ್ಕಳ ಮನಃಶಾಸ್ತ್ರದ ಹಿನ್ನೆಲೆಯಲ್ಲಿ ಗಮನಿಸಿದರೆ ವಿದ್ಯಾರ್ಥಿಗಳ ಅವಧಾನವನ್ನು ಕೇಂದ್ರೀಕರಿಸಿ, ಭಾಷಾ ಕಲಿಕೆಯ ಆಸಕ್ತಿಯನ್ನು ಹೆಚ್ಚಿಸುವ, ಅಭಿರುಚಿಯನ್ನು ವೃದ್ಧಿಸುವ ಆಧುನಿಕ ವಿಧಾನಗಳನ್ನು ಅಳವಡಿಸಿಕೊಂಡಿರುವುದಿಲ್ಲ.

❖ ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮದ ಪ್ರೌಢಶಾಲೆಗಳಲ್ಲಿ ಪ್ರಥಮಭಾಷೆ ಕನ್ನಡದ ಕಾವ್ಯಾಂಶ ಬೋಧನಾ ಉದ್ದೇಶಗಳು ವಿದ್ಯಾರ್ಥಿಗಳ ಭಾಷಾ ಕೌಶಲಗಳ ಅಭಿವೃದ್ಧಿಗೆ ಪೂರಕವಾಗಿಲ್ಲ ಹಾಗೂ ಪ್ರಸ್ತುತ ಬೋಧನಾ ಉದ್ದೇಶಗಳು ತರಗತಿಗಳಲ್ಲಿ ಅನಿಷ್ಠಾನಗೊಳ್ಳುತ್ತಿಲ್ಲ.

## ೪.೨ ಗದ್ಯ

ಗದ್ಯವು ಮಾತಿನಂತೆ ನೇರ, ನಿರರ್ಗಳ, ನಿಖರ ಹಾಗೂ ಸರಳ. ಪದ್ಯ ರಚನೆಯಲ್ಲಿರುವ ಯಾವ ನಿರ್ಬಂಧಗಳೂ ಗದ್ಯಕ್ಕಿಲ್ಲ. ಗದ್ಯವು ಮಾತಿನಂತೆ ನೇರವೆಂದರೂ ಆಡುನುಡಿಗೂ ಗ್ರಂಥಸ್ಥ ಭಾಷೆಗೂ ಬಹಳ ವ್ಯತ್ಯಾಸವಿದೆ. ಪಠ್ಯದಲ್ಲಿರುವುದು ಗ್ರಂಥಸ್ಥ ಗದ್ಯ. ಗ್ರಂಥಸ್ಥ ಗದ್ಯದಲ್ಲಿ ಹಲವು ಬಗೆಗಳಿವೆ. ಇವುಗಳ ಪರಿಚಯವನ್ನು ಪಠ್ಯ ಕ್ರಮದಲ್ಲಿ ವಿದ್ಯಾರ್ಥಿಗಳ ಭಾಷಾ ಕಲಿಕೆಯ ಹಿನ್ನೆಲೆಯಲ್ಲಿ ಸೇರಿಸಲಾಗಿದೆ.

ಗದ್ಯಭಾಗದ ಕಲಿಕೆಯ ಸನ್ನಿವೇಶದಲ್ಲಿ ಕಥೆ, ನಾಟಕ, ಲೇಖನ, ವ್ಯಕ್ತಿಚಿತ್ರ, ಲಘು ಪ್ರಬಂಧ, ವಿಜ್ಞಾನ ಸಾಹಿತ್ಯ, ಪರಿಸರ ಸಂಬಂಧೀ ಲೇಖನ, ಪತ್ರಲೇಖನ, ಹರಟೆ, ಹಳಗನ್ನಡ ಗದ್ಯ ಮೊದಲಾದ ವಿವರಗಳಿವೆ. ಪಾಠದ ಸಂದರ್ಭದಲ್ಲಿ ಸಾಹಿತ್ಯ ಪ್ರಕಾರದ ಪರಿಚಯ ಹಾಗೂ ನಿಗದಿಗೊಳಿಸಿದ ಪಾಠದ ಭಾವಾಂಶಗಳೇ ಪ್ರಮುಖವಾಹಿನಿಗೆ ಬರುವ ಸಂದರ್ಭಗಳೇ ಹೆಚ್ಚಿವೆ.

ಅಧ್ಯಾಪಕರಿಗೆ ಭಾಷೆಯ ಬೋಧನೆ ಹಾಗೂ ಸಾಹಿತ್ಯ ಬೋಧನೆಯ ಉದ್ದೇಶಗಳ ವಿಭಾಗ ಕ್ರಮದ ಕುರಿತು ನಿರ್ದಿಷ್ಟವಾದ ತರಬೇತಿಗಳಿಲ್ಲದ ಕಾರಣ, ಪಠ್ಯದ ಗದ್ಯ ಭಾಗದಲ್ಲಿ ವಿದ್ಯಾರ್ಥಿಗಳಿಗೆ ಭಾಷಾ ಕೌಶಲಗಳ ತರಬೇತಿ ಕಡಿಮೆಯಾಗುತ್ತಿದೆ. ಗದ್ಯ ಭಾಗದ ಮೌಲ್ಯಮಾಪನದಲ್ಲಿಯೂ ಪಾಠದ ಕೊನೆಯ ಅಭ್ಯಾಸದ ಪ್ರಶ್ನೆಗಳನ್ನೇ ಕೇಳಲಾಗುತ್ತಿದೆ. ತನ್ಮೂಲಕ ಭಾಷಾಂಶದ ಮೌಲ್ಯಮಾಪನಕ್ಕಿಂತ ಗದ್ಯ ಪಾಠಗಳ ಭಾವಾಂಶದ ಮೌಲ್ಯಮಾಪನ ಹಾಗೂ ಸಾಹಿತ್ಯಾಂಶದ ಮೌಲ್ಯಮಾಪನಗಳೇ ಪ್ರಧಾನವಾಗುತ್ತವೆ. ಬರೀ ಬರಹ ಕೌಶಲದ ಆದಾರದ ಮೇಲೆ ಅಂಕ ನೀಡುವ ಪ್ರಕ್ರಿಯೆಯಿಂದಾಗಿ ಭಾಷಾ ಬೋಧನೆಯ ಮೂಲ ಉದ್ದೇಶಗಳು ಕಡೆಗಣಿಸಲ್ಪಟ್ಟಿವೆ.

ಪ್ರೌಢಶಾಲಾ ವಿದ್ಯಾರ್ಥಿಗಳ ಭಾಷಾ ಕಲಿಕೆಯ ಹಿನ್ನೆಲೆಯಲ್ಲಿ ಪಠ್ಯದಲ್ಲಿನ ಗದ್ಯದ ಸ್ವರೂಪ, ಗದ್ಯ ಬೋಧನಾ ಕಲಿಕಾ ಪ್ರಕ್ರಿಯೆಗಳು, ಮೌಲ್ಯಮಾಪನ ಇತ್ಯಾದಿ ವಿಚಾರಗಳು ಭಾಷಾ ಕಲಿಕೆಯ ಹಿನ್ನೆಲೆಯಲ್ಲಿ ಬಹಳ ಮುಖ್ಯವಾಗುತ್ತವೆ. ಶಿಕ್ಷಣ ಇಲಾಖೆಯು ಈ ಎಲ್ಲಾ ವಿಚಾರಗಳ ಕುರಿತು ಶಿಕ್ಷಕರ ಕೈಪಿಡಿಗಳಲ್ಲಿ ಹೇಳುತ್ತದೆಯಾದರೂ ಭಾಷಾವಿಜ್ಞಾನದ ದೃಷ್ಟಿಯ ಅಂಶಗಳ ಕುರಿತು ಶಿಕ್ಷಕರಿಗೆ ಸಿಗುವ ಮಾಹಿತಿಗಳು ಹಾಗೂ ತರಗತಿಯಲ್ಲಿ ಅಳವಡಿಸಿಕೊಳ್ಳಬಹುದಾದ ತಂತ್ರಗಳ ವಿಚಾರಗಳು ಇದರಲ್ಲಿ ಕಡಿಮೆ.

### ಅ) ಪಠ್ಯಗಳಲ್ಲಿ ಗದ್ಯ ವಿಚಾರ

**ಎಂಟನೆಯ ತರಗತಿಯಲ್ಲಿ**

ಗಾಂಧೀಜಿಯವರ ನನ್ನ ಸತ್ಯಾನ್ವೇಷಣೆಯ ಭಾಗ, ಬಸಯ್ಯ ಮತ್ತು ಜೇನುಗೂಡು ಎಂಬ ಕಥೆ, ಸರ್ವಜ್ಞನ ಸಲಹೆ ಎಂಬ ಪತ್ರ ಮಾದರಿ. ಕನ್ನಡ ಸಂಸ್ಕೃತಿ, ನಮ್ಮ ಹೆಮ್ಮೆ ಎಂಬ ಲೇಖನಗಳು. ಮನಸೂರದಲ್ಲಿಯ ದಿನಗಳು, ಹಸಿರು ಹಾದಿ ಎಂಬ ಆತ್ಮ ಕಥನದ

ಭಾಗಗಳು, ತ.ಸು.ಶಾಮರಾಯರ ಕಥಾ ಭಾರತದ ವಿರಾಟ ಪರ್ವದ ಗದ್ಯ ಭಾಗ, ಮಿರ್ಜಾರ ಮಾನವೀಯತೆ ಎಂಬ ವ್ಯಕ್ತಿ ಚಿತ್ರ, ಗೀಜಗನ ಗೂಡು ಎಂಬ ಪರಿಸರ ಲೇಖನ, ಟಾಲ್‌ಸ್ಟಾಯ್ ಮಹರ್ಷಿಯ ಭೂರ್ಜ ವೃಕ್ಷಗಳು ಎಂಬ ಕಥೆ, ಗಂಗೆಯಲ್ಲಿ ದೀಪಮಾಲೆಯೆಂಬ ಪ್ರವಾಸ ಕಥನ, ಕಂಬಳ ಎಂಬ ಲೇಖನ ಈ ಮೊದಲಾದ ವಿಧಗಳನ್ನು ಪಠ್ಯದಲ್ಲಿ ಅಳವಡಿಸಲಾಗಿದೆ.

ಸಾರ್ವಜನಿಕ ಸೇವೆ ಮಾಡುವವರ ಜೀವನ ದುರಾಸೆಯಿಂದ ದೂರವಿದ್ದು, ಸರಳವಾಗಿರಬೇಕು. ಸಂಗೀತವನ್ನು ತಪಸ್ಸಿನಂತೆ ಪಾಲಿಸಿಕೊಂಡು ಬಂದ ಮಲ್ಲಿಕಾರ್ಜುನ ಮನಸೂರರ ಜೀವನವನ್ನು ಪರಿಚಯಿಸುವುದು. ಹಣವಂತರಿಂದ ನಡೆಯುತ್ತಿರುವ ಬಡಜನರ ಶೋಷಣೆಯ ವಿರುದ್ಧವಾಗಿ ದನಿಯೆತ್ತುವುದು. ಪರಿಸರ ಕಾಳಜಿ ಮತ್ತು ಸಂವರ್ಧನೆಯ ಕುರಿತು ಹೊಳಪು ನೀಡುವುದು. ಎಲ್ಲ ಅಸಮಾನತೆಗಳು ತೊಲಗಬೇಕು. ವ್ಯಕ್ತಿಯ ಅಂತರಂಗದಲ್ಲಿ ಪ್ರೀತಿ, ಸ್ನೇಹ, ದಯೆ, ಸಮಾನತೆ, ಸಹಕಾರ ಸೌಹಾರ್ದಭಾವಗಳು ತುಂಬಬೇಕು. 'ಜನರ ಸೇವೆಯೇ ದೇವರ ಸೇವೆ' ಎಂದ ಜನನಾಯಕರ ಜೀವನದ ಅಪೂರ್ವ ಪ್ರಸಂಗದ ಪರಿಚಯ. ಸಜ್ಜನರ ಸ್ನೇಹ, ಪ್ರಾಣಿಹಿಂಸೆ, ಅಹಂಕಾರ-ಮದ-ಕೋಪದ ಅನರ್ಥಗಳನ್ನು ತಿಳಿಸುವುದು. ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರ ಲೇಖನಗಳ ಮೂಲಕ ಪ್ರಕೃತಿ ಪರಿಚಯ. ಆದರ್ಶಗಳ ಅನುಷ್ಠಾನಕ್ಕಾಗಿ ಯಾವ ತ್ಯಾಗಕ್ಕೂ ಸಿದ್ದರಾಗಬೇಕು. ಅಹಂಕಾರವನ್ನು ಗೆದ್ದು ತ್ಯಾಗ ಗುಣವನ್ನು ಮೆರೆಯುವ ಮೂಲಕ ಮಾನವನು ಉದಾತ್ತನಾಗಬೇಕು. ದೈವ, ಪೂಜೆ, ಪ್ರಕೃತಿಗಳ ಬಗ್ಗೆ ತಿಳಿಯುತ್ತಾ ಮನುಷ್ಯ ಮತ್ತು ಪ್ರಕೃತಿಯ ಸಂಬಂಧವನ್ನು ತಿಳಿಯುವುದು ಈ ಮೊದಲಾದ ಆಶಯಗಳನ್ನು ಅಧ್ಯಾಪಕರು ಪಾಠದ ಮೂಲಕ ವಿದ್ಯಾರ್ಥಿಗಳಲ್ಲಿ ಬಿತ್ತಬೇಕಿದೆ.

**ಒಂಬತ್ತನೆಯ ತರಗತಿಯಲ್ಲಿ**

ಪರಿವರ್ತನೆ ಎಂಬ ಕಥೆ. ಜನಪ್ರಿಯ ವಾಲ್ಮೀಕಿ ರಾಮಾಯಣದ ತಾಟಕಾ ಸಂಹರಣ ಗದ್ಯ, ಸುಬಾಷ್ ಚಂದ್ರ ಬೋಸ್, ರೆವರೆಂಡ್ ಫಾದರ್ ಫರ್ಡಿನಾಂಡ್ ಕಿಟೆಲ್, ಬಾಲ್ಯ ವಿವಾಹವನ್ನು ತಡೆದ ಭಾಂಪ್ರಿದೇವಿ ಎಂಬ ವ್ಯಕ್ತಿ ಚಿತ್ರಣ, ಪ್ರತಿದಿನ ಪರಿಸರದಿನ ಎಂಬ ಪ್ರಬಂಧ, ದೊಡ್ಡಾಟ ಎಂಬ ಗದ್ಯ, ಕಲೆಯ ಆಗರ ಪ್ಯಾರಿಸ್ ಎಂಬ ಪ್ರವಾಸ ಕಥನ, ಭೂಕಂಪದ ಅಂತರಂಗವೆಂಬ ಲೇಖನ, ಮುದ್ದಣನ ಗದ್ಯ ಕೃತಿ ರಾಮಾಶ್ವಮೇಧದ ಭಾಗ, ಸತ್ಯವಾದಿ ಸುಧಾಮೆ ಎಂಬ ವಡ್ಡಾರಾಧನೆಯ ಹಳಗನ್ನಡ ಗದ್ಯ ಕೃತಿಯನ್ನು ಪಠ್ಯದಲ್ಲಿ ಅಳವಡಿಸಲಾಗಿದೆ.

ದಯೆಯಿಲ್ಲದ ಧರ್ಮವಾವುದಯ್ಯ? ದಯವೇ ಧರ್ಮದ ಮೂಲ ಎಂಬ ಆಶಯ. ರಾಮಾಯಣದ ಬಾಲಕಾಂಡದ ಪರಿಚಯ ಬಾಲಕ ರಾಮನ ಧೈರ್ಯಸಾಹಸಗಳ ಪರಿಚಯ. ವಿದೇಶದಿಂದ ಮತ ಪ್ರಚಾರಕ್ಕೆ ಬಂದು ಕನ್ನಡ ನಾಡು ನುಡಿಗೆ ಮನಸೋತ ಕಿಟೆಲ್‌ರವರ ಕನ್ನಡ ಸೇವೆಯನ್ನು ಪರಿಚಯಿಸುವುದು. ಪರಿಸರವನ್ನು ಮಲಿನಗೊಳಿಸುವವರ ಕಾರ್ಯ

ಚಟುವಟಿಕೆಗಳನ್ನು ನಿಷ್ಕ್ರಿಯಗೊಳಿಸಬೇಕು. ಜನಪದ ರಂಗಭೂಮಿ ಕಲೆಯನ್ನು ಪರಿಚಯಿಸುವ ಆಶಯ. ಫ್ರಾನ್ಸ್ ದೇಶದ ವಿವಿಧ ಮುಖಗಳ ರೋಚಕಗಳ ಬಗ್ಗೆ ಜಾಗೃತಿ ಮೂಡಿಸುವುದು. ಸ್ವಾತಂತ್ರ ಹೋರಾಟಗಾರರ ಬದುಕನ್ನು, ದೇಶಕ್ಕಾಗಿ ಪ್ರಾಣಾರ್ಪಣೆ ಮಾಡಿದ ವೀರರ ಚರಿತೆಯನ್ನು ತಿಳಿಸುವುದು. ಪ್ರಕೃತಿಯ ವಿಕೋಪಗಳನ್ನು ಸಹಿಸಿಕೊಂಡು ಆತ್ಮಬಲ ಹಾಗೂ ಛಲದಿಂದ ಮನುಷ್ಯ ಬದುಕುತ್ತಿರುವ ಚಿತ್ರಣವನ್ನು ನೀಡುವುದು. ಮುದ್ದಣ-ಮನೋರಮೆಯರ ಸರಸ-ಸಲ್ಲಾಪವನ್ನು ಸಂವಾದದ ಸ್ವಾರಸ್ಯವನ್ನು ಪರಿಚಯಿಸುವುದು. ಹಳಗನ್ನಡದ ಗದ್ಯವನ್ನು ಪರಿಚಯಿಸುವುದು. ದೇಶದಲ್ಲಿ ಸಮರಸದ ವಾತಾವರಣ ಸೃಷ್ಟಿಯಾಗಬೇಕೆಂಬ ಆಶಯ. ರಾಷ್ಟ್ರರಕ್ಷಣೆಗೆ ನಾವು ಸದಾ ಸಿದ್ಧರಾಗಿರಬೇಕೆಂಬ ಆಶಯಗಳನ್ನು ವಿದ್ಯಾರ್ಥಿಗಳು ಪಠ್ಯದ ಮೂಲಕ ಕಲಿಯಬೇಕಿದೆ.

**ಹತ್ತನೆಯ ತರಗತಿಯಲ್ಲಿ**

ನಮ್ಮಭಾಷೆ ಎಂಬ ಲೇಖನ, ನಗು ಅಳು ಎಂಬ ಹಾಸ್ಯ ಬರಹ, ಮನಃ ಪರಿವರ್ತನೆ ಎಂಬ ನಾಟಕ. ತ್ಯಾಗಮಯಿ ಎಂಬ ಕಥೆ, ಸಂಕಲ್ಪ ಎಂಬ ಲಲಿತ ಪ್ರಬಂಧ, ನೆನಪಿನಂಗಳದಿಂದ ಎಂಬ ಆತ್ಮಕಥನ, ಶಕ್ತಿಯೇ ಜೀವನ ಎಂಬ ಲೇಖನ, ನಮ್ಮ ಸೈನಿಕರು ಎಂಬ ಗದ್ಯ, ಮುದ್ರಾಮಂಜೂಷದಿಂದ ಆಯ್ದುಕೊಂಡ ಮಿತ್ರಪ್ರೇಮವೆಂಬ ಗದ್ಯ ಕಥೆ. ಮೊಲಂ ಸಿಂಹಮಂ ಕೊಂದ ಕಥೆ ಎಂಬ ಹಳಗನ್ನಡ ಗದ್ಯ ಕಥೆಯನ್ನು ಪಠ್ಯದಲ್ಲಿ ನಿಗದಿಪಡಿಸಲಾಗಿದೆ.

ಕನ್ನಡ ಭಾಷೆ-ಸಾಹಿತ್ಯ ಸಂಸ್ಕೃತಿಯ ಮಹತ್ವವನ್ನು ಅರಿಯುವುದು, ಮಾತೃಭಾಷೆಯ ಅಂತರ್ಯದಲ್ಲಿರುವ ಆತ್ಮೀಯತೆ-ಸೊಗಸನ್ನು ಅರಿಯುವುದು. ನಗು-ಅಳುಗಳ ಮೂಲ ಮನಸ್ಸು ಎಂಬುದನ್ನು ಸಂಶೋಧಾನಾತ್ಮಕ ರೀತಿಯಲ್ಲಿ ಸಾದರ ಪಡಿಸಿರುವ ಲೇಖಕರ ನಿಲುವನ್ನು ಅರ್ಥೈಸಿಕೊಳ್ಳುವುದು. ಕ್ರೌರ್ಯ ಮತ್ತು ಶಾಂತಿ ಎಂಬ ಪರಸ್ಪರ ವಿರುದ್ಧ ಪರಿಕಲ್ಪನೆಗಳ ಪ್ರತಿನಿಧಿಗಳಾಗಿರುವ ಅಂಗುಲೀಮಾಲಾ ಹಾಗೂ ಬುದ್ಧನ ಚಿತ್ರಣದಲ್ಲಿ ಧನಾತ್ಮಕ ಚಿಂತನೆಯೇ ಮನಃ ಪರಿವರ್ತನೆಗೆ ಸಾಕ್ಷಿ ಎಂಬುದನ್ನು ತಿಳಿಯುವುದು. ತ್ಯಾಗ ಮೌಲಿಕ ಪರಿಕಲ್ಪನೆ, ಸ್ವಾರ್ಥವನ್ನು ಮರೆತು ಪರರ ಉಪಕಾರಕ್ಕೆ ಮುಂದಾಗಬೇಕು. ಶರೀರ ಸಾರ್ಥಕವಾಗುವುದು ಪರೋಪಕಾರದಿಂದಲೇ ಎಂಬ ಭಾರತೀಯ ಸಂಸ್ಕೃತಿಯನ್ನು ತಿಳಿಯಬೇಕು. ಗದ್ಯ ಸಾಹಿತ್ಯದಲ್ಲಿನ ಲಲಿತ ಪ್ರಬಂಧವನ್ನು ಪರಿಚಯಿಸುವುದು. ಕನ್ನಡ ಸಾಹಿತ್ಯದಲ್ಲಿನ ಆತ್ಮಕಥನ ಪ್ರಕಾರವನ್ನು ಪರಿಚಯಿಸುವುದು. ಆ ಮೂಲಕ ಸ್ವಾತಂತ್ರದ ಕಾಲಘಟ್ಟವನ್ನು ಪರಿಚಯಿಸುವುದು.

ಶಾರೀರಿಕ, ಬೌದ್ಧಿಕ, ನೈತಿಕ, ಆಧ್ಯಾತ್ಮಿಕ ಶಕ್ತಿಗಳಿಂದ ಕ್ರಿಯಾಶೀಲ ವ್ಯಕ್ತಿತ್ವವನ್ನು ರೂಢಿಸಿಕೊಳ್ಳಬೇಕು, ಮನುಷ್ಯನನ್ನು ಸನ್ಮಾರ್ಗದಲ್ಲಿ ಸಂಕಲ್ಪಿಸಿಕೊಳ್ಳಬೇಕೆಂಬ ಆಶಯ. ಭಾರತೀಯ ಸೇನಾ ಪಡೆಯ ಸ್ವರೂಪ, ಕಾರ್ಯವೈಖರಿ, ಸೇನಾ ನೇಮಕಾತಿ ವಿಧಾನವನ್ನು ಪರಿಚಯಿಸುವುದು ಮತ್ತು ದೇಶಪ್ರೇಮ, ರಾಷ್ಟ್ರ ರಕ್ಷಣೆ, ಸೈನಿಕರನ್ನು ಗೌರವಿಸುವ

ಮನೋಭಾವವನ್ನು ಬೆಳೆಸಿಕೊಳ್ಳಬೇಕೆಂಬ ಆಶಯ. ವೀರರಸ ಪ್ರಧಾನವಾದ 'ಮುದ್ರಾಮಂಜೂಷ'ದ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಭಾಷಾ ಶೈಲಿಯನ್ನು ಪರಿಚಯಿಸುವುದು ಮತ್ತು ಮನುಷ್ಯ ಜೀವನದಲ್ಲಿ ಗೆಳೆತನಕ್ಕಿರುವ ಮಹತ್ವವನ್ನು ತಿಳಿಸುವುದು. 'ಬುದ್ಧಿ ಹಾಗೂ ಬಲಗಳ ನಡುವಿನ ಹೋರಾಟದಲ್ಲಿ ಬುದ್ಧಿಯೇ ಗೆಲ್ಲುತ್ತದೆ', 'ಲೋಕದಲ್ಲಿ ಎಷ್ಟೇ ಶೌರ್ಯವಂತನಾದರೂ ಕೋಪಾತುನಾದವನು ಬಾಳಲಾರ' ಎಂಬುದನ್ನು ತಿಳಿಸುವುದು ಈ ಮೊದಲಾದ ಮೌಲ್ಯಗಳನ್ನು ಪಠ್ಯದಲ್ಲಿನ ಗದ್ಯಭಾಗದ ಮೂಲಕ ಸಾಧಿಸಬೇಕಿದೆ.

ಪ್ರೌಢಶಾಲಾ ಪ್ರಥಮಭಾಷೆ ಕನ್ನಡ ಪಠ್ಯಗಳಲ್ಲಿ ಗದ್ಯದಲ್ಲಿ ಬರುವ ಕಥೆ, ಹಾಸ್ಯ ಲೇಖನ, ವಿಡಂಬನೆ, ಪ್ರಬಂಧ, ಜೀವನಚರಿತ್ರೆ, ಆತ್ಮಕಥೆ, ಲಲಿತ ಪ್ರಬಂಧ, ನಾಟಕ, ಪ್ರವಾಸ ಕಥನ, ವ್ಯಕ್ತಿಚಿತ್ರ, ಹಳಗನ್ನಡ ಗದ್ಯ, ವೈಜ್ಞಾನಿಕ ಲೇಖನ, ಪತ್ರ ಲೇಖನ ಹೀಗೆ ಎಲ್ಲಾ ವಿಭಾಗಗಳನ್ನು ಪರಿಚಯಿಸಲಾಗಿದೆ. ಗದ್ಯ ಬೋಧನಾ ಉದ್ದೇಶದಲ್ಲಿರುವಂತೆ ಅನೇಕ ಲೇಖಕರ ಪರಿಚಯದೊಂದಿಗೆ ಅವರ ವಿಭಿನ್ನ ಗದ್ಯ ಪ್ರಕಾರಗಳನ್ನು ಭಾಷಾ ಅಧ್ಯಯನದ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳು ಕಲಿಯಬೇಕಿದೆ.

### ಆ) ತರಗತಿಯ ವಾಸ್ತವ

ಕ್ಷೇತ್ರಕಾರ್ಯದ ಫಲಿತಗಳನ್ನು ಕೇಂದ್ರವಾಗಿರಿಸಿಕೊಂಡು ವಿದ್ಯಾರ್ಥಿಗಳೊಂದಿಗೆ ಹಾಗೂ ಅಧ್ಯಾಪಕರೊಂದಿಗೆ ನಡೆಸಿದ ಚರ್ಚೆಯಲ್ಲಿ ಹಾಗೂ ಅವಲೋಕನ ವಿಧಾನದಲ್ಲಿ ಗಮನಿಸಿದ ಕೆಲವೊಂದು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪಠ್ಯಪುಸ್ತಕದ ಗದ್ಯ ಕಲಿಕೆಯ ಕುರಿತು ಈ ಕೆಳಗಿನ ತೀರ್ಮಾನಕ್ಕೆ ಬರಲಾಗಿದೆ.

- ಹೆಚ್ಚಿನ ವಿದ್ಯಾರ್ಥಿಗಳು ಅಕ್ಷರಗಳನ್ನು ಗುರುತಿಸುವಲ್ಲಿ, ವಾಕ್ಯಗಳನ್ನು ನಿರರ್ಗಳವಾಗಿ ಓದುವಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.
- ಹಳಗನ್ನಡ ಪಾಠವನ್ನು ಹೆಚ್ಚಿನ ವಿದ್ಯಾರ್ಥಿಗಳು ಹೊಸ ಭಾಷೆಯೆಂಬಂತೆ ಓದುತ್ತಾರೆ
- ವಿದ್ಯಾರ್ಥಿಗಳಲ್ಲಿರುವ ಭಾಷಾ ಕೌಶಲಗಳ ಕಲಿಕೆಯ ಮಟ್ಟವನ್ನು ಆಧರಿಸಿದರೆ ಪ್ರಸ್ತುತ ಸರಕಾರಿ ಹಾಗೂ ಅನುದಾನಿತ ಪ್ರೌಢಶಾಲಾ ವಿದ್ಯಾರ್ಥಿಗಳ ಸ್ವ ಕಲಿಕೆಗೆ ಪಠ್ಯವು ಪೂರಕವಾಗಿಲ್ಲ.
- ಹಳಗನ್ನಡ ಪಾಠವನ್ನು ಓದಲು, ಕಲಿಯಲು ವಿದ್ಯಾರ್ಥಿಗಳು ಬಹಳ ಕಷ್ಟಪಡುತ್ತಿದ್ದಾರೆ.
- ಪಠ್ಯಪುಸ್ತಕದ ಗದ್ಯ ಬೋಧನೆಯ ಉದ್ದೇಶಗಳು ಭಾಷಾಂಶಕ್ಕಿಂತ ಭಾವಾಂಶಗಳಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿವೆ.

- ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ಗದ್ಯಪಾಠಗಳನ್ನು ಅಳವಡಿಸದಿರುವುದು ಗದ್ಯಪಾಠಗಳ ಆಶಯದಿಂದ ತಿಳಿದುಬರುತ್ತದೆ.
- ಗದ್ಯಪಾಠಗಳ ಅಳವಡಿಕೆಯ ಉದ್ದೇಶದ ಹಿನ್ನೆಲೆಯಲ್ಲಿ ಭಾಷಾ ಕಲಿಕೆಯ ಉದ್ದೇಶಗಳು ಗೌಣವಾಗಿವೆ. ಮೌಲ್ಯಗಳ ಬೋಧನೆಯು ಪ್ರಧಾನವಾಗಿದೆ.
- ಮೌಲ್ಯ ಮಾಪನವು ಪಾಠದ ಕೊನೆಯಲ್ಲಿ ಕೊಟ್ಟಿರುವ ಅಭ್ಯಾಸವನ್ನು ಅವಲಂಬಿಸಿದೆ. ವಿದ್ಯಾರ್ಥಿಗಳ ಭಾಷಿಕ ಕೌಶಲಗಳನ್ನು ಮೌಲ್ಯಮಾಪನ ಮಾಡಲಾಗುತ್ತಿಲ್ಲ.
- ಸಿದ್ಧ ಪ್ರಶ್ನೆಗಳಿಗೆ ಸಿದ್ಧ ಉತ್ತರ ಎಂಬ ಮಾದರಿಯಿಂದಾಗಿ ಪರೀಕ್ಷೆಗಳಲ್ಲಿ ಅಂಕಗಳನ್ನು ಗಳಿಸಲು ವಿದ್ಯಾರ್ಥಿಗಳು ಪ್ರಶ್ನೋತ್ತರಗಳನ್ನು ಕಂಠಪಾಠ ಮಾಡುತ್ತಿದ್ದಾರೆ. ಭಾಷಾ ಬೋಧನೆಯ ಅಂಶಗಳು ಇಲ್ಲಿ ಸಂಪೂರ್ಣವಾಗಿ ಕಡೆಗಣಿಸಲ್ಪಟ್ಟಿವೆ.
- ಪಠ್ಯದಲ್ಲಿನ ಗದ್ಯಭಾಗವು ವಿದ್ಯಾರ್ಥಿಗಳ ಭಾಷಾ ಕೌಶಲಗಳ ವೃದ್ಧಿಗೆ ಪೂರಕವಾಗಿಲ್ಲ ಹಾಗೂ ಪ್ರಸ್ತುತ ಗದ್ಯ ಬೋಧನಾ ಉದ್ದೇಶಗಳು ತರಗತಿಯಲ್ಲಿ ಅನುಷ್ಠಾನಗೊಳ್ಳುತ್ತಿಲ್ಲ.

### ೪.೩ ವ್ಯಾಕರಣ

ಭಾಷೆಯ ರಚನಾ ವಿಧಾನವನ್ನು ತಿಳಿಸುವುದು ವ್ಯಾಕರಣ. ಭಾಷೆಯು ವರ್ತಿಸುವ ರೀತಿಯನ್ನು ಇದು ತಿಳಿಸುತ್ತದೆ. ಭಾಷೆಗೊಂದು ಚೌಕಟ್ಟನ್ನು ಕೊಡುವುದರ ಜೊತೆಗೆ ಭಾಷೆಯನ್ನು ನಿಯಂತ್ರಿಸುವ ಕೆಲಸವನ್ನೂ ವ್ಯಾಕರಣವು ಮಾಡುತ್ತದೆ. ಭಾಷೆಯ ಜಾಯಮಾನವನ್ನು ತಿಳಿಯಲು ಮತ್ತು ಭಾಷೆಯ ಶುದ್ಧ ಪ್ರಯೋಗಕ್ಕಾಗಿ ವ್ಯಾಕರಣದ ಕಲಿಕೆ ಅನಿವಾರ್ಯ. ವ್ಯಾಕರಣ ಭಾಷೆಯನ್ನು ಶುದ್ಧೀಕರಿಸುತ್ತದೆ. ವಿದ್ಯಾರ್ಥಿಗಳ ಭಾಷಾ ಕಲಿಕೆಯ ದಿಕ್ಕನ್ನು ನಿರ್ದಿಷ್ಟಪಡಿಸುತ್ತದೆ.

ಪ್ರಸ್ತುತ ಪ್ರೌಢಶಾಲಾ ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕಗಳಲ್ಲಿ ಸಮಗ್ರ ವ್ಯಾಕರಣ ವಿಚಾರಗಳನ್ನು ಪರಿಚಯಿಸಿದೆ ಇದು ವಿದ್ಯಾರ್ಥಿಗಳ ಭಾಷಾ ಸಾಮರ್ಥ್ಯವನ್ನು ಅಭಿವೃದ್ಧಿಗೊಳಿಸುವ ಬದಲು ಅವರನ್ನು ಕಂಠಪಾಠದ ಪರಿಧಿಯೊಳಗೆ ಸೀಮಿತಗೊಳಿಸುತ್ತಿರುವ ಅಂಶವನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ವ್ಯಾಕರಣಾಂಶಗಳನ್ನು ಪ್ರೌಢಶಾಲಾ ಹಂತದ ವಿದ್ಯಾರ್ಥಿಗಳಿಗೆ ಸಮಗ್ರವಾಗಿ ನಿಗದಿಪಡಿಸುವ ಅವಶ್ಯಕತೆಯಿಲ್ಲ. ಜೊತೆಗೆ ಈ ವ್ಯಾಕರಣಾಂಶಗಳನ್ನು ಭಾಷಾ ಕೌಶಲಗಳ ವೃದ್ಧಿಗೆ ಹೇಗೆ ಬಳಸಿಕೊಳ್ಳಬೇಕೆಂಬ ವಿಚಾರಗಳನ್ನು ಪಠ್ಯ ರಚನಾ ಸಮಿತಿ ತಿಳಿಸಿಲ್ಲ. ಇಲಾಖೆಯೂ ಕೂಡಾ ವ್ಯಾಕರಣಾಂಶಗಳನ್ನು ಪ್ರಸ್ತುತ ವಿದ್ಯಾರ್ಥಿಗಳ ಭಾಷಾ ಕೌಶಲ ಗ್ರಹಿಕೆಗೆ ಅನ್ವಯಗೊಳಿಸುವ ಕುರಿತು ಶಿಕ್ಷಕರಿಗೆ ತರಬೇತಿಯನ್ನು ನೀಡುತ್ತಿಲ್ಲ. ಇದರಿಂದಾಗಿ ಕನ್ನಡ ಭಾಷಾ ಪಠ್ಯಗಳಲ್ಲಿ

ವ್ಯಾಕರಣಾಂಶಗಳ ಕಲಿಕೆಯ ಭಾಗವು ಕಂಠಪಾಠದ ಕಲಿಕೆಯಾಗಿದೆ. ಪರೀಕ್ಷೆಗಳಲ್ಲಿ ಅಂಕಗಳಿಕೆಗಾಗಿ ಕಲಿಕೆಯು ಯಾಂತ್ರಿಕವಾಗಿದೆ.

ಭಾಷೆ ನಿತ್ಯ ಚಲನಶೀಲವಾದುದು. ಪರಿವರ್ತನೆಯು ಜಗದ ನಿಯಮವಾದ್ದರಿಂದ ಭಾಷೆಯಲ್ಲಿಯೂ ಅನೇಕ ಚಲನಶೀಲ ಪ್ರಕ್ರಿಯೆಗಳು ನಡೆಯುತ್ತಲೇ ಇರುತ್ತವೆ. ದಶಕ, ಶತಕಗಳ ಹಿಂದಿನ ಭಾಷಾ ಕ್ರಮದಲ್ಲಿದ್ದ ವ್ಯಾಕರಣಾಂಶಗಳನ್ನು ಇಂದಿಗೂ ಕಲಿಸಲಾಗುತ್ತಿದೆ. ಇಂದಿನ ಕನ್ನಡದಲ್ಲಿ ಉಪಯೋಗದಲ್ಲಿಯೇ ಇಲ್ಲದ ಹಲವು ವಿಚಾರಗಳನ್ನು ಪಠ್ಯದಲ್ಲಿ ಸೇರಿಸಿದೆ. ಮೌಲ್ಯಮಾಪನ ವಿಧಾನದಲ್ಲೂ ಪಠ್ಯದಲ್ಲಿನ ವಿಚಾರಗಳನ್ನೇ ಕೇಳಲಾಗುತ್ತಿದೆಯೇ ಹೊರತು ವ್ಯಾಕರಣದಿಂದ ವಿದ್ಯಾರ್ಥಿಗಳ ಮೇಲಾದ ಪರಿಣಾಮ, ಪ್ರಭಾವ, ಆ ಮೂಲಕ ಗಳಿಸಿಕೊಂಡ ಜ್ಞಾನದ ಮೌಲ್ಯಮಾಪನವಿಲ್ಲ. ಪಠ್ಯದ ವ್ಯಾಕರಣವೇ ಪರೀಕ್ಷೆಯಲ್ಲಿ ಬರೆಯಬೇಕಾದ ಕಾರಣ ಪ್ರೌಢಶಾಲಾ ವಿದ್ಯಾರ್ಥಿಗಳು ವ್ಯಾಕರಣದ ವಿಚಾರಗಳನ್ನು ಕಂಠಪಾಠಮಾಡಿ ಪರೀಕ್ಷೆಗಳಲ್ಲಿ ಬರೆಯುತ್ತಾರೆ. ಹೀಗೆ ಪ್ರೌಢಶಾಲಾ ಕನ್ನಡ ಪ್ರಥಮಭಾಷಾ ಪಠ್ಯಪುಸ್ತಕದ ವ್ಯಾಕರಣದ ವಿಭಾಗದಲ್ಲೂ ವಿದ್ಯಾರ್ಥಿಗಳಿಗೆ ಭಾಷಾ ಕಲಿಕೆಯು ಕಡಿಮೆಯಾಗುತ್ತಿದೆ. ಭಾಷಾ ಕೌಶಲಗಳು ಗೌಣವಾಗುತ್ತಿವೆ.

ಪ್ರೌಢಶಾಲಾ ಹಂತದಲ್ಲಿನ ಪಠ್ಯ ಪುಸ್ತಕಗಳಲ್ಲಿನ ವ್ಯಾರಣಾಂಶಗಳನ್ನು ಅವುಗಳ ಸ್ವರೂಪವನ್ನು ತಿಳಿಯುವುದು ಮುಖ್ಯವಾಗುತ್ತದೆ.

ವ್ಯಾಕರಣಾಂಶಗಳ ಬೋಧನೆಗಾಗಿ ಭಾಷಾ ಶಿಕ್ಷಕರು ಸಾಕಷ್ಟು ಪೂರ್ವ ಸಿದ್ಧತೆಯನ್ನು ಮಾಡಿಕೊಳ್ಳಬೇಕು, ನಂತರದಲ್ಲಿ ವ್ಯಾಕರಣಾಂಶದ ನಿರೂಪಣೆ ಮಾಡುವುದು, ತದನಂತರ ಕೇಂದ್ರೀಕೃತ ಅಭ್ಯಾಸ ಮಾಡುವುದು, ಬಳಿಕ ವಿದ್ಯಾರ್ಥಿಗಳ ಕಲಿಕೆಯ ಬಗ್ಗೆ ಮಾಹಿತಿ ಸಂಗ್ರಹಣೆಯನ್ನು ಮಾಡುವುದು, ಸಂಗ್ರಹಿತ ಮಾಹಿತಿಯಾಧಾರದ ಮೇಲೆ ಬೋಧನಾ ವಿಧಾನದಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವುದು, ಇವು ವ್ಯಾಕರಣದ ಪಾಠದ ಹಂತಗಳು. ಇದೇ ಹಂತಗಳಲ್ಲಿ ವ್ಯಾಕರಣವನ್ನು ಬೋಧಿಸಬೇಕೆಂದು ಇಲಾಖೆಯು ಶಿಕ್ಷಕರಿಗೆ ತರಬೇತಿಯ ಸಂದರ್ಭದಲ್ಲಿ ತಿಳಿಸುತ್ತದೆ.

ವಾರದಲ್ಲಿ ಒಂದು ಅವಧಿಯಂತೆ ವರ್ಷದಲ್ಲಿ ಮೂವತ್ತು ಅವಧಿಗಳಲ್ಲಿ ವ್ಯಾಕರಣವನ್ನು ಶಾಸ್ತ್ರೀಯವಾಗಿ ಹಾಗೂ ಪ್ರಾಯೋಗಿಕವಾಗಿ ಬೋಧಿಸಬೇಕೆಂದು ಶಿಕ್ಷಣ ಇಲಾಖೆಯು ನಿರ್ದೇಶನ ನೀಡಿದೆ. ಯಾವುದೇ ವ್ಯಾಕರಣ ವಿಚಾರಗಳನ್ನು ಅಭ್ಯಾಸ ಮಾಡಿಸುವ ಮೊದಲು ಆ ಪ್ರಕ್ರಿಯೆಗಳಿಗೆ ಸಂಬಂಧಿಸಿದಂತೆ ಎಲ್ಲ ವ್ಯಾಕರಣ ನಿಯಮಗಳನ್ನು ವಿದ್ಯಾರ್ಥಿಗಳಿಗೆ ಕರಗತವಾಗುವಂತೆ ನೋಡಿಕೊಳ್ಳಬೇಕು ಹಾಗೂ ಇದಕ್ಕಾಗಿಯೇ ಕೆಲವು ಅವಧಿಗಳನ್ನು ತೆಗೆದುಕೊಳ್ಳಬೇಕು. ಪಾಠಮಾಡುವಾಗಲೇ ವ್ಯಾಕರಣದ ನಿಯಮಗಳನ್ನು ಹೇಳಬಾರದು. ಸಂದರ್ಭಾನುಸಾರವಾಗಿ ಹೇಳಿ ಪಾಠದ ಕೊನೆಯಲ್ಲಿಯೇ ಸಮಗ್ರ ವಿವರಣೆಯನ್ನು ನೀಡಬೇಕು ಎಂಬುದನ್ನೂ ತಿಳಿಸಲಾಗಿದೆ.

"ಆಲಿಸುವಚಿತೆ ಮಾಡುವುದು, ಪ್ರಸಕ್ತ ವ್ಯಾಕರಣಾಂಶಗಳಿರುವ ಕಥೆ ಹೇಳುವುದು, ಹೇಳಿಸುವುದು. ನಾಟಕಾತ್ಮಕ ಚಟುವಟಿಕೆಗಳು, ಚಿತ್ರಗಳು, ವಸ್ತುಗಳು, ಹಾಡುಗಳು, ನಕ್ಷೆಗಳು, ಆಟಗಳು, ಪಠ್ಯಾಧಾರಿತ ಚಟುವಟಿಕೆಗಳು ಇತ್ಯಾದಿ ವಿಧಾನಗಳ ಮೂಲಕ ವ್ಯಾಕರಣ ಭಾಗವನ್ನು ಕಲಿಸಬೇಕು"[೩] ಎಂದು ಪಠ್ಯಪುಸ್ತಕ ರಚನಾ ಸಮಿತಿ ತಿಳಿಸುತ್ತದೆ.

## ಅ) ಪಠ್ಯಗಳಲ್ಲಿ ವ್ಯಾಕರಣ ವಿಚಾರ

**೮ನೇ ತರಗತಿ**

ಕನ್ನಡ ವರ್ಣಮಾಲೆ, ಸ್ವರ, ವ್ಯಂಜನ, ಯೋಗವಾಹಗಳು, ಹ್ರಸ್ವ, ದೀರ್ಘ, ಪ್ಲುತ ವಿಭಾಗಕ್ರಮ, ಗುಣಿತಾಕ್ಷರಗಳು, ಸಂಯುಕ್ತಾಕ್ಷರಗಳು, ಅವುಗಳ ವಿಧಗಳು. ಸಂಧಿ, ಕನ್ನಡ ಸಂಧಿಗಳು, ಪ್ರಕೃತಿಭಾವ, ಸಂಸ್ಕೃತ ಸಂಧಿಗಳು, ಸವರ್ಣದೀರ್ಘ, ಗುಣ, ವೃದ್ಧಿ, ಯಣ್, ಶ್ಚುತ್ವ, ಜಸ್ತ್ವ, ಅನುನಾಸಿಕ ಸಂಧಿಗಳು, ತತ್ಸಮ – ತದ್ಭವಗಳು, ನಾಮಪದ, ವಿಭಕ್ತಿ ಪ್ರತ್ಯಯಗಳು, ಗುಣವಾಚಕ, ಸಂಖ್ಯಾವಾಚಕ, ಪರಮಾಣವಾಚಕ, ದಿಗ್ವಾಚಕ, ವಸ್ತುವಾಚಕ, ಸರ್ವನಾಮ, ಪುರುಷವಾಚಕ, ಪ್ರಶ್ನಾರ್ಥಕ, ಆತ್ಮಾರ್ಥಕ, ನಿರ್ದೇಶಾತ್ಮಕ, ಭಾವನಾಮ, ವಾಕ್ಯ, ವಾಕ್ಯ ಪ್ರಭೇದಗಳು ಸಾಮಾನ್ಯವಾಕ್ಯ, ಸಂಯೋಜಿವಾಕ್ಯ, ಮಿಶ್ರವಾಕ್ಯ, ವಾಕ್ಯಪರಿವರ್ತನೆ, ಪತ್ರಲೇಖನ – ಖಾಸಗೀ ಪತ್ರ, ವ್ಯವಹಾರಿಕ ಪತ್ರ, ಪ್ರಬಂಧ ರಚನೆಯ ವಿಚಾರಗಳನ್ನು ಕಲಿಕೆಗಾಗಿ ಅಳವಡಿಸಲಾಗಿದೆ.

**೯ನೇ ತರಗತಿ**

ಕ್ರಿಯಾಪದ, ಧಾತು, ಮೂಲಧಾತು, ಸಾಧಿತಧಾತು, ಸಕರ್ಮಕ ಧಾತು, ಅಕರ್ಮಕ ಧಾತು, ವಿಧ್ಯರ್ಥಕ ಕ್ರಿಯಾಪದ, ನಿಷೇಧಾರ್ಥಕ, ಕಾಲಗಳು, ವರ್ತಮಾನ, ಭೂತ, ಭವಿಷ್ಯತ್ ಕಾಲಗಳ ವಿಭಾಗಕ್ರಮ, ಅವ್ಯಯ, ಸಾಮಾನ್ಯಾವ್ಯಯ, ಅನುಕರಣಾವ್ಯಯ, ಭಾವಸೂಚಕ ಅವ್ಯಯ, ಕ್ರಿಯಾರ್ಥಕ ಅವ್ಯಯ, ಸಂಬಂಧಸೂಚಕ ಅವ್ಯಯ, ಕರ್ತರಿ – ಕರ್ಮಣಿ ಪ್ರಯೋಗಗಳು, ಕಾಲಪಲ್ಲಟ, ಸಮಾಸಗಳು, ವಿಗ್ರಹ ವಾಕ್ಯಗಳು, ವಿಭಜನಾಕ್ರಮ, ಸಮಾಸದ ವಿಧಗಳು, ತತ್ಪುರುಷ, ಕರ್ಮಧಾರೆಯ, ಕ್ರಿಯಾ, ದ್ವಂದ್ವ, ದ್ವಿಗು, ಬಹುವ್ರೀಹಿ, ಅಂಶಿ, ಗಮಕ ಸಮಾಸದ ವಿಚಾರಗಳು, ವಾಕ್ಯ–ವಾಕ್ಯ ಪ್ರಬೇಧಗಳು. ಸಾಮಾನ್ಯವಾಕ್ಯ, ಸಂಯೋಜಿತವಾಕ್ಯ, ಮಿಶ್ರವಾಕ್ಯ ಇತ್ಯಾದಿ ಅಂಶಗಳನ್ನು ಅಧ್ಯಯನಕ್ಕಾಗಿ ಅಳವಡಿಸಲಾಗಿದೆ

**೧೦ನೇ ತರಗತಿ**

ಪತ್ರ ಲೇಖನ ರಚನಾ ವಿನ್ಯಾಸ, ವರದಿ ತಯಾರಿಕೆ, ವಾಕ್ಯ ರಚನಾ ವಿವರ, ವಾಕ್ಯ ಪರಿವರ್ತನಾ ವಿವರ, ಧಾತು, ವಿಧ್ಯರ್ಥಕ, ಸಂಭಾವನಾರ್ಥಕರೂಪ, ನಿಷೇಧಾರ್ಥಕ ರೂಪ,

ಪ್ರಬಂಧ ರಚನಾ ವಿವರ, ವಿಭಕ್ತಿ – ಕಾರಕಾರ್ಥ, ಪ್ರತ್ಯಯ, ವಿಭಕ್ತಿಪಲ್ಲಟ ವಿವರ, ಹೊಸಗನ್ನಡ ಮತ್ತು ಹಳಗನ್ನಡ ವಿಭಕ್ತಿ ಪ್ರತ್ಯಯಗಳು, ಲೇಖನ ಚಿಹ್ನೆಗಳು, ಕೃದಂತಗಳು, ಕೃದಂತನಾಮ, ವರ್ತಮಾನ ಕೃದಂತ, ಭೂತ ಕೃದಂತ, ನಿಷೇಧ ಕೃದಂತ, ಕೃದಂತಭಾವನಾಮ, ಕೃದಂತಾವ್ಯಯಗಳ ಸಂಪೂರ್ಣ ವಿವರ. ಸಮಾಸ, ತತ್ಪುರುಷ ಸಮಾಸ, ಕರ್ಮಧಾರೆಯ ಸಮಾಸ, ದ್ವಿಗು ಸಮಾಸ, ಅಂಶಿಸಮಾಸ, ಕ್ರಿಯಾಸಮಾಸ, ದ್ವಂದ್ವಸಮಾಸ, ಬಹುವ್ರೀಹಿಸಮಾಸ, ತದ್ಧಿತ, ತದ್ಧಿತಾಂತನಾಮ, ತದ್ಧಿತ ಪ್ರತ್ಯಯ, ತದ್ಧಿತಾಂತ ಭಾವನಾಮ, ತದ್ಧಿತಾಂತಾವ್ಯಯಗಳ ಸಂಪೂರ್ಣ ವಿವರ. ಅವ್ಯಯಗಳು ವಿಧಗಳು, ಸಾಮಾನ್ಯಾವ್ಯಯ, ಅನುಕರಣಾವ್ಯಯ, ಭಾವಸೂಚಕಾವ್ಯಯ, ಸಂಬಂಧಾರ್ಥಕಾವ್ಯಯ, ಅವಧಾರಣಾರ್ಥಕಾವ್ಯಯ, ರಳ, ಕುಳ, ಕ್ಷಳ, ರೇಫ ಶಕಟರೇಫಗಳ ಪರಿಚಯವನ್ನು ಪಠ್ಯಪುಸ್ತಕದಲ್ಲಿ ಅಳವಡಿಸಲಾಗಿದೆ.

"ವ್ಯಾಕರಣವು ಅಮೂರ್ತವಾಗಿ ಸಂದರ್ಭರಹಿತವಾಗಿ ಬರಕೂಡದು. ಅದಕ್ಕೆ ಪಠ್ಯದ ಸಾನ್ನಿಧ್ಯ, ಸಾಮೀಪ್ಯ ಬೇಕು. ಏಕೆಂದರೆ ಪಠ್ಯವೇ ಭಾಷಾ ಕಲಿಕೆಯ ವೇಗವರ್ಧಕ ಮತ್ತು ಒರೆಗಲ್ಲು. ಪಠ್ಯದ ಸಂದರ್ಭದಲ್ಲಿ ಉಗಮಿಸುವ ಕಲಿಕೆ ಪಠ್ಯವನ್ನು ಮೀರಿ ಬೆಳೆದಾಗಲೇ ಸಾರ್ಥಕವಾಗುವುದು. ಆದ್ದರಿಂದ ಪ್ರೌಢಶಾಲಾ ಪಠ್ಯದ ಹಿನ್ನೆಲೆಯಲ್ಲಿ ಮಕ್ಕಳ ಭಾಷಿಕ ಅಗತ್ಯಕ್ಕೆ ತಕ್ಕಷ್ಟು ವ್ಯಾಕರಣಗಳನ್ನು ಹೇಳಿಕೊಡುವುದು ಉಚಿತ. ವ್ಯಾಕರಣದ ಸಾಂಪ್ರದಾಯಿಕ ಬೋಧನಾವಿಧಾನಗಳು ಕಲಿಕೆಯಲ್ಲಿ ಹಿಂದುಳಿದ ಮಕ್ಕಳ ಪಾಲಿಗೆ ಹೊರೆಯಾದರೆ, ಬುದ್ಧಿವಂತ ಮಕ್ಕಳ ಪಾಲಿಗೆ ಹಳಸಲಾಗಿ ಪರಿಣಮಿಸಿದೆ. ಇದರಿಂದಾಗಿ ಬೋಧನೆ ಮತ್ತು ಕಲಿಕೆಯಲ್ಲಿ ನಿರಾಕರ್ಷಕತೆ, ಅನಗತ್ಯ ಪುನರುಕ್ತಿ ತಲೆಹಾಕುತ್ತದೆ"[1]. ಅಧ್ಯಯನದಲ್ಲಿ ಈ ಅಂಶಗಳು ಸ್ಪಷ್ಟವಾಗಿ ಕಂಡು ಬರುತ್ತವೆ.

### ಆ) ತರಗತಿಯ ವಾಸ್ತವ

ಪಠ್ಯಗಳಲ್ಲಿನ ವ್ಯಾಕರಣ ವಿಚಾರಗಳನ್ನು ಕೇಂದ್ರವಾಗಿರಿಸಿಕೊಂಡು ಅಧ್ಯಯನ ಸಂದರ್ಭದಲ್ಲಿ ವಿದ್ಯಾರ್ಥಿಗಳೊಂದಿಗೆ ಹಾಗೂ ಅಧ್ಯಾಪಕರೊಂದಿಗೆ ನಡೆಸಿದ ಚರ್ಚೆಯಲ್ಲಿ ಹಾಗೂ ಅವಲೋಕನ ವಿಧಾನದಲ್ಲಿ ಗಮನಿಸಿದ ಕೆಲವೊಂದು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಈ ಕೆಳಗಿನ ತೀರ್ಮಾನಕ್ಕೆ ಬರಲಾಗಿದೆ.

- ಪಠ್ಯಗಳಲ್ಲಿನ ಹಲವು ವ್ಯಾಕರಣ ವಿಚಾರಗಳು ವಿದ್ಯಾರ್ಥಿಗಳ ಮಟ್ಟವನ್ನು ಮೀರಿವೆ
- ಕೃದಂತಗಳು, ಕೃದಂತನಾಮ, ವರ್ತಮಾನ ಕೃದಂತ, ಭೂತ ಕೃದಂತ, ನಿಷೇಧ ಕೃದಂತ, ಕೃದಂತಭಾವನಾಮ, ಕೃದಂತಾವ್ಯಯಗಳ ಸಂಪೂರ್ಣ ವಿವರ. ತದ್ಧಿತ,

ತದ್ಧಿತಾಂತನಾಮ, ತದ್ಧಿತ ಪ್ರತ್ಯಯ, ತದ್ದಿತಾಂತ ಭಾವನಾಮ, ತದ್ದಿತಾಂತಾವ್ಯಯಗಳ ಸಂಪೂರ್ಣ ವಿವರ. ಅವ್ಯಯಗಳು, ವಿಧಗಳು, ಸಾಮಾನ್ಯಾವ್ಯಯ, ಅನುಕರಣಾವ್ಯಯ, ಭಾವಸೂಚಕಾವ್ಯಯ, ಸಂಬಂಧಾರ್ಥಕಾವ್ಯಯ, ಅವಧಾರಣಾರ್ಥಕಾವ್ಯಯ, ವೃದ್ಧಿ, ಯಣ್, ಶ್ಚುತ್ವ, ಜಸ್ತ್ವ, ಅನುನಾಸಿಕ ಸಂಧಿಗಳು, ಕರ್ತರಿ – ಕರ್ಮಣಿ ಪ್ರಯೋಗಗಳು ಇತ್ಯಾದಿ ಅಂಶಗಳನ್ನು ವಿದ್ಯಾರ್ಥಿಗಳು ಅರ್ಥವೇ ಆಗುವುದಿಲ್ಲ ಎನ್ನುತ್ತಾರೆ. ಈ ವಿಚಾರಗಳನ್ನು ವಿದ್ಯಾರ್ಥಿಗಳಿಗೆ ಅರ್ಥಮಾಡಿಸುವುದೂ ಕಷ್ಟ ಎಂದು ಶಿಕ್ಷಕರೂ ಹೇಳುತ್ತಾರೆ.

- ವ್ಯಾಕರಣ ಭಾಗಗಳನ್ನು ಶಿಕ್ಷಕರು ತರಗತಿಯಲ್ಲಿ ಒಂದು ಬಾರಿ ಓದಿ ವಿವರಣೆಯನ್ನು ಮಾಡುತ್ತಾರೆ. ನಂತರ ಟಿಪ್ಪಣಿಯನ್ನು ಕೊಡುತ್ತಾರೆ.
- ವ್ಯಾಕರಣ ಭಾಗಕ್ಕೆ ಯಾವುದೇ ರೀತಿಯ ಚಟುವಟಿಕೆಗಳನ್ನು ತರಗತಿಯಲ್ಲಿ ನಡೆಸಲಾಗುತ್ತಿಲ್ಲ.
- ಕ್ರಿಯಾತ್ಮಕ ವ್ಯಾಕರಣವನ್ನು ವಿದ್ಯಾರ್ಥಿಗಳ ಭಾಷಿಕ, ಸಾಹಿತ್ಯಕ ಕೌಶಲ ವೃದ್ಧಿಗಾಗಿ ಬಳಸಿಕೊಳ್ಳುವ ಕುರಿತು ಶಿಕ್ಷಕರಿಗೆ ನಿರ್ದಿಷ್ಟವಾದ ತರಬೇತಿಗಳಿಲ್ಲ
- ತಂತ್ರಜ್ಞಾನಗಳ ಹಾಗೂ ವಿದ್ಯುನ್ಮಾನ ತಂತ್ರಗಳ ಮೂಲಕ ಕಲಿಕಾ ಸನ್ನಿವೇಶಗಳನ್ನು ಆಕರ್ಷಕಗೊಳಿಸಬಹುದಾದ ಕಾರ್ಯಚಟುವಟಿಕೆಗಳಿಲ್ಲ
- ಹೆಚ್ಚಿನ ವಿದ್ಯಾರ್ಥಿಗಳು ಪರೀಕ್ಷೆಗಾಗಿ ವ್ಯಾಕರಣ ಭಾಗಗಳನ್ನು ಕಂಠಪಾಠ ಮಾಡುತ್ತಿದ್ದಾರೆ.
- ಕನ್ನಡ ಭಾಷೆಯಲ್ಲಿ ಪ್ರಸ್ತುತ ರೂಢಿಯಲ್ಲಿಲ್ಲದ ಅನೇಕ ವ್ಯಾಕರಣ ವಿಚಾರಗಳು ಪಠ್ಯದಲ್ಲಿವೆ. ಕೆಲವು ವ್ಯಾಕರಣ ನಿಯಮಗಳು ಪ್ರಾದೇಶಿಕವಾಗಿ ಬದಲಾಗುತ್ತವೆ. ಇನ್ನೂ ಕೆಲವು ವ್ಯಾಕರಣ ವಿಚಾರಗಳು ರೂಢಿಗಳಲ್ಲಿ ಬದಲಾವಣೆಯನ್ನು ಕಂಡಿವೆ. ಈ ಅಂಶಗಳನ್ನು ಪಠ್ಯಗಳಲ್ಲಿ ಗಮನಿಸಿಲ್ಲ.
- ಕನ್ನಡ ಭಾಷಾ ಕಲಿಕೆಗೆ ಅನ್ವಯವಾಗದ ಹಾಗೂ ಭಾಷಾ ಕೌಶಲಗಳಿಗೆ ಪೂರಕವಾಗದ ವ್ಯಾಕರಣ ವಿಚಾರಗಳೇ ಪಠ್ಯದಲ್ಲಿ ತಂಬಿವೆ.
- ಪ್ರಸ್ತುತ ಪಠ್ಯದಲ್ಲಿನ ವ್ಯಾಕರಣ ಕಲಿಕೆಯ ಅಂಶಗಳಿಂದ ವಿದ್ಯಾರ್ಥಿಗಳ ಭಾಷಾ ಸಾಮರ್ಥ್ಯ ಮತ್ತು ಭಾಷಾ ಕೌಶಲಗಳು ವೃದ್ಧಿಸುತ್ತಿಲ್ಲ ಎಂಬುದು ಹೆಚ್ಚಿನ ಅಧ್ಯಾಪಕರ ಅಭಿಪ್ರಾಯವಾಗಿದೆ.
- ಬೋಧನಾ ವಿಧಾನಗಳಲ್ಲಿ ಮತ್ತು ಅಳವಡಿಕೆಯ ತಂತ್ರಗಳಲ್ಲಿನ ದೋಷಗಳಿಂದಾಗಿ ವ್ಯಾಕರಣದ ಬೋಧನೆಯ ನಿರೀಕ್ಷಿತ ಉದ್ದೇಶಗಳು ಸಾಧಿತವಾಗುತ್ತಿಲ್ಲ ಎಂಬುದನ್ನು ಹಲವು ಅಧ್ಯಾಪಕರು ಅಭಿಪ್ರಾಯಪಡುತ್ತಾರೆ.

## ೪.೪ ಲೇಖನ.

ವಿಚಾರವೊಂದರ ವಿವೇಕಪೂರ್ಣ ಬೆಳವಣಿಗೆಯ ಚಾಕ್ಷುಷ ರೂಪವೇ ಲೇಖನ. ವಿದ್ಯಾರ್ಥಿಗಳು ಯಾವುದೇ ಒಂದು ವಿಚಾರದ ಕುರಿತು ಮಾಹಿತಿ ಸಂಗ್ರಹಿಸಿ, ವಿಶ್ಲೇಷಿಸಿ, ಚಿಂತಿಸಿ, ಸೃಜನಶೀಲತೆಯೊಂದಿಗೆ ಆ ವಿಚಾರಗಳನ್ನು ಬರಹದ ರೂಪಕ್ಕೆ ಇಳಿಸಬೇಕು. ಈ ಧ್ಯೇಯೋದ್ದೇಶ ಸಾಧನೆ ಭಾಷಾ ಬೋಧನೆಯ ಉದ್ದೇಶ ಸಾಧನೆಗಳಲ್ಲಿ ಬಹಳ ಮಹತ್ವದ್ದು. ಆಲಿಸುವಿಕೆಯಲ್ಲಿನ ಅವಧಾನ, ಓದುವಿಕೆಯಲ್ಲಿನ ಜ್ಞಾನ, ಮಾತನಾಡುವಿಕೆಯಲ್ಲಿನ ಕ್ರಿಯಾಶೀಲತೆಗಳು ಬರವಣಿಗೆಯ ಮೇಲೆ ಅತ್ಯಂತ ಪ್ರಭಾವ ಬೀರುತ್ತವೆ. ಆಲಿಸುವಿಕೆ, ಓದು, ಮಾತುಗಾರಿಕೆಯ ಹಂತಗಳು ಪ್ರಬುದ್ಧವಾದ ಹಾಗೆ ಬರವಣಿಗೆಯ ಪಕ್ವತೆಯು ವೃದ್ಧಿಸುತ್ತದೆ. ಮಾತುಗಾರಿಕೆಗಿಂತ, ಆಲಿಸುವಿಕೆ ಮತ್ತು ಓದು ಈ ಎರಡೂ ಕೌಶಲಗಳು ಬರವಣಿಗೆಯ ಮೇಲೆ ಗಾಢ ಪ್ರಭಾವ ಬೀರುತ್ತವೆ. ಆದುದರಿಂದ ವಿದ್ಯಾರ್ಥಿಗಳ ಓದು ಮತ್ತು ಮಾತನಾಡುವ ಕೌಶಲಗಳ ಕಲಿಕಾ ವಾತಾವರಣವನ್ನು ಆದಷ್ಟು ಸ್ವತಂತ್ರ, ಸೃಜನಶೀಲ ಹಾಗೂ ಚಟುವಟಿಕೆಗಳ ಕೇಂದ್ರವನ್ನಾಗಿಸುವ ಅಗತ್ಯವಿದೆ.

ಪ್ರೌಢಶಾಲಾ ವಿದ್ಯಾರ್ಥಿಗಳ ಭಾಷಾ ಕೌಶಲಗಳಲ್ಲಿ ಗಣನೀಯ ಪ್ರಮಾಣದ ಉನ್ನತಿ ಕಾಣಬೇಕೆಂಬ ಉದ್ದೇಶದಿಂದ ಇಲಾಖೆ ಲೇಖನ ಕಲಿಕೆಯ ವಿಭಾಗವನ್ನು ಅಳವಡಿಸಿದೆ. ಬೋಧನೆಯ ಅವಧಿ ಹಾಗೂ ವಿಷಯಗಳನ್ನು ಇಲಾಖೆಯು ನಿರ್ಧರಿಸಿದೆ. ಕನ್ನಡ, ಆಂಗ್ಲ ಹಾಗೂ ಹಿಂದಿ ಈ ಮೂರೂ ಭಾಷೆಯಲ್ಲಿ ಒಂದೇ ರೀತಿಯ ವಿಚಾರಗಳನ್ನು ಸೇರಿಸಲಾಗಿದೆ. ಪಠ್ಯಗಳಲ್ಲಿ ನಿಗದಿಪಡಿಸಿರುವ ಲೇಖನಗಳನ್ನು ಬರೆಯುವ ಮೂಲಕ ವಿದ್ಯಾರ್ಥಿ ಸ್ವರಚನೆಗಳಲ್ಲಿ ತೊಡಗಬೇಕು ಎಂಬುದು ಉದ್ದೇಶ.

ಪಠ್ಯಪುಸ್ತಕ ನಿರ್ದೇಶನಾಲಯವು ಲೇಖನ ಕೌಶಲದ ಬೋಧನೆಗೆ ನಿರ್ದಿಷ್ಟ ಸೂಚನೆಗಳನ್ನು ಹಾಗೂ ಲೇಖನದ ಬೋಧನೆಯ ಹಂತಗಳನ್ನು ಶಿಕ್ಷಕರಿಗೆ ಶಿಕ್ಷಕರ ಕೈಪಿಡಿಯ ಮೂಲಕ ತಿಳಿಸುತ್ತದೆ. "ವಿದ್ಯಾರ್ಥಿಗಳಿಗೆ ವಿಷಯವನ್ನು ತರಗತಿಯಲ್ಲಿ ಚರ್ಚೆಯ ಮೂಲಕ ಪರಿಚಯಿಸಬೇಕು. ವಿದ್ಯಾರ್ಥಿಗಳೊಂದಿಗೆ ಚರ್ಚೆಮಾಡಿ ಬಂದ ಪದಗಳನ್ನು ಯಥಾವತ್ತಾಗಿ ಕರಿಹಲಗೆಯ ಮೇಲೆ ಬರೆಯಬೇಕು. ಅನಂತರ ಅವುಗಳನ್ನು ಅನುಕ್ರಮಗೊಳಿಸಬೇಕು. ಬೇಡವಾದುದನ್ನು ಬಿಡಬೇಕು. ಈ ಕ್ರಿಯೆಗೆ ವಿದ್ಯಾರ್ಥಿಗಳನ್ನು ಪ್ರೇರೇಪಿಸಿ, ಅವರ ಆತ್ಮವಿಶ್ವಾಸಕ್ಕೆ ದಕ್ಕೆ ಬಾರದಂತೆ ತಪ್ಪುಗಳನ್ನು ಸರಿಪಡಿಸಬೇಕು"[೫].

ಪ್ರೌಢಶಾಲಾ ಹಂತದ ಪ್ರಥಮ ಭಾಷಾ ಕನ್ನಡ ಪಠ್ಯದ ಲೇಖನಗಳ ಅಂಶಗಳನ್ನು ಪರಿಶೀಲಿಸಿದರೆ ಸಾಂಪ್ರದಾಯಿಕವಾದ ಮಾದರಿಯಲ್ಲಿಯೇ ಲೇಖನಗಳನ್ನು ನೀಡಲಾಗಿದೆ. ಪ್ರತೀ ವರ್ಷವೂ ಹಾಗೂ ಪ್ರತೀ ಭಾಷೆಗಳಲ್ಲಿಯೂ ನೀಡಿರುವ ವಿಷಯಗಳು ಪುನರಾವರ್ತನೆಗೊಳ್ಳುತ್ತಿರುವ ವಿಚಾರ ತಿಳಿಯುತ್ತದೆ. ಶಿಕ್ಷಕರಿಗೆ ನೀಡುತ್ತಿರುವ ತರಬೇತಿಗಳಲ್ಲಿ ವಾಸ್ತವಕ್ಕೆ ನಿಲುಕುವಂತಹ, ತರಗತಿಯಲ್ಲಿ ಅಳವಡಿಸಬಹುದಾದಂತಹ ಪ್ರಾಯೋಗಿಕ

ವಿಚಾರಗಳು ಇರುವುದಿಲ್ಲ. ಸಿದ್ಧಾಂತಗಳ ಮಾದರಿಯಲ್ಲಿ ವಿಚಾರಗಳಿರುತ್ತವೆ ಹಾಗೂ ತರಗತಿಯಲ್ಲಿ ಅವುಗಳ ಅಳವಡಿಕೆಗೆ ಬೇಕಾದ ಯಾವುದೇ ಸೌಲಭ್ಯಗಳಿರುವುದಿಲ್ಲ ಎಂಬುದು ಹಲವು ಅಧ್ಯಾಪಕರ ಅಭಿಪ್ರಾಯವಾಗಿದೆ.

## ಅ) ಪಠ್ಯಗಳಲ್ಲಿ ಲೇಖನ ವಿಚಾರ

ಪ್ರೌಢಶಾಲಾ ಪ್ರಥಮ ಭಾಷಾ ಕನ್ನಡ ಪಠ್ಯಗಳಲ್ಲಿ ಪತ್ರ ವಿಭಾಗದಲ್ಲಿ ಮೂರು ರೀತಿಯ ಪತ್ರಗಳನ್ನು ತಿಳಿಸಿದೆ. ಖಾಸಗಿ ಪತ್ರ, ವ್ಯವಹಾರಿಕ ಪತ್ರ ಹಾಗೂ ರಜಾ ಅರ್ಜಿಗಳ ಮಾದರಿಗಳನ್ನು ತಿಳಿಸಿದೆ. ಶಾಲೆಯಿಂದ ಶೈಕ್ಷಣಿಕ ಪ್ರವಾಸ ಹೋಗಲು ಐದು ನೂರು ರೂಪಾಯಿಗಳನ್ನು ಕಳಿಸುವಂತೆ ತಂದೆಗೆ ಒಂದು ಪತ್ರ ಬರೆಯಿರಿ. 'ಸೋದರಿ ನಿವೇದಿತಾ' ಪುಸ್ತಕ ಬೇಕೆಂದು ಕೋರಿ ಮೈಸೂರಿನ ಆಶ್ರಮಕ್ಕೆ ಒಂದು ಕಾಗದ ಬರೆಯಿರಿ. ನಿಮ್ಮ ಶಾಲೆಯಲ್ಲಿ ಆಚರಿಸಿದ ಸ್ವಾತಂತ್ರ್ಯೋತ್ಸವದ ವರದಿಯನ್ನು ಪತ್ರಿಕೆಯಲ್ಲಿ ಪ್ರಕಟಿಸುವಂತೆ ಪ್ರಾರ್ಥಿಸಿ, ದಿನಪತ್ರಿಕೆಯೊಂದರ ಸಂಪಾದಕರಿಗೆ ಒಂದು ಪತ್ರ ಬರೆಯಿರಿ ಎಂಬ ಚಟುವಟಿಕೆಗಳಿವೆ.

ಪ್ರಬಂಧ ರಚನಾ ವಿಭಾಗದಲ್ಲಿ, ಹವ್ಯಾಸಗಳು, ಇಂದಿನ ಶಿಕ್ಷಣ ಪದ್ಧತಿ, ಪರಿಸರ ಸಂರಕ್ಷಣೆಯಲ್ಲಿ ವಿದ್ಯಾರ್ಥಿಗಳ ಪಾತ್ರ. ಪರಿಸರ ಮಾಲಿನ್ಯ ಮತ್ತು ನಿವಾರಣೋಪಾಯಗಳು. ರಾಷ್ಟ್ರೀಯ ಭಾವೈಕ್ಯ. ಜನಸಂಖ್ಯಾ ಸ್ಫೋಟ. ಆರೋಗ್ಯ ನಿರ್ಮಲೀಕರಣ. ಸಾಮಾಜಿಕ ಪಿಡುಗುಗಳು. ಜಾನಪದ, ಹವ್ಯಾಸಗಳು ಇತ್ಯಾದಿ ವಿಚಾರಗಳನ್ನು ನೀಡಲಾಗಿದೆ.

## ಆ) ತರಗತಿಯ ವಾಸ್ತವ

ಪ್ರೌಢಶಾಲಾ ಕನ್ನಡ ಪಠ್ಯಗಳಲ್ಲಿನ ಲೇಖನ ವಿಚಾರಗಳನ್ನು ಕೇಂದ್ರವಾಗಿರಿಸಿಕೊಂಡು ಅಧ್ಯಯನ ಸಂದರ್ಭದಲ್ಲಿ ವಿದ್ಯಾರ್ಥಿಗಳೊಂದಿಗೆ ಹಾಗೂ ಅಧ್ಯಾಪಕರೊಂದಿಗೆ ನಡೆಸಿದ ಚರ್ಚೆಯಲ್ಲಿ ಹಾಗೂ ಅವಲೋಕನ ವಿಧಾನದಲ್ಲಿ ಗಮನಿಸಿದ ಕೆಲವೊಂದು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಈ ಕೆಳಗಿನ ತೀರ್ಮಾನಕ್ಕೆ ಬರಲಾಗಿದೆ.

- ತರಗತಿಯಲ್ಲಿ ಪಠ್ಯಪುಸ್ತಕ ರಚನಾ ಸಮಿತಿ ಹಾಗೂ ಶಿಕ್ಷಣ ಇಲಾಖೆಯು ತಿಳಿಸಿದಂತೆ, ವಿಷಯದ ಚರ್ಚೆ ಮತ್ತು ನಿರೂಪಣೆ, ವಿಷಯದ ವಿಶ್ಲೇಷಣೆ ಮತ್ತು ಅನುಕ್ರಮಗೊಳಿಸುವುದು. ಅವಶ್ಯಕವಾದ ನುಡಿಗಟ್ಟುಗಳು, ಪದಗಳು ಇತ್ಯಾದಿಗಳನ್ನು ಹೊಂದಿಸುವುದು, ವಿದ್ಯಾರ್ಥಿಗಳಿಂದಲೇ ಬರೆಸುವುದು ಹಾಗೂ ತಿದ್ದುವಿಕೆಯ ಹಂತಗಳಲ್ಲಿ ಲೇಖನ ಕೌಶಲಗಳನ್ನು ಕಲಿಸುತ್ತಿಲ್ಲ.

- ಶಿಕ್ಷಕರಿಗೂ ಕೂಡ ಈ ವಿಚಾರದಲ್ಲಿ ಮಾದರಿಯೆಂಬಂತಹ ತರಬೇತಿಗಳಿಲ್ಲ. ತರಬೇತಿಯಲ್ಲಿ ಹೇಳುವ ಸೈದ್ಧಾಂತಿಕ ವಿಚಾರಗಳು ತರಗತಿಯ ವಾತಾವರಣಕ್ಕೆ ನಿಲುಕದಂತಿರುತ್ತವೆ ಎಂಬುದು ಹೆಚ್ಚಿನ ಅಧ್ಯಾಪಕರ ಅಭಿಪ್ರಾಯವಾಗಿದೆ.
- ಹೆಚ್ಚಿನ ಶಾಲೆಗಳಲ್ಲಿ ಪ್ರಬಂಧ ಹಾಗೂ ಪತ್ರ ಲೇಖನ ಭಾಗಗಳನ್ನು ಮನೆಕೆಲಸಕ್ಕಾಗಿ ನೀಡಲಾಗುತ್ತಿದೆ.
- ವಿದ್ಯಾರ್ಥಿಗಳು ಒಬ್ಬರು ಬರೆದಿರುವುದನ್ನು ನೋಡಿ ಮತ್ತೊಬ್ಬರು ಒಂದೇ ರೀತಿಯಲ್ಲಿ ಬರೆದುಕೊಳ್ಳುವ ಸನ್ನಿವೇಶಗಳೇ ಹೆಚ್ಚು.
- ಹಿಂದಿನ ವರ್ಷಗಳ ಟಿಪ್ಪಣಿ ಪುಸ್ತಕಗಳು, ಮಾರುಕಟ್ಟೆಯಲ್ಲಿ ಲಭ್ಯವಿರುವ ಪ್ರಬಂಧ ಪುಸ್ತಕಗಳನ್ನು ಆಧಾರವಾಗಿಟ್ಟುಕೊಂಡು ಪ್ರಬಂಧಗಳನ್ನು ನಕಲುಮಾಡುವ ವಿದ್ಯಾರ್ಥಿಗಳ ಸಂಖ್ಯೆಯೂ ದೊಡ್ಡದಿದೆ.
- ಲೇಖನ ಕೌಶಲಗಳನ್ನು ಕಲಿಸುವಲ್ಲಿ ಶಿಕ್ಷಣ ಇಲಾಖೆಯು ಯಾವುದೇ ಆಧುನಿಕ ವಿದ್ಯುನ್ಮಾನ ತಂತ್ರಾಂಶಗಳನ್ನು ಬಳಸಿಕೊಂಡಿಲ್ಲ.
- ತರಗತಿಯ ಹೆಚ್ಚಿನ ವಿದ್ಯಾರ್ಥಿಗಳಿಗೆ ಪ್ರಬಂಧವನ್ನು ಸ್ವತಂತ್ರವಾಗಿ ಬರೆಯುವ ಕೌಶಲ ಸಿದ್ಧಿಸಿಲ್ಲ.
- ಲೇಖನ ಕೌಶಲಗಳಿಂದ ವಿದ್ಯಾರ್ಥಿಗಳ ಭಾಷಾ ಕೌಶಲಗಳನ್ನು ಹೆಚ್ಚಿಸುವ ಧ್ಯೇಯಗಳ ವಿಚಾರದಲ್ಲಿ ಹೆಚ್ಚಿನ ಅಧ್ಯಾಪಕರು ಆಸಕ್ತಿಯನ್ನು ವಹಿಸಿ ಕ್ರಿಯಾಶೀಲ ಚಟುವಟಿಕೆಗಳನ್ನು ನಡೆಸುತ್ತಿಲ್ಲ.
- ಲೇಖನವನ್ನು ತರಗತಿಯಲ್ಲಿ ಕೌಶಲ ಗಳಿಕೆಗಾಗಿ ಬಳಸಿಕೊಳ್ಳಲಾಗುತ್ತಿಲ್ಲ.
- ಅಂಕ ಗಳಿಸುವ ಸಾಧನವಾಗಿ ಲೇಖನಗಳನ್ನು ಬರೆಯಿಸಲಾಗುತ್ತಿದೆ.
- ಇಲಾಖೆಯು ನಿರ್ದೇಶಿಸಿದಂತೆ ಲೇಖನ ಕೌಶಲಗಳಲ್ಲಿ ಸಾಧಿತವಾಗಬೇಕಿರುವ ಭಾಷಾ ಕೌಶಲಗಳು ತರಗತಿಯ ವಾಸ್ತವದಲ್ಲಿ ಸಾಧಿತವಾಗುತ್ತಿಲ್ಲ.
- ಶಿಕ್ಷಕರ ನಿರಾಸಕ್ತಿ ಹಾಗೂ ಅವರಲ್ಲಿರುವ ಸೃಜನಶೀಲತೆಯ ಕೊರತೆಯಿಂದಾಗಿ ವಿದ್ಯಾರ್ಥಿಗಳಿಗೆ ಈ ಕೌಶಲ ಕರಗತವಾಗುತ್ತಿಲ್ಲ.
- ಪಠ್ಯಪುಸ್ತಕಗಳಲ್ಲಿನ ಲೇಖನ ವಿಚಾರಗಳು ಹಾಗೂ ಬೋಧನಾಕ್ರಮಗಳು ವಿದ್ಯಾರ್ಥಿಗಳ ಭಾಷಾ ಕೌಶಲಗಳನ್ನು ಮತ್ತು ಅಧ್ಯಯನ ಸಾಮರ್ಥ್ಯಗಳನ್ನು ಹೆಚ್ಚಿಸುವಲ್ಲಿ ಪೂರಕವಾಗಿಲ್ಲ.

ಬರವಣಿಗೆ ಎಂಬುದು ಭಾಷೆಯ ಮಹತ್ವದ ಕೌಶಲ. ಉಚ್ಚರಿತ ಧ್ವನಿಯನ್ನು ನಿರ್ದಿಷ್ಟವಾದ ರೇಖಾ ವಿನ್ಯಾಸದ ಮೂಲಕ ಗೋಚರವಾಗುವಂತೆ ಮಾಡುವುದೇ ಬರವಣಿಗೆ.

ಲಿಪಿ ಸಂಕೇತದ ರೇಖಾವಿನ್ಯಾಸವನ್ನು ಕರಗತ ಮಾಡಿಕೊಂಡರೆ, ತಪ್ಪಿಲ್ಲದ ಬರವಣಿಗೆ ಸಿದ್ಧಿಸುತ್ತದೆ. ಆಲಿಸುವ, ಗ್ರಹಿಸುವ, ಓದುವ ಕೌಶಲಗಳನ್ನು ಕರಗತ ಮಾಡಿಕೊಂಡಲ್ಲಿ ಲೇಖನದ ಗುಣಮಟ್ಟವು ತಾನೇ ತಾನಾಗಿ ವೃದ್ಧಿಸುತ್ತದೆ. ಈ ನಿಟ್ಟಿನಲ್ಲಿ ಅಧ್ಯಾಪಕರು ತರಗತಿಯ ವಾತಾವರಣದಲ್ಲಿ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಬೇಕಿದೆ.

ಲೇಖನಗಳನ್ನು ಬರೆಯುವ ಮೂಲಕ ಭಾಷಾ ಕೌಶಲದ ಬರವಣಿಗೆಯ ಕೌಶಲದಲ್ಲಿ ವಿದ್ಯಾರ್ಥಿಗಳು ಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳಲು ಬಹಳಷ್ಟು ಅವಕಾಶಗಳಿವೆ. ಆದರೆ ಲೇಖನ ಅಥವಾ ಪ್ರಬಂಧವನ್ನು ಅಧ್ಯಾಪಕರು, ಪಠ್ಯಪುಸ್ತಕ ನಿರ್ದೇಶನಾಲಯವು ಸೂಚಿಸಿದ ಹಂತಗಳಂತೆ ತರಗತಿಯಲ್ಲಿ ಕಲಿಸುತ್ತಿಲ್ಲ.




ಲೇಖನ ಕೌಶಲಗಳ ಬೋಧನೆಯ ವಿಚಾರದಲ್ಲಿ ಸಾಂಪ್ರದಾಯಿಕ ಧೋರಣೆಗಳನ್ನು ಬಿಟ್ಟು ಆಧುನಿಕ ವಿಧಾನ, ತಂತ್ರಜ್ಞಾನಗಳನ್ನು ಬಳಸಿಕೊಳ್ಳಲು ವಿಫುಲ ಅವಕಾಶಗಳಿವೆ. ಶಿಕ್ಷಕರು ಪ್ರಬಂಧಗಳ ವಿಷಯವನ್ನು ಮನೆಗೆಲಸವಾಗಿ ನೀಡುತ್ತಿದ್ದಾರೆ ಅಥವಾ ಹಿಂದಿನ ವರ್ಷದ ಟಿಪ್ಪಣಿಯ ಪುಸ್ತಕದಲ್ಲಿದ್ದ ಪ್ರಬಂಧವನ್ನು ಪ್ರಸ್ತುತ ವರ್ಷಕ್ಕೂ ಬರೆಸುವ ಹಾಗೂ ಎಲ್ಲಾ ವಿದ್ಯಾರ್ಥಿಗಳು ಒಂದೇ ರೀತಿಯಲ್ಲಿ ಒಬ್ಬರನ್ನೊಬ್ಬರು ನೋಡಿ ಬರೆಯುವ ಸಂದರ್ಭಗಳ ಸನ್ನಿವೇಶ ಪ್ರಸ್ತುತ ಪ್ರೌಢಶಾಲಾ ಕನ್ನಡ ಕಲಿಕಾ ಸನ್ನಿವೇಶದಲ್ಲಿದೆ. ಲೇಖನ ವಿಭಾಗದಲ್ಲಿಯೂ ವಿದ್ಯಾರ್ಥಿಗಳಿಗೆ ಭಾಷಾ ಕೌಶಲಗಳು ಕರಗತವಾಗುತ್ತಿಲ್ಲ ಎಂಬುದು ಅಧ್ಯಯನದಲ್ಲಿ ಕಂಡುಕೊಂಡ ಫಲಿತವಾಗಿದೆ.

### ೪.೫ ಭಾಷಾಪಠ್ಯ ರಚನಾ ತತ್ವ ಮತ್ತು ಸದಾಚಾರ ಸಂಹಿತೆ

ರಾಷ್ಟ್ರೀಯ ಶಿಕ್ಷಣನೀತಿಯು ರಾಷ್ಟ್ರದ ಹಿತದೃಷ್ಟಿಯಿಂದ ಮಾತೃಭಾಷಾ ಬೋಧನೆಯ ಗುರಿ ಉದ್ದೇಶಗಳನ್ನು ನಿರ್ದೇಶಿಸಿದೆ. ಅತ್ಯಂತ ವಿಶಾಲ ಹಿನ್ನೆಲೆಯ ಈ ಮೌಲ್ಯಗಳಿಗೆ ಅನುಗುಣವಾಗಿ ಪಠ್ಯಕ್ರಮ ಮತ್ತು ಪಠ್ಯವಸ್ತುವನ್ನು ರಚಿಸಿಕೊಳ್ಳುವ ಕೆಲಸವನ್ನು ರಾಜ್ಯ ಶಿಕ್ಷಣ ಇಲಾಖೆಗಳು ಮಾಡುತ್ತವೆ. ಕರ್ನಾಟಕದ ಸಾರ್ವಜನಿಕ ಶಿಕ್ಷಣ ಇಲಾಖೆಯೂ ಇದೇ ದಿಕ್ಕಿನಲ್ಲಿ ಸಾಗಿದೆ.

೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಸೂಚಿತವಾಗಿರುವ ಮಕ್ಕಳ ಸರ್ವತೋಮುಖ ವ್ಯಕ್ತಿತ್ವಕ್ಕೆ ಅಗತ್ಯವಾದ ಕೇಂದ್ರ ತತ್ವ, ೧೦ ಮೂಲಭೂತ ಅಂಶ ಮತ್ತು ೮೪ ಮಾನವೀಯ ಮೌಲ್ಯಗಳನ್ನಾಧರಿಸಿ ಪ್ರೌಢಶಾಲಾ ಕನ್ನಡ ಪಠ್ಯವಸ್ತುವನ್ನು ತಯಾರಿಸಲಾಗಿದೆ. ಪಠ್ಯವಸ್ತುವನ್ನು ವಿದ್ಯಾರ್ಥಿ ಕೇಂದ್ರಿತವಾಗುವಂತೆ ರಚಿಸಲಾಗಿದೆ.

ಎಂಬುದನ್ನು ಪ್ರತೀಬಾರಿಯೂ ಪಠ್ಯವನ್ನು ರಚಿಸುವಾಗ ಪಠ್ಯ ಪುಸ್ತಕ ರಚನಾ ನಿರ್ದೇಶನಾಲಯವು ತಿಳಿಸುತ್ತದೆ.

ಈ ವಿಚಾರಗಳನ್ನು ಮರುಚಿಂತಿಸಬೇಕಿದೆ. ಹೊಸಯುಗದ ಮಕ್ಕಳ ಮನೋಭೂಮಿಕೆಯನ್ನು, ಹೊಸಯುಗದ ಆಕಾಂಕ್ಷೆಗಳನ್ನು, ಭಾಷಾ ಬೋಧನೆ ಹಾಗೂ ಕಲಿಕೆಯ ಉದ್ದೇಶ ಎಂಬ ಸಂಕೀರ್ಣ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ಚರ್ಚಿಸಬೇಕಾಗಿದೆ. ಸೂಕ್ಷ್ಮವಾಗಿ ಗಮನಿಸಿದರೆ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆಯ ಅನೇಕ ಸಮಸ್ಯೆಗಳಿಗೆ ಭಾಷಾ ಶಿಕ್ಷಣ ನೀತಿಯೇ ಕಾರಣವಾಗಿದೆ.

ಭಾಷಾ ಶಿಕ್ಷಣವೆಂದರೆ ಭಾಷೆಯ ಕುರಿತ ಕಲಿಕೆಯೇ? ಅಥವಾ ಭಾಷೆಯ ಮೂಲಕ ಸಾಹಿತ್ಯದ ಕಲಿಕೆಯೇ? ಎಂಬ ನಿರ್ದಿಷ್ಟ ವಿಭಾಗ ನಮ್ಮಲ್ಲಿಲ್ಲ. ಭಾಷಾ ಜ್ಞಾನಕ್ಕೆ ಕೊಡಬೇಕಾದ ಗಮನವೆಷ್ಟು? ಸಾಹಿತ್ಯ ಜ್ಞಾನದ ಬೆಳವಣಿಗೆಗೆ ನೀಡಬೇಕಾದ ಸಮಯವೇನು? ತರಗತಿಯಲ್ಲಿ ಇವುಗಳ ಕುರಿತ ಚಟುವಟಿಕೆಗಳನ್ನು ಹೇಗೆ ನಿರ್ಧರಿಸಬೇಕು ಎಂಬುದರ ಕುರಿತ ಸ್ಪಷ್ಟ ಚಿತ್ರಣ ಅಧ್ಯಾಪಕರಿಗಿಲ್ಲ. ಅಧ್ಯಾಪಕರ ತರಬೇತಿಗಳಲ್ಲೂ, ಬಿ.ಎಡ್.ಪಠ್ಯಗಳಲ್ಲೂ ಈ ಕುರಿತು ಸ್ಪಷ್ಟ ಮಾಹಿತಿ ಸಿಗುವುದಿಲ್ಲ. ಇದರಿಂದಾಗಿ ಅನೇಕ ಗೊಂದಲಗಳು ಕನ್ನಡ ಭಾಷಾ ಬೋಧನಾ ವಲಯದಲ್ಲಿವೆ.

ಕನ್ನಡ ಭಾಷಾ ಬೋಧನೆಯಲ್ಲಿ ಭಾಷೆಗೆ ಪ್ರಥಮ ಸ್ಥಾನ ಸಿಗಬೇಕು. ಭಾಷಾ ಕೌಶಲಗಳನ್ನು ನೂರಕ್ಕೆ ನೂರರಷ್ಟು ಕಲಿಸುವತ್ತ ಪ್ರಥಮ ಚಿಂತನೆಗಳಿರಬೇಕು. ಉಳಿದ ವಿಚಾರಗಳು ಹಿನ್ನೆಲೆಯಲ್ಲಿ ಬರಬೇಕು. ಈ ಕುರಿತ ಸ್ಪಷ್ಟ ಚಿತ್ರಣವನ್ನು ನೀಡದ ಕಾರಣ ಅಧ್ಯಾಪಕರು ಗೊಂದಲಕ್ಕೆ ಬೀಳುವುದಲ್ಲದೆ, ಬೋಧನೆಯ ಗುರಿಗಳೂ ಗೊಂದಲಮಯವಾಗುತ್ತವೆ. ನಿಖರ ನಿರ್ಣಯಗಳಿಲ್ಲದ ಕಾರಣ ವಿದ್ಯಾರ್ಥಿಗಳು ಕಲಿಕೆಯಲ್ಲಿ ಅನೇಕ ರೀತಿಯ ತೊಂದರೆಗಳನ್ನು ಎದುರಿಸಬೇಕಾದ ಸನ್ನಿವೇಶ ಪ್ರಸ್ತುತ ಪ್ರೌಢಶಾಲಾ ಕನ್ನಡ ಭಾಷಾ ಕಲಿಕಾ ಸಂದರ್ಭದಲ್ಲಿದೆ.

"ಔಪಚಾರಿಕ ಕಲಿಕೆಯಲ್ಲಿ ಭಾಷೆಯನ್ನು ಓದುವ ಮತ್ತು ಬರೆಯುವ ಕೌಶಲಗಳನ್ನು ರೂಢಿಸಲು ಯೋಜಿಸಲಾಗುತ್ತದೆ. ಇದರೊಡನೆ ಈಗಾಗಲೇ ಲಭ್ಯವಿರುವ ಕೌಶಲಗಳಾದ ಮಾತಾಡುವಿಕೆ ಮತ್ತು ಆಲಿಸುವಿಕೆಗಳನ್ನು ಹೆಚ್ಚು ಪರಿಷ್ಕರಿಸಿ ಅವು ಪ್ರಮಾಣಮುಖಿಯಾಗುವಂತೆ ಮಾಡುವ ಗುರಿಯು ಇರುತ್ತದೆ. ಆದರೆ ಸರಕಾರದ ಶಿಕ್ಷಣ ಇಲಾಖೆ ಭಾಷಾ ಕಲಿಕೆಗೆ ನಿಯೋಜಿಸಿರುವ ನೀತಿಯಲ್ಲಿ ಈ ಕೌಶಲ ಅಭಿವೃದ್ಧಿಯ ಅಂಶಗಳ ಜೊತೆಗೆ ಮತ್ತು ಕೆಲವು ಗುರಿಗಳು ಬಂದು ಸೇರಿಕೊಂಡಿವೆ. ಅವುಗಳಲ್ಲಿ ಮುಖ್ಯವಾಗಿ ಮಕ್ಕಳಲ್ಲಿ ನೈತಿಕ ಮೌಲ್ಯಗಳು ನೆಲೆಗೊಳ್ಳುವಂತೆ ಮಾಡುವುದು, ರಾಷ್ಟ್ರಭಕ್ತಿ ಬೆಳೆಸುವುದು, ನಾಗರಿಕರ ಹಕ್ಕುಗಳ ಮತ್ತು ಕರ್ತವ್ಯಗಳ ಪರಿಚಯ ಮಾಡುವುದು ಇಂತಹ ಸದಾಚಾರ ಸಂಹಿತೆಗಳು ಸೇರಿವೆ. ಶಿಕ್ಷಣದ ಮೂಲಗುರಿಗಳಾದ ಇವು ಭಾಷೆಯ ಕಲಿಕೆಯ ಚೌಕಟ್ಟಿನಲ್ಲಿ ಬಂದು ಸೇರಿರುವುದರಿಂದ ಉಂಟಾಗಿರುವ ಸಮಸ್ಯೆ ಪರಿಶೀಲನಾರ್ಹವಾಗಿದೆ. ಇದರಿಂದ

ಪಠ್ಯಕ್ರಮದಲ್ಲಿ ಕನ್ನಡ ಭಾಷೆಯ ಕೌಶಲಗಳ ಬೆಳವಣಿಗೆಯ ಜೊತೆಗೆ ಪಠ್ಯವಸ್ತುವಿನ ಆಶಯ ಮತ್ತು ಸಾರ ಕೂಡ ಮುಂಚೂಣಿಗೆ ಬಂದು ನಿಲ್ಲುತ್ತದೆ. ಪಠ್ಯವಸ್ತುವಿನಲ್ಲಿ ಈ ಎರಡೂ ಪರಸ್ಪರ ಸಂಬಂಧವಿಲ್ಲದ ಗುರಿಗಳು ಸೇರ್ಪಡೆಯಾಗುವುದರಿಂದ ಬೋಧನೆಯಲ್ಲಿ ಯಾವುದಕ್ಕೆ ಪ್ರಾಶಸ್ತ್ಯ ನೀಡಬೇಕು ಎಂಬುದು ಒಂದು ಆಯ್ಕೆಯಾಗಿ ಅಧ್ಯಾಪಕರನ್ನು ಕಾಡಿಸುತ್ತದೆ. ಇವರು ಹೆಚ್ಚು ಸುಲಭವಾದ ಮತ್ತು ಅಷ್ಟೇ ಅಮೂರ್ತ ಪರಿಣಾಮದ ಶಿಕ್ಷಣದ ಮೂಲ ಗುರಿಗಳನ್ನು ಪ್ರಧಾನವಾಗಿಸಿ ಕೌಶಲ ಅಭಿವೃದ್ಧಿಗಳನ್ನು ಗೌಣ ನೆಲೆಗೆ ಒಯ್ಯುವ ಸಾಧ್ಯತೆಗಳು ಹೆಚ್ಚು. ಅಷ್ಟಲ್ಲದೆ ಈ ಗೌಣ ನೆಲೆಗಳಲ್ಲಿ ಕ್ರಿಯಾತ್ಮಕ ಕೌಶಲಗಳಾದ, ಬರೆಯುವುದು ಮತ್ತು ಮಾತಾಡುವುದು ಹಿಂದೆ ಸರಿದು ಗ್ರಹಿಕೆಯ ಕೌಶಲಗಳಾದ ಓದುವುದು ಮತ್ತು ಆಲಿಸುವುದು ಮುಂಚೂಣಿಗೆ ಬರುತ್ತವೆ. ಕೌಶಲಗಳ ಬೆಳವಣಿಗೆಯಲ್ಲಿ ಎದ್ದು ಕಾಣುವ ಏರುಪೇರು ಉಂಟಾಗುತ್ತದೆ. ಓದಲು ಶಕ್ತರಾದರು ಸ್ವತಂತ್ರವಾಗಿ ಬರೆಯಲಾರರು; ಹೇಳಿದ್ದನ್ನು ಕೇಳಿ ಅರಿತರೂ ಸ್ವತಂತ್ರರಾಗಿ ತಾವೇ ಮಾತನಾಡಲಾರರು ಎಂಬ ಪರಿಸ್ಥಿತಿಯು ಉಂಟಾಗುತ್ತದೆ"[೬].

ಶಿಕ್ಷಣ ತಜ್ಞರು ಹೇಳಿದ್ದಾರೆ ಅಥವಾ ಸರಕಾರದ ಶಿಕ್ಷಣ ನೀತಿಯು ಹೇಳಿದೆ ಎಂದ ಮಾತ್ರಕ್ಕೆ ಎಲ್ಲವನ್ನೂ ಕಣ್ಣು ಮುಚ್ಚಿ ಒಪ್ಪಿಕೊಳ್ಳಬೇಕಾಗಿಲ್ಲ. ದೂರದಲ್ಲಿ ಕುಳಿತು ಯೋಜಿಸುವವರಿಗೆ ತರಗತಿಯ ವಾಸ್ತವ ಚಿತ್ರಣದ ಸ್ಪಷ್ಟ ಕಲ್ಪನೆಯಿರುವುದಿಲ್ಲ. ತರಗತಿಯ ವಾಸ್ತವದಲ್ಲಿ ಶಿಕ್ಷಕರು ಇರುತ್ತಾರೆ. ಈ ಕುರಿತು ಶಿಕ್ಷಕರು ಚಿಂತಿಸಬೇಕಾಗಿದೆ, ಚರ್ಚಿಸಬೇಕಾಗಿದೆ, ಗೊಂದಲಗಳನ್ನು ಬಗೆಹರಿಸಬೇಕಾಗಿದೆ.

ಭಾಷಾ ಪಠ್ಯ ರಚನಾ ತತ್ವಗಳಲ್ಲಿ ಭಾಷೆಗೆ ಸಂಬಂಧಿಸಿರುವ ತತ್ವಗಳು ಸೇರಬೇಕು. ಅವು ಒಂದಕ್ಕೊಂದು ಸೇರಿಕೊಂಡು ಪೂರಕವಾಗಿ ವಿದ್ಯಾರ್ಥಿಗಳ ಭಾಷಾ ಸಾಮರ್ಥ್ಯಕ್ಕೆ ಆಳವಾದ ಒತ್ತನ್ನು ಕೊಟ್ಟು ವಿದ್ಯಾರ್ಥಿಗಳಲ್ಲಿ ಭಾಷಿಕ ಹಿಡಿತ ಗಟ್ಟಿಗೊಳಿಸುವ ನೆಲೆಯಲ್ಲಿರಬೇಕು. ಈ ಭಾಷಾ ರಚನಾ ತತ್ವಗಳಲ್ಲಿ ಭಾಷಾ ತತ್ವಕ್ಕೆ ಸಂಬಂಧಿಸಿರದ ತತ್ವಗಳನ್ನು, ಮೌಲ್ಯಗಳನ್ನು, ಉದ್ದೇಶಗಳನ್ನು ತರುವುದು ಸರಿಯಲ್ಲ. ರಾಷ್ಟ್ರಭಕ್ತಿಯನ್ನು ಮೂಡಿಸುವುದು, ಪರಿಸರ ರಕ್ಷಣೆ, ನೈತಿಕ ಮೌಲ್ಯಗಳು, ಜೀವನ ಮೌಲ್ಯಗಳನ್ನು, ಕರ್ತವ್ಯ ಪ್ರಜ್ಞೆಗಳನ್ನು, ನಾಗರಿಕರ ಹಕ್ಕುಗಳನ್ನು, ಸಮಾನತೆ, ಜಾತ್ಯಾತೀತತೆ, ವೈಜ್ಞಾನಿಕ ಮನೋಭಾವ, ಸಂಪನ್ಮೂಲ ರಕ್ಷಣೆ, ಧರ್ಮ ನಿರಪೇಕ್ಷತೆ ಮೊದಲಾದ ಸದಾಚಾರ ಸಂಹಿತೆಗಳನ್ನು ಸೇರಿಸಲಾಗಿದೆ. ಇದು ಭಾಷಾ ಬೋಧನೆಯ ಉದ್ದೇಶಗಳನ್ನು ಗೊಂದಲದ ಗೂಡನ್ನಾಗಿಸಿದೆ. ಶಿಕ್ಷಕರಿಗೂ ಕೂಡ ಈ ವಿಚಾರಗಳ ಕುರಿತು ಸ್ಪಷ್ಟ ಕಲ್ಪನೆಯಿಲ್ಲ.

ಪ್ರಸ್ತುತ ಪ್ರೌಢಶಾಲಾ ಕನ್ನಡ ಪಠ್ಯಪುಸ್ತಕಗಳಲ್ಲಿ ಸಮಗ್ರ ಸಾಹಿತ್ಯ ರಾಶಿಯನ್ನು, ಸಮಗ್ರ ವ್ಯಾಕರಣವನ್ನು, ಅಲಂಕಾರ–ಛಂದಸ್ಸುಗಳ ಸಮಗ್ರ ವಿಚಾರಗಳನ್ನು ಸೇರಿಸಲಾಗಿದೆ. ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಈ ಎಲ್ಲದರ ಅವಶ್ಯಕತೆ ಎಷ್ಟು? ಸಾಹಿತ್ಯದ ಹಿನ್ನೆಲೆಯಲ್ಲಿ

ಏನನ್ನು ಬೋಧಿಸಬೇಕು? ಭಾಷಾ ಹಿನ್ನೆಲೆಯ ನೆಲೆಗಳಾವುವು? ಭಾಷಾ ವಿಜ್ಞಾನದ ಅಂಶಗಳಾವುವು? ಎಂಬುದರ ಕುರಿತು ಪಠ್ಯಪುಸ್ತಕ ರಚನಾ ಸಮಿತಿಯು ಹೇಳುವುದಿಲ್ಲ. ಸದಾಚಾರ ಸಂಹಿತೆಗಳಿಗನುಗುಣವಾಗಿ ರಾಷ್ಟ್ರಭಕ್ತಿಯನ್ನು ಮೂಡಿಸುವುದು, ಪರಿಸರ ರಕ್ಷಣೆ, ನೈತಿಕ ಮೌಲ್ಯಗಳು, ಜೀವನ ಮೌಲ್ಯಗಳನ್ನು, ಕರ್ತವ್ಯ ಪ್ರಜ್ಞೆಗಳನ್ನು, ನಾಗರಿಕರ ಹಕ್ಕುಗಳನ್ನು, ಸಮಾನತೆ, ಜಾತ್ಯಾತೀತತೆ, ವೈಜ್ಞಾನಿಕ ಮನೋಭಾವ, ಸಂಪನ್ಮೂಲ ರಕ್ಷಣೆ, ಧರ್ಮ ನಿರಪೇಕ್ಷತೆ ಮೊದಲಾದ ಸದಾಚಾರ ಸಂಹಿತೆಗಳ ವಿಚಾರಗಳೇ ಮೇಲಾಗಿ, ಭಾಷಾ ಕೌಶಲಗಳು ಗೌಣವಾಗುತ್ತಿರುವ ಸನ್ನಿವೇಶ ಪ್ರೌಢಶಾಲಾ ಶಿಕ್ಷಣದ ಕನ್ನಡ ಭಾಷಾ ಕಲಿಕಾ ಕ್ಷೇತ್ರದಲ್ಲಿದೆ.




ಸದಾಚಾರ ಸಂಹಿತೆ, ನೀತಿ ಸಂಹಿತೆಯ ಮೌಲ್ಯಗಳನ್ನು, ಪರಸ್ಪರ ಸಂಬಂಧಗಳಿರದ ಗುರಿಗಳನ್ನು, ಧ್ಯೇಯಗಳನ್ನು, ಕನ್ನಡ ಭಾಷಾ ಬೋಧನೆಯಲ್ಲಿ ಸೇರಿಸಿ ಭಾಷಾ ಕೌಶಲಗಳಿಗೆ ತೊಂದರೆಯಾಗಿಸುವುದಕ್ಕಿಂತ 'ಮೌಲ್ಯ ಶಿಕ್ಷಣ' ಎಂಬ ಪಠ್ಯವನ್ನು ತಂದು ಆ ಪಠ್ಯದ ಮೂಲಕ ಇವುಗಳನ್ನೆಲ್ಲಾ ಬೋಧಿಸಬಹುದು. ಆಗ ಭಾಷಾ ಶಿಕ್ಷಣದ ಧ್ಯೇಯಗಳಿಗೂ ಒಂದು ನಿಖರವಾದ ಚೌಕಟ್ಟು ಸಿಗುತ್ತದೆ. ಶಿಕ್ಷಕರು, ವಿದ್ಯಾರ್ಥಿಗಳು ಆ ಚೌಕಟ್ಟಿನೊಳಗೆ ಭಾಷಾ ಕೌಶಲಗಳನ್ನು ಯಶಸ್ವಿಯಾಗಿ ನಿರ್ವಹಿಸಬಹುದಾಗಿದೆ.

ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಕನ್ನಡವನ್ನು ಬೋಧಿಸುತ್ತಿರುವ ಅಧ್ಯಾಪಕರು ಈ ಕುರಿತು ಚರ್ಚಿಸಬೇಕಾಗಿದೆ. ಇಲಾಖೆಗೆ ವಾಸ್ತವ ಚಿತ್ರಣವನ್ನು ನೀಡಬೇಕಾಗಿದೆ. ಗುರಿಗಳಲ್ಲಿಯೇ ಗೊಂದಲಗಳಿರುವಾಗ ಬೋಧನೆಯು ನಿಖರತೆ ಪಡೆದುಕೊಳ್ಳಲು ಅಸಾಧ್ಯ. ಬೋಧನೆಯಲ್ಲಿ ನಿಖರತೆ ದೊರೆಯದಿದ್ದಲ್ಲಿ ವಿದ್ಯಾರ್ಥಿಗಳಿಂದ ಫಲಗಳನ್ನು ನಿರೀಕ್ಷಿಸುವುದು ತಪ್ಪಾಗುತ್ತದೆ. ಈ ನಿಟ್ಟಿನಲ್ಲಿ ಭಾಷಾ ವಿದ್ವಾಂಸರು, ಪಠ್ಯಪುಸ್ತಕ ರಚನಾ ಸಮಿತಿಯವರು, ಶಿಕ್ಷಣವೇತ್ತರು, ಶಿಕ್ಷಣ ಇಲಾಖೆ ಆದಷ್ಟು ಬೇಗ ಗಮನವನ್ನು ಹರಿಸಿ ಪ್ರೌಢಶಾಲಾ ಕನ್ನಡ ಕಲಿಕಾ ಸನ್ನಿವೇಶದಲ್ಲಿರುವ ಅನೇಕ ಸಮಸ್ಯೆಗಳನ್ನು ಕೊನೆಗಾಣಿಸಬೇಕಾಗಿದೆ.

### ೪.೬ ಭಾಷಾ ಕಲಿಕೆ ಮತ್ತು ಸಾಹಿತ್ಯ ಕಲಿಕೆಗಳ ಕುರಿತು ಶಿಕ್ಷಕರ ಅಭಿಪ್ರಾಯ

ಅಧ್ಯಯನದ ಸಂದರ್ಭದಲ್ಲಿ ಕನ್ನಡ ಭಾಷಾ ಕಲಿಕೆ ಹಾಗೂ ಕನ್ನಡ ಸಾಹಿತ್ಯದ ಕಲಿಕೆಯ ಕುರಿತು ಶಿಕ್ಷಕರೊಂದಿಗೆ ಚರ್ಚಿಸಿ ಕೆಲವು ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ.

- ❖ ಭಾಷಾ ಕಲಿಕೆ ಹಾಗೂ ಸಾಹಿತ್ಯದ ಕಲಿಕೆಗಳ ವ್ಯತ್ಯಾಸದ ಕುರಿತು ಹಾಗೂ ಪ್ರೌಢಶಾಲಾ ಕನ್ನಡ ಕಲಿಕಾ ಸಂದರ್ಭಗಳಲ್ಲಿ ಅವುಗಳನ್ನು ಸೂಕ್ತವಾಗಿ ನಿಭಾಯಿಸುವ ಕುರಿತು ಶಿಕ್ಷಕರಿಗೆ ನಿರ್ದಿಷ್ಟ ತರಬೇತಿಯನ್ನು ನೀಡಲಾಗಿಲ್ಲ. ಬಿ.ಎಡ್. ತರಬೇತಿಯಲ್ಲಾಗಲೀ ಅಥವಾ ಸೇವಾಂತರ್ಗತ ತರಬೇತಿಗಳಲ್ಲಾಗಲೀ ಈ ಕುರಿತು ಆಳವಾದ ಜ್ಞಾನ ನೀಡುವ ತರಬೇತಿಗಳಿಲ್ಲ.

- ❖ ಪ್ರೌಢಶಾಲಾ ಕನ್ನಡ ಭಾಷಾ ಪಠ್ಯ ಪುಸ್ತಕಗಳಲ್ಲಿ ಸಾಹಿತ್ಯದ ಕಲಿಕೆಯು ಶೇಕಡಾ ೩೦ ರಿಂದ ೮೦ ರಷ್ಟಿರಬೇಕು ಎಂಬ ಭಿನ್ನ ಅಭಿಪ್ರಾಯ ವ್ಯಕ್ತವಾಗಿದೆ. ಆಧುನಿಕ ಭಾಷಾ ವಿಜ್ಞಾನದ ತರಬೇತಿಯ ಹಿನ್ನೆಲೆಯಿಲ್ಲದಿರುವುದರಿಂದ ಶಿಕ್ಷಕ ವಲಯದಲ್ಲಿಯೂ ಈ ಕುರಿತು ಗೊಂದಲಗಳಿವೆ.
- ❖ ಭಾಷಾ ಪಠ್ಯದಲ್ಲಿ ಸಾಹಿತ್ಯದ ಎಲ್ಲಾ ಪ್ರಕಾರಗಳನ್ನು ಪ್ರೌಢಶಾಲಾ ಮಟ್ಟದಲ್ಲಿ ಪರಿಚಯಿಸುವ ಅಗತ್ಯವಿಲ್ಲ. ಇದು ವಿದ್ಯಾರ್ಥಿಗಳಲ್ಲಿ ಅನಗತ್ಯವಾದ ಗೊಂದಲಗಳನ್ನು ಮೂಡಿಸುತ್ತದಲ್ಲದೆ, ಭಾಷಾ ಕಲಿಕೆಗಿಂತ ಸಾಹಿತ್ಯದ ಕಲಿಕೆಯೇ ಪ್ರಧಾನವಾಗುತ್ತದೆ.
- ❖ ಸಾಹಿತ್ಯವನ್ನು ಹೊರತುಪಡಿಸಿ ಭಾಷೆಯನ್ನು ಕಲಿಸಲು ಸಾಧ್ಯವಾಗದು ಎಂಬುದು ಶೇಕಡಾ ೮೦ರಷ್ಟು ಶಿಕ್ಷಕರ ಅಭಿಪ್ರಾಯ. ಶೇಕಡಾ೨೦ರಷ್ಟು ಶಿಕ್ಷಕರು ಈ ನಿಟ್ಟಿನಲ್ಲಿ ಪ್ರಯತ್ನಪಡಬಹುದು ಎಂದು ಅಭಿಪ್ರಾಯಿಸಿದ್ದಾರೆ.
- ❖ ಭಾಷಾ ಪಠ್ಯಗಳಲ್ಲಿಯೇ ಭಾಷೆ, ಸಾಹಿತ್ಯ, ವ್ಯಾಕರಣ ಎಂಬ ಪ್ರತ್ಯೇಕ ವಿಭಾಗ ಕ್ರಮವನ್ನು ಅನುಸರಿಸುವುದು ಸೂಕ್ತವಾಗಲಾರದು ಎಂದು ಶೇಕಡಾ ೮೦ರಷ್ಟು

ಶಿಕ್ಷಕರು ಅಭಿಪ್ರಾಯಪಟ್ಟಿದ್ದಾರೆ. ಶೇಕಡಾ ೨೦ರಷ್ಟು ಶಿಕ್ಷಕರು ಈ ಪ್ರಯೋಗವನ್ನು ಮಾಡಿನೋಡಬಹುದು ಎಂದಿದ್ದಾರೆ.

❖ ಶಿಕ್ಷಕರಿಗೆ ಆಧುನಿಕ ಭಾಷಾ ವಿಜ್ಞಾನದಲ್ಲಿನ ಸಂಶೋಧನೆಗಳ ಕುರಿತು ನಿರ್ದಿಷ್ಟವಾದ ತರಬೇತಿಗಳನ್ನು ನೀಡಲಾಗುತ್ತಿಲ್ಲ. ಆಧುನಿಕ ಭಾಷಾ ವಿಜ್ಞಾನದ ಆಳವಾದ ಅರಿವು ಶಿಕ್ಷಕರಿಗೆ ಬಿ.ಎಡ್.ತರಬೇತಿಯಲ್ಲಾಗಲೀ, ಸೇವಾಂತರ್ಗತ ತರಬೇತಿಗಳ ಸಂದರ್ಭಗಳಲ್ಲಾಗಲೀ ದೊರೆಯುವುದಿಲ್ಲ. ತರಗತಿಯಲ್ಲಿ ಅಳವಡಿಸಬಹುದಾದ ಭಾಷಾ ವಿಜ್ಞಾನದ ತಂತ್ರಗಳ ಕುರಿತು ನಿರ್ದಿಷ್ಟವಾದ ತರಬೇತಿಯ ಅಗತ್ಯವಿದೆ.

❖ ಭಾಷಾ ಕಲಿಕೆಗೆ ಸಾಹಿತ್ಯ ಅನಿವಾರ್ಯವಾಗಿದೆ. ಸಾಹಿತ್ಯದ ಮೂಲಕ ಭಾಷೆಯನ್ನು ಸುಲಭವಾಗಿ ಕಲಿಸಬಹುದಾಗಿದೆ. ಸಾಹಿತ್ಯವಿಲ್ಲದೆ ಭಾಷೆಯನ್ನು ಕಲಿಸುವುದು ಕಷ್ಟದ ಕೆಲಸವೆಂದು ಹಲವು ಶಿಕ್ಷಕರು ಅಭಿಪ್ರಾಯಪಡುತ್ತಾರೆ.

❖ ಕರ್ನಾಟಕ ರಾಜ್ಯ ಒಂದೇ ಆದರೂ ಇಲ್ಲಿ ಹಲವು ಕನ್ನಡಗಳಿವೆ. ಬಹಳಷ್ಟು ವಿದ್ಯಾರ್ಥಿಗಳ ಆಡುಭಾಷೆಗೂ ಪಠ್ಯಗಳ ಭಾಷೆಗೂ ಬಹಳಷ್ಟು ಭಿನ್ನತೆಗಳಿವೆ. ಪಠ್ಯದಲ್ಲಿರುವ ಗ್ರಂಥಸ್ಥ ಗದ್ಯವನ್ನು ವಿದ್ಯಾರ್ಥಿಗಳು ಮನೆಯ ಸಂದರ್ಭ ಹಾಗೂ ಸಮಾಜದ ಸಂದರ್ಭಗಳಲ್ಲಿ ಬಳಸುವುದಿಲ್ಲ.

❖ ಶಾಲಾ ಪರಿಸರದಲ್ಲಿ ಮಾತ್ರ ಗ್ರಂಥಸ್ಥ ಕನ್ನಡವಿದೆ. ಪ್ರಾದೇಶಿಕ ಬಿನ್ನತೆ ಹಾಗೂ ವೈವಿಧ್ಯಮಯ ಸಂಸ್ಕೃತಿಯ ಹಿನ್ನೆಲೆಯಿರುವ ಈ ನಾಡಿನಲ್ಲಿ ಏಕರೂಪೀ ಪಠ್ಯವನ್ನು ಪ್ರೌಢಶಾಲಾ ಮಟ್ಟದಲ್ಲಿ ತರುವುದು ಸೂಕ್ತವಲ್ಲ. ವಿದ್ಯಾರ್ಥಿಗಳ ಬಹುಭಾಷಿಕ ಸಂಸ್ಕೃತಿಯನ್ನು ಪ್ರಾದೇಶಿಕವಾಗಿ ಪಠ್ಯಗಳಲ್ಲಿ ಗುರುತಿಸುವಂತಾಗಬೇಕು. ಗ್ರಂಥಸ್ಥ ಕನ್ನಡ ಕೇಂದ್ರಿತವಾದ ಭಾಷಾ ಪಠ್ಯ ವಿಕೇಂದ್ರೀಕರಣಗೊಳ್ಳಬೇಕು ಹಾಗೂ ಭಿನ್ನ ನೆಲೆಗಳಲ್ಲಿ ರೂಪುಗೊಳ್ಳಬೇಕು. ಪ್ರಾದೇಶಿಕ ಸಂಸ್ಕೃತಿಯ ಹಿನ್ನೆಲೆಯನ್ನೂ, ಕನ್ನಡದ ವಿವಿಧ ಜಾಯಮಾನಗಳನ್ನೂ ಒಳಗೊಂಡ ಬಹುರೂಪೀ ಪಠ್ಯಗಳು ಜಾರಿಗೆ ಬರಬೇಕು.

ಅಧ್ಯಯನದ ಸಂದರ್ಭದಲ್ಲಿ ಕನ್ನಡ ಭಾಷಾ ಪಠ್ಯದ ಸಾಹಿತ್ಯದ ಸ್ವರೂಪಕ್ಕೆ ಸಂಬಂಧಿಸಿದಂತೆ ಅಧ್ಯಾಪಕರೊಂದಿಗೆ ನಡೆಸಿದ ಚರ್ಚೆ ಹಾಗೂ ಅವಲೋಕನ ವಿಧಾನದಲ್ಲಿ ಸಂಗ್ರಹಿಸಿದ ಮಾಹಿತಿಗಳ ಆಧಾರದ ಮೇಲೆ ಈ ಕೆಳಗಿನ ತೀರ್ಮಾನಗಳಿಗೆ ಬರಲಾಗಿದೆ.

❖ ಪ್ರೌಢಶಾಲಾ ಹಂತದ ಕನ್ನಡ ಭಾಷಾ ಶಿಕ್ಷಣದ ಪಠ್ಯಪುಸ್ತಕಗಳು ಗ್ರಂಥಸ್ಥ ಕನ್ನಡದ ಸಾಹಿತ್ಯವನ್ನು ಕೇಂದ್ರೀಕರಿಸಿಕೊಂಡಿವೆ. ಕನ್ನಡ ಭಾಷಾ ಕಲಿಕೆಯೆಂದರೆ ಗ್ರಂಥಸ್ಥ ಕನ್ನಡದ ಸಾಹಿತ್ಯದ ಸ್ವರೂಪಗಳ ಕಲಿಕೆ ಎಂಬ ಧೋರಣೆ ಇದೆ.

* ಪ್ರಾದೇಶಿಕ ಸಂಸ್ಕೃತಿಯ ಆಡುನುಡಿ ಮತ್ತು ವ್ಯಾಕರಣದ ಕುರಿತು ಪಠ್ಯಗಳಲ್ಲಿ ಯಾವ ಉಲ್ಲೇಖಗಳೂ ಸಿಗುವುದಿಲ್ಲ. ಹೆಚ್ಚಿನ ವಿದ್ಯಾರ್ಥಿಗಳಿಗೆ ತಾವು ಮಾತನಾಡುವ ಭಾಷೆಯನ್ನು ಕಲಿಯುತ್ತಿದ್ದೇವೆ ಎಂಬ ಭಾವನೆಗಿಂತ ತಾವು ಮಾತನಾಡದೇ ಇರುವ ಇನ್ನೊಂದು ಕನ್ನಡವನ್ನು ಕಲಿಯುತ್ತಿದ್ದೇವೆ ಎಂಬ ಭಾವನೆಯಿದೆ.
* ಪಠ್ಯಗಳಲ್ಲಿರುವ ಹಳಗನ್ನಡ ಪಾಠ ಪದ್ಯಗಳ ಸಂದರ್ಭದಲ್ಲಿ ವಿದ್ಯಾರ್ಥಿಗಳು ಬೇರೊಂದು ಭಾಷೆಯನ್ನು ಕಲಿಯುತ್ತಿದ್ದೇವೆ ಎಂಬ ಭಾವನೆಯಲ್ಲಿರುತ್ತಾರೆ. ಮನೆಯ ಕನ್ನಡವೇ ಬೇರೆ. ಪಠ್ಯದಲ್ಲಿನ ಗ್ರಂಥಸ್ಥ ಕನ್ನಡವೇ ಬೇರೆ. ಅದರಲ್ಲಿ ಹಳಗನ್ನಡವು ಮತ್ತೊಂದು ಬಗೆಯದ್ದಾಗಿದೆ. ಹೀಗೆ ವಿದ್ಯಾರ್ಥಿಗಳು ಕನ್ನಡದಲ್ಲಿಯೇ ಮೂರು ಕನ್ನಡವನ್ನು ಜೊತೆಗೆ ಇಂಗ್ಲೀಷ್ ಹಾಗೂ ಹಿಂದಿ ಹೀಗೆ ಒಟ್ಟಾರೆಯಾಗಿ ತ್ರಿಭಾಷಾ ಸೂತ್ರವಿದ್ದರೂ ಐದು ಆರು ಭಾಷೆಗಳನ್ನು ಕಲಿಯುವ ಸಂದರ್ಭಗಳ ಹೊರೆಯನ್ನು ಪ್ರೌಢಶಾಲಾ ವಿದ್ಯಾರ್ಥಿಗಳು ಹೊತ್ತುಕೊಳ್ಳಬೇಕಾದ ಸನ್ನಿವೇಶದಲ್ಲಿದ್ದಾರೆ.
* ಭಾಷಾ ಕಲಿಕೆಯ ಹೆಸರಿನಲ್ಲಿ ಸಾಹಿತ್ಯದ ಬೋಧನೆಗೆ ಸಂಬಂಧಿಸಿದ ಅಂಶಗಳೇ ಹೆಚ್ಚಿವೆ. ಪಠ್ಯದಲ್ಲಿ ಭಾಷಾಂಶ ಎಷ್ಟಿರಬೇಕೆಂಬ ವಿಚಾರದ ಕುರಿತು ಸ್ಪಷ್ಟ ನಿರ್ದೇಶನಗಳಿಲ್ಲ. ಆದುದರಿಂದ ಸಾಹಿತ್ಯದ ಕಲಿಕೆಯೇ ಪ್ರಧಾನವಾಗುವ ಸಂದರ್ಭಗಳೇ ಹೆಚ್ಚು. ಜೊತೆಗೆ ಪ್ರತೀ ಪಾಠದಲ್ಲಿ ಹಾಗೂ ಪದ್ಯದಲ್ಲಿ ಸಾಂಸ್ಕೃತಿಕ ಹಾಗೂ ನೈತಿಕ ಅಂಶಗಳನ್ನು ಸೇರಿಸಿರುವುದರಿಂದ ಅವುಗಳೇ ಪ್ರಧಾನವಾಗುವ ಸಾಧ್ಯತೆಗಳು ಹೆಚ್ಚಿವೆ.
* ಪ್ರೌಢಶಾಲಾ ಕನ್ನಡ ಭಾಷಾ ಪಠ್ಯಪುಸ್ತಕಗಳಲ್ಲಿ ಸಾಹಿತ್ಯದ ಕಲಿಕೆ ಹಾಗೂ ಭಾಷೆಯ ಕಲಿಕೆಗಳ ವ್ಯತ್ಯಾಸದ ಕುರಿತು ಆಧುನಿಕ ಭಾಷಾ ವಿಜ್ಞಾನದ ಹಿನ್ನೆಲೆಯ ತರಬೇತಿಗಳು ಭಾಷಾ ಬೋಧನಾ ಶಿಕ್ಷಕರಿಗೆ ಅತೀ ಅಗತ್ಯವಾಗಿ ಬೇಕಾಗಿವೆ. ಇಂತಹ ತರಬೇತಿಗಳಿಲ್ಲದಿರುವುದರಿಂದ ಶಿಕ್ಷಕರು ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿನ ಬೋಧನೆಗೆ ಬದಲಿಗೆ ಸಾಹಿತ್ಯದ ಬೋಧನೆಗೆ ಹೆಚ್ಚಿನ ಪ್ರಾಧಾನ್ಯವನ್ನು ಕೊಡುತ್ತಾರೆ.
* ಕನ್ನಡ ಸಾಹಿತ್ಯದ ಗದ್ಯ, ಕಾವ್ಯ, ಲೇಖನ ವಿಭಾಗಕ್ಕೆ ಸಂಬಂಧಿಸಿದಂತೆ ಅನೇಕ ಕವಿಕೃತಿಗಳನ್ನು ಪಠ್ಯಗಳಲ್ಲಿ ನೀಡಿದ್ದರೂ ಅವು ಅತ್ಯಂತ ಸಾಂಪ್ರದಾಯಿಕ ಪದ್ಧತಿಯಲ್ಲಿರುವುದರಿಂದ ಕವಿಗಳ ಹಾಗೂ ಲೇಖಕರ ವಿಚಾರಗಳನ್ನು ವಿದ್ಯಾರ್ಥಿಗಳು ಕಂಠಪಾಠಮಾಡಿಕೊಂಡು ಯಾಂತ್ರಿಕವಾಗಿ ಕಲಿಯುತ್ತಿದ್ದಾರೆ. ಅಂತಿಮ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದು ಮುಖ್ಯವಾಗುತ್ತಿದೆಯೇ ಹೊರತು ಸಾಹಿತ್ಯ ಸ್ವರೂಪಗಳ ಕಲಿಕೆ ಮತ್ತು ಗ್ರಹಿಕೆ ಮುಖ್ಯವಾಗುತ್ತಿಲ್ಲ.
* ಕಥೆ, ಹಾಸ್ಯ ಲೇಖನ, ವಿಡಂಬನೆ, ಪ್ರಬಂಧ, ಜೀವನಚರಿತ್ರೆ, ಆತ್ಮಕಥೆ, ಲಲಿತ ಪ್ರಬಂಧ, ನಾಟಕ, ಪ್ರವಾಸ ಕಥನ, ವ್ಯಕ್ತಿಚಿತ್ರ, ಹಳಗನ್ನಡ ಗದ್ಯ, ವೈಜ್ಞಾನಿಕ ಲೇಖನ, ಪತ್ರ ಲೇಖನ ಮೊದಲಾದ ಗದ್ಯ ಸ್ವರೂಪಗಳು ಸಾಂಪ್ರದಾಯಿಕ ಬೋಧನಾ

ಪದ್ಧತಿಯ ಕಾರಣದಿಂದಾಗಿ ವಿದ್ಯಾರ್ಥಿಗಳ ಕಲಿಕೆಯಲ್ಲಿ ನಿರೀಕ್ಷಿತ ಸಾಧನೆ ಕಾಣಿಸುತ್ತಿಲ್ಲ.

❖ ನವೋದಯ, ನವ್ಯ, ಬಂಡಾಯದ ಕವಿತೆಗಳು, ಜನಪದ ಗೀತೆಗಳು, ಕೀರ್ತನೆಗಳು, ಉಗಾಭೋಗ, ಸುಳಾದಿ, ಕಂದ, ರಗಳೆ, ಷಟ್ಪದಿ, ಖ್ಯಾತ ಕರ್ನಾಟಕಗಳು ಹಾಗೂ ಹೊಸಗನ್ನಡ, ನಡುಗನ್ನಡ, ಹಳಗನ್ನಡ ವಿಭಾಗದ ಕವಿತೆ ಹಾಗೂ ಕಾವ್ಯಗಳ ಭಾಗಗಳೂ ಕೂಡ ಸಾಂಪ್ರದಾಯಿಕ ಬೋಧನೆಯ ಸನ್ನಿವೇಶದಲ್ಲಯೇ ಸಾಗುತ್ತಿರುವುದರಿಂದ ಕಾವ್ಯಭಾಗದ ಬೋಧನೆಯಿಂದಾಗಬಹುದಾದ ಸೃಷ್ಟಿಶೀಲತೆ ವಿದ್ಯಾರ್ಥಿಗಳಲ್ಲಿ ಕಂಡುಬರುತ್ತಿಲ್ಲ. ಇದೂ ಕೂಡ ಪರೀಕ್ಷಾ ಕೇಂದ್ರಿತ ಹಾಗೂ ಅಂಕ ಕೇಂದ್ರಿತವಾಗಿದೆ.

❖ ಪಠ್ಯಗಳಲ್ಲಿ ನೀಡಿರುವ ಲೇಖನಾಂಶಗಳ ಚಟುವಟಿಕೆಗಳೂ ಕೂಡ ವಿದ್ಯಾರ್ಥಿಗಳಲ್ಲಿ ಸೃಜನಶೀಲ ಕೌಶಲಗಳನ್ನು ಬೆಳೆಸುತ್ತಿಲ್ಲ. ಹೆಚ್ಚಿನ ವಿದ್ಯಾರ್ಥಿಗಳಿಗೆ ಪ್ರಬಂಧವನ್ನು ಸ್ವತಂತ್ರವಾಗಿ ಬರೆಯುವ ಕೌಶಲ ಸಿದ್ಧಿಸಿಲ್ಲ.

❖ ಸಾಹಿತ್ಯವನ್ನು ಹೊರತುಪಡಿಸಿ ಭಾಷೆಯನ್ನು ಕಲಿಸುವ ಹೊಸ ಚಿಂತನೆಯ ಕುರಿತು ಇಲಾಖೆ ಗಮನಹರಿಸಬೇಕಿದೆ.

❖ ಪ್ರೌಢಶಾಲಾ ಕನ್ನಡ ಭಾಷಾ ಬೋಧನಾ ಸನ್ನಿವೇಶಗಳು ಅತ್ಯಂತ ಸಾಂಪ್ರದಾಯಿಕವಾದ ಹಿನ್ನೆಲೆಯಲ್ಲಿಯೇ ಸಾಗುತ್ತಿವೆ. ಆಧುನಿಕ ಭಾಷಾ ವಿಜ್ಞಾನದ ಶೋಧನೆಗಳನ್ನು ಸಂಪೂರ್ಣವಾಗಿ ಅಳವಡಿಸಿಕೊಳ್ಳದ ಕಾರಣ ವಿದ್ಯಾರ್ಥಿಗಳಿಗೆ ಎಂಟು ಹತ್ತು ವರ್ಷಗಳ ಬೋಧನೆಯಾದರೂ ಕೂಡ ಕನ್ನಡದ ಕನಿಷ್ಠ ಸಂವಹನ ಕುಶಲತೆಯನ್ನೂ ಕೂಡಾ ಕಲಿಯಲು ಸಾಧ್ಯವಾಗದ ಪರಿಸ್ಥಿತಿ ನಿರ್ಮಾಣವಾಗಿದೆ.

❖ ಲಿಪಿ ಗ್ರಹಿಕೆಯ ಸಮಸ್ಯೆಯಿಂದಾಗಿ ಕನ್ನಡ ಸಾಹಿತ್ಯ ಚರಿತ್ರೆಯ ಭಾಗಗಳು ವಿದ್ಯಾರ್ಥಿಗಳ ಗ್ರಹಿಕೆಯಿಂದ ದೂರವಾಗಿವೆ ಮತ್ತು ಪಠ್ಯಗಳ ಆಶಯಗಳು ಸಾಧಿತವಾಗುತ್ತಿಲ್ಲ.

**ಅಡಿಟಿಪ್ಪಣಿ**

೧) ಎನ್.ರಾಮಚಂದ್ರ. ಅಧ್ಯಕ್ಷರು, ಪಠ್ಯಪುಸ್ತಕ ರಚನಾ ಸಮಿತಿ, **'ಪ್ರಾಯೋಗಿಕ ಮಾರ್ಗದರ್ಶಿ'**, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ.

೨) **'ಶಿಕ್ಷಕರ ಕೈಪಿಡಿ'**. ಹತ್ತನೆಯ ತರಗತಿ, ಪ್ರಥಮ ಭಾಷೆ ಕನ್ನಡ. ಪಠ್ಯಪುಸ್ತಕ ನಿರ್ದೇಶನಾಲಯ ಬೆಂಗಳೂರು.

೩) **'ಶಿಕ್ಷಕರ ಕೈಪಿಡಿ'**. ಹತ್ತನೆಯ ತರಗತಿ, ಪ್ರಥಮ ಭಾಷೆ ಕನ್ನಡ ಪುಟ ೧೫, ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು

೪) ಡಾ ಮಹಾಬಲೇಶ್ವರ ರಾವ್, ೧೯೯೬. **'ಪ್ರೌಢಶಾಲೆಗಳಲ್ಲಿ ಕನ್ನಡ ಬೋಧನೆ'**. ಪುಟ ೬೩. ನವ ಕರ್ನಾಟಕ ಪ್ರಕಾಶನ ಬೆಂಗಳೂರು

೫) **'ಶಿಕ್ಷಕರ ಕೈಪಿಡಿ'**. ಹತ್ತನೆಯ ತರಗತಿ, ಪ್ರಥಮ ಭಾಷೆ ಕನ್ನಡ. ಪುಟ ೧೩, ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು

೬) ಕೆ.ವಿ.ನಾರಾಯಣ. **'ಕನ್ನಡ ಜಗತ್ತು ಅರ್ಧಶತಮಾನ'**. ಪುಟ ೫೦-೫೧ ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಅಧ್ಯಾಯ – ೫

## ಕನ್ನಡ ಮಾಧ್ಯಮ ಕಲಿಕೆ ಮತ್ತು ಭಾಷಾ ಕಲಿಕೆಗಳ ಅಂತರ್ ಸಂಬಂಧ

೫

## ಕನ್ನಡ ಮಾಧ್ಯಮ ಕಲಿಕೆ ಮತ್ತು ಭಾಷಾ ಕಲಿಕೆಗಳ ಅಂತರ್ ಸಂಬಂಧ

ಕರ್ನಾಟಕದಲ್ಲಿನ ಪ್ರಾಥಮಿಕ ಮತ್ತು ಪ್ರೌಢಶಾಲಾ ಹಂತದ ಶಿಕ್ಷಣದಲ್ಲಿ ಕನ್ನಡ, ಇಂಗ್ಲಿಷ್, ಉರ್ದು, ತಮಿಳು, ತೆಲುಗು, ಮರಾಠಿ ಹಾಗೂ ಹಿಂದಿ ಮಾಧ್ಯಮಗಳಿವೆ. ವಿದ್ಯಾರ್ಥಿಗಳು ಯಾವುದೇ ಮಾಧ್ಯಮದಲ್ಲಿ ವ್ಯಾಸಂಗ ಮಾಡುತ್ತಿದ್ದರೂ ಕನ್ನಡವನ್ನು ಒಂದು ಭಾಷೆಯಾಗಿ ಕಲಿಯಲೇಬೇಕೆನ್ನುವ ನಿಯಮವಿದೆ.

ಆಡಳಿತಾತ್ಮಕ ದೃಷ್ಟಿಯಲ್ಲಿ ಕನ್ನಡವನ್ನು ಮಾತೃಭಾಷೆಯೆಂದು ಒಪ್ಪಿಕೊಂಡಿರುವ ಕರ್ನಾಟಕದಲ್ಲಿ ಒಟ್ಟು ೧೬೦೧೮ ಪ್ರೌಢಶಾಲೆಗಳಿವೆ. ಇವುಗಳಲ್ಲಿ ೧೦೩೭೭ ಪ್ರೌಢಶಾಲೆಗಳು ಕನ್ನಡ ಮಾಧ್ಯಮದ ಪ್ರೌಢಶಾಲೆಗಳಾಗಿವೆ [೧].

| ಕಲಿಕಾ ಮಾಧ್ಯಮ | ಪ್ರೌಢಶಾಲೆಗಳ ಸಂಖ್ಯೆ | ೨೦೧೨-೧೩ರಲ್ಲಿ ನೋಂದಾಯಿತ ವಿದ್ಯಾರ್ಥಿಗಳು |
|---|---|---|
| ಕನ್ನಡ | ೧೦೩೭೭ | ೧೮೩೩೨೪೫ |
| ಇಂಗ್ಲಿಷ್ | ೪೭೪೭ | ೬೬೯೮೧೫ |
| ಉರ್ದು | ೫೪೦ | ೮೧೦೮೬ |
| ತಮಿಳು | ೧೦ | ೫೩೭ |
| ತೆಲುಗು | ೧೫ | ೯೪೫ |
| ಮರಾಠಿ | ೨೭೭ | ೪೫೮೯೨ |
| ಇತರೆ | ೫೨ | ೩೨೦೧ |
| **ಒಟ್ಟು** | **೧೬೦೧೮** | **೨೬೩೪೭೨೧** |

ಕರ್ನಾಟಕದ ೧೦೩೭೭ ಪ್ರೌಢಶಾಲೆಗಳಲ್ಲಿನ ೧೮೩೩೨೪೫ ವಿದ್ಯಾರ್ಥಿಗಳು ಕನ್ನಡ ಮಾಧ್ಯಮದಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಈ ೧೦೩೭೭ ಕನ್ನಡ ಮಾಧ್ಯಮ ಪ್ರೌಢಶಾಲೆಗಳಲ್ಲಿ ಹಿಂದಿ ಹಾಗೂ ಆಂಗ್ಲ ಭಾಷಾ ತರಗತಿಗಳ ಹೊರತಾಗಿ ಗಣಿತ, ವಿಜ್ಞಾನ, ಸಮಾಜ ವಿಜ್ಞಾನಗಳ ಕಲಿಕಾ ವಾತಾವರಣ ಸಂಪೂರ್ಣ ಕನ್ನಡಮಯ. ಇಲ್ಲಿ ಜ್ಞಾನಶಾಖೆಗಳ ಸಮಗ್ರ ಪರಿಚಯವಾಗುವುದು ಕನ್ನಡ ಭಾಷೆಯ ಮೂಲಕ ಎಂಬುದು ಗಮನಿಸಬೇಕಾದ ಅಂಶ. ೧೮೩೩೨೪೫ ವಿದ್ಯಾರ್ಥಿಗಳು ಕನ್ನಡದಲ್ಲಿ ಗಳಿಸುವ ಪ್ರಭುತ್ವದ ಮಟ್ಟವು ಅವರ ಇತರ ಜ್ಞಾನಶಾಖೆಗಳ ಮಟ್ಟವನ್ನು ನಿಯಂತ್ರಿಸುತ್ತದೆ ಎಂಬುದು ಮಹತ್ವದ ಅಂಶ.




ಕನ್ನಡ ಮಾಧ್ಯಮದ ತರಗತಿಗಳಲ್ಲಿ ವಿದ್ಯಾರ್ಥಿಗಳು ಸಂಪೂರ್ಣವಾಗಿ ಕನ್ನಡವನ್ನೇ ಬಳಸುತ್ತಾರೆ. ಗಣಕಯಂತ್ರದ ತರಗತಿಯಲ್ಲಿಯೂ ಪಾರಿಭಾಷಿಕ ಶಬ್ದಗಳಿಗಾಗಿ ಆಂಗ್ಲ ಭಾಷೆಯು ಬಳಕೆಯಾಗುತ್ತಿದೆಯೇ ಹೊರತು ಉಳಿದಂತೆ ಕನ್ನಡ ಬಳಕೆಯಾಗುತ್ತಿದೆ. ಹೆಚ್ಚಿನ ಶಾಲೆಗಳಲ್ಲಿ ಹಿಂದಿ ಹಾಗೂ ಆಂಗ್ಲ ತರಗತಿಗಳಲ್ಲೂ ಕೂಡ ವಿದ್ಯಾರ್ಥಿಗಳಿಗೆ ಅರ್ಥವಾಗಲೆಂದು ಕನ್ನಡದಲ್ಲಿಯೂ ವಿವರಣೆ ಮಾಡಲಾಗುತ್ತಿದೆ ಎಂಬುದು ಗಮನಾರ್ಹ ಅಂಶ.

ಅಧ್ಯಯನದ ಪ್ರಯೋಗದಲ್ಲಿ ಪಾಲ್ಗೊಂಡ ಹೆಚ್ಚಿನ ಮಕ್ಕಳಿಗೆ ಮನೆಯ ಮಾತು ಕನ್ನಡ. ಪರಿಸರದ ಭಾಷೆ ಕನ್ನಡ, ತರಗತಿಯೂ ಕನ್ನಡ ಮಾಧ್ಯಮ, ತರಗತಿಯಲ್ಲಿ ಕಲಿಯುತ್ತಿರುವ ಪ್ರಥಮ ಭಾಷೆಯೂ ಕನ್ನಡ. ಗಣಿತ, ವಿಜ್ಞಾನ, ಸಮಾಜ ವಿಜ್ಞಾನಗಳ ಬೋಧನೆ, ಕಲಿಕೆ, ಗ್ರಹಿಕೆ, ಅಭಿವ್ಯಕ್ತಿ, ಪರೀಕ್ಷೆ, ಮೌಲ್ಯಮಾಪನ ಎಲ್ಲವೂ ಕನ್ನಡದಲ್ಲಿಯೇ ನಡೆಯುತ್ತಿದೆ. ಕ್ಷೇತ್ರಕಾರ್ಯದಲ್ಲಿ ಪಾಲ್ಗೊಂಡ ವಿದ್ಯಾರ್ಥಿಗಳೆಲ್ಲರೂ ಪ್ರಾಥಮಿಕ ತರಗತಿಯನ್ನು ಕನ್ನಡ ಮಾಧ್ಯಮದಲ್ಲಿಯೇ ಕಲಿತವರಾಗಿದ್ದಾರೆ. ಹೆಚ್ಚಿನ ವಿದ್ಯಾರ್ಥಿಗಳ ಭಾಷಾ ಸಂರಚನೆಯ ಮೂರ್ತ ಅಮೂರ್ತ ಕಲ್ಪನೆಗಳು ಕನ್ನಡ ಭಾಷೆಯೊಂದಿಗೆ ಬೆಸೆದುಕೊಂಡಿದೆ. ಕನ್ನಡ ಭಾಷಾ ಕಲಿಕೆಯಲ್ಲಿ ವಿದ್ಯಾರ್ಥಿಗಳು ಸಾಧಿಸುವ ಪ್ರಭುತ್ವವು ಗಣಿತ, ವಿಜ್ಞಾನ, ಸಮಾಜ ವಿಜ್ಞಾನಗಳ ಕಲಿಕೆಯ ಮೇಲೆಯೂ ಗಾಢ ಪ್ರಭಾವ ಬೀರುತ್ತಿರುವ ಅಂಶ ಅಧ್ಯಯನದ ಸಂದರ್ಭದಲ್ಲಿ ಕಂಡುಬಂದಿದೆ. ಈ ನಿಟ್ಟಿನಲ್ಲಿ ಕನ್ನಡ ಭಾಷಾ ಕಲಿಕೆಯು ಕನ್ನಡ ಮಾಧ್ಯಮದ ಕಲಿಕೆಯೊಂದಿಗೆ ಅತ್ಯಂತ ಅವಿನಾಭಾವ ಸಂಬಂಧವನ್ನು ಹೊಂದಿರುವ ಅಂಶವು ಅಧ್ಯಯನದ ವಿಚಾರವಾಗಿ ಬಹುಮುಖ್ಯವಾಗುತ್ತದೆ.

ಕನ್ನಡ ಕಲಿಕೆಯಲ್ಲಿ ಹಿಂದುಳಿದಿರುವ ವಿದ್ಯಾರ್ಥಿಗಳು ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನ ವಿಷಯಗಳಲ್ಲಿ ಯಾವ ಮಟ್ಟದಲ್ಲಿದ್ದಾರೆಂದು ತಿಳಿಯುವ ಪ್ರಯತ್ನವನ್ನು ಮಾಡಲಾಗಿದೆ. ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡ ಶಾಲೆಗಳಲ್ಲಿ ಕನ್ನಡ ಕಲಿಕೆಯಲ್ಲಿ ಹಿಂದುಳಿದ ವಿದ್ಯಾರ್ಥಿಗಳನ್ನು ಮೊದಲು ಗುರುತಿಸಿಕೊಳ್ಳಲಾಯಿತು. ಸದರಿ ವಿದ್ಯಾರ್ಥಿಗಳು ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನಗಳ ಪರೀಕ್ಷೆಗಳಲ್ಲಿ ಪಡೆದ ಅಂಕಗಳನ್ನು ಆಯಾ ತರಗತಿಯ ಶಿಕ್ಷಕರಿಂದ ಪಡೆದುಕೊಳ್ಳಲಾಯಿತು. ಬಳಿಕ ತುಲನಾತ್ಮಕ ರೀತಿಯಲ್ಲಿ ವಿಶ್ಲೇಷಣೆ ಮಾಡಲಾಯಿತು. ಕೆಲವು ಖಚಿತ ನಿರ್ಣಯಕ್ಕೆ ಬರಲಾಯಿತು.

## ೫.೧ ಕನ್ನಡ ಮತ್ತು ಇತರ ವಿಷಯಗಳ ಸಹಸಂಬಂಧ

ಕರ್ನಾಟಕದ ಕನ್ನಡ ಮಾಧ್ಯಮದ ಪ್ರೌಢಶಾಲೆಯ ಹೆಚ್ಚಿನ ವಿದ್ಯಾರ್ಥಿಗಳು ಮಾತನಾಡುವ ಭಾಷೆಯನ್ನೇ ಕಲಿಕಾ ಮಾಧ್ಯಮದ ಭಾಷೆಯನ್ನಾಗಿಸಿಕೊಂಡ ಸನ್ನಿವೇಶದಲ್ಲಿದ್ದಾರೆ. ಮಾತನಾಡುವ ರೂಪವನ್ನೇ ಬರೆಯುವ ರೂಪವನ್ನಾಗಿಸಿದಾಗ ಮಕ್ಕಳು ಬೇಗನೇ ಗ್ರಹಿಸುತ್ತಾರೆಂಬುದು ಭಾಷಾ ತಜ್ಞರ ಹಾಗೂ ಮನಃಶಾಸ್ತ್ರಜ್ಞರ ಅಭಿಮತ. ಆದರೆ ಅಧ್ಯಯನದ ಅನುಭವದ ಹಿನ್ನೆಲೆಯಲ್ಲಿ ಗಮನಿಸಿದರೆ ಸಂಪೂರ್ಣ ಕನ್ನಡದ ವಾತಾವರಣದಲ್ಲಿದ್ದರೂ ಬಹಳಷ್ಟು ವಿದ್ಯಾರ್ಥಿಗಳು ಕನ್ನಡ ಕಲಿಕೆಯಲ್ಲಿ ಹಾಗೂ ಕನ್ನಡ ಭಾಷಾ ಕೌಶಲಗಳ ಕಲಿಕೆಯಲ್ಲಿ ಹಿಂದುಳಿದಿರುವ ಸಂಗತಿ ತಿಳಿದು ಬಂದಿದೆ.

ಕನ್ನಡ ಲಿಪಿ ಗ್ರಹಿಕೆಯಲ್ಲಿ ಗೊಂದಲಕ್ಕೀಡಾಗುವ ವಿದ್ಯಾರ್ಥಿಗಳು, ಕನ್ನಡ ಮಾಧ್ಯಮದಲ್ಲೇ ಕಲಿಸಲಾಗುವ ಗಣಿತ, ವಿಜ್ಞಾನ, ಸಮಾಜ ವಿಜ್ಞಾನಗಳ ಪಾಠಗಳನ್ನೂ ಸ್ವಾಧ್ಯಾಯದ ಮೂಲಕ ಕಲಿಯಲಾರರು. ನಿರರ್ಗಳವಾದ ಓದುವಿಕೆಯಲ್ಲಿ ತೊಡಕಿರುವುದರಿಂದ ಬರೀ ಕನ್ನಡ ಭಾಷಾ ಕಲಿಕೆಯ ಕೌಶಲಗಳಲ್ಲಿ ಮಾತ್ರವಲ್ಲದೆ, ಗಣಿತ ವಿಭಾಗದ ಅಂಕ ಗಣಿತ, ಬೀಜ ಗಣಿತ, ರೇಖಾಗಣಿತದ ಮೂಲ ಕೌಶಲಗಳ ಸ್ವಗ್ರಹಿಕೆಯು ವಿದ್ಯಾರ್ಥಿಗಳಿಗೆ ಸಿದ್ಧಿಸುತ್ತಿಲ್ಲ. ಅಂಕಿ ಸಂಖ್ಯೆಗಳಿರುವ ಲೆಕ್ಕಗಳನ್ನು ಸರಿಯಾಗಿ ಮಾಡುವ ವಿದ್ಯಾರ್ಥಿಗಳೂ ಕೂಡ ವಾಕ್ಯಗಳನ್ನು ಬರೆಯುವಾಗ ಅಕ್ಷರದೋಷಗಳನ್ನು ಮಾಡುತ್ತಾರೆಂಬುದು ಅನೇಕ ಗಣಿತ ಶಿಕ್ಷಕರ ಅಭಿಪ್ರಾಯವಾಗಿದೆ.

ಕನ್ನಡ ಕಲಿಕೆಯಲ್ಲಿ ಹಿಂದುಳಿದ ವಿದ್ಯಾರ್ಥಿಗಳು ವಿಜ್ಞಾನದ ಕಲಿಕೆಯಲ್ಲಿಯೂ ಹಿಂದುಳಿದಿದ್ದಾರೆ. ವಿಜ್ಞಾನದ ಭೌತಶಾಸ್ತ್ರ, ರಸಾಯನ ಶಾಸ್ತ್ರ ಹಾಗೂ ಜೀವಶಾಸ್ತ್ರ ವಿಭಾಗದ ಕೌಶಲಗಳಲ್ಲಿ ಈ ವಿದ್ಯಾರ್ಥಿಗಳು ಪರಾವಲಂಬಿಗಳಾಗಿದ್ದಾರೆ. ವಿಜ್ಞಾನದ ಪಠ್ಯಗಳ ಪಾಠಗಳನ್ನು ನಿರರ್ಗಳವಾಗಿ ಓದಲಾರದ ವಿದ್ಯಾರ್ಥಿಗಳು ವಿಜ್ಞಾನದ ಪಠ್ಯಪುಸ್ತಕವನ್ನು ಸ್ವಾಧ್ಯಾಯದಿಂದ ಓದಲು ಅಸಮರ್ಥರಾಗಿದ್ದಾರೆ.

ಕನ್ನಡ ಭಾಷಾ ಕಲಿಕೆಯಲ್ಲಿ ಹಿಂದುಳಿದ ವಿದ್ಯಾರ್ಥಿಗಳು ಸಮಾಜ ವಿಜ್ಞಾನದ ಅಧ್ಯಯನದಲ್ಲಿಯೂ ಹಿಂದುಳಿದಿದ್ದಾರೆ. ಸಮಾಜ ವಿಜ್ಞಾನದ ಅಂಗಗಳಾದ ಇತಿಹಾಸ, ಭೂಗೋಳ, ಪೌರನೀತಿ ಹಾಗೂ ಅರ್ಥಶಾಸ್ತ್ರಗಳ ಪಾಠಗಳನ್ನೂ ನಿರರ್ಗಳವಾಗಿ ಓದಲಾರದ ವಿದ್ಯಾರ್ಥಿಗಳ ಸಂಖ್ಯೆ ಪ್ರೌಢಶಾಲಾ ಹಂತದಲ್ಲಿ ಬಹು ದೊಡ್ಡದಿದೆ ಎಂಬುದು ಅಧ್ಯಯನದ ಅಂಕಿ ಅಂಶಗಳಿಂದ ಸ್ಪಷ್ಟವಾಗುತ್ತದೆ. ಕನ್ನಡ ಲಿಪಿ ಗ್ರಹಿಕೆಯಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿರುವ ವಿದ್ಯಾರ್ಥಿಗಳು ಸಮಾಜದ ಪಾಠಗಳನ್ನು ನಿರರ್ಗಳವಾಗಿ ಓದಿ ಅರ್ಥಮಾಡಿಕೊಳ್ಳಲು ಅಸಮರ್ಥರಾಗಿದ್ದಾರೆ. ಲಕ್ಷಾಂತರ ವಿದ್ಯಾರ್ಥಿಗಳು ಏಳು ಎಂಟು ವರ್ಷಗಳ ಕನ್ನಡ ಕಲಿಕೆಯಿದ್ದರೂ ಲಿಪಿ ಗ್ರಹಿಕೆಯಲ್ಲಿಯೇ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆಂದರೆ ಅದು ವಿದ್ಯಾರ್ಥಿಗಳಲ್ಲಿನ ದೋಷವಲ್ಲ. ಬೋಧನಾ ಪ್ರಕ್ರಿಯೆಯಲ್ಲಿರುವ ದೋಷವಾಗಿದೆ.

ಕರ್ನಾಟಕದ ಪ್ರೌಢಶಾಲೆಗಳಲ್ಲಿ ಓದುತ್ತಿರುವ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳ ಕನ್ನಡ ಭಾಷಾ ಕೌಶಲಗಳ ಪ್ರಭುತ್ವದ ಮಟ್ಟವು ಅನ್ಯ ಜ್ಞಾನಶಾಖೆಗಳ ಕಲಿಕಾ ಸಾಮರ್ಥ್ಯಗಳ ಮೇಲೆ ದಟ್ಟವಾದ ಪರಿಣಾಮವನ್ನು ಬೀರುತ್ತಿರುವುದು ಅಧ್ಯಯನದ ಸಂದರ್ಭಗಳಲ್ಲಿ ಕಂಡುಬಂದಿದೆ. ಕನ್ನಡ ಭಾಷಾ ಕಲಿಕೆಯ ಮಟ್ಟವೇ ಅವರ ಗಣಿತ ವಿಜ್ಞಾನ ಹಾಗೂ ಸಮಾಜ ವಿಜ್ಞಾನಗಳ ಕಲಿಕಾ ಮಟ್ಟವನ್ನು ನಿರ್ಧರಿಸುವ ನಿರ್ಧಾರಕ ಅಂಶಗಳಾಗಿರುವುದು ಕಂಡುಬಂದಿದೆ.



ಕನ್ನಡದ ಲಿಪಿ ಗ್ರಹಿಕೆಯಲ್ಲಿ ವಿದ್ಯಾರ್ಥಿಗಳು ಕುಶಲಿಗರಾದರೆ ಅವರ ಓದುವಿಕೆ ನಿರರ್ಗಳವಾಗುತ್ತದೆ. ಓದುವಿಕೆ ನಿರರ್ಗಳವಾದರೆ ಸ್ವಾಧ್ಯಾಯವು ಸಿದ್ಧಿಸುತ್ತದೆ. ಸ್ವಾಧ್ಯಾಯ ಸಿದ್ಧಿಸಿದರೆ ಅವರ ಗ್ರಹಿಕೆಯ ಮಟ್ಟವೂ ಉನ್ನತವಾಗುತ್ತದೆ. ಕಲಿಕಾ ವಿಚಾರದಲ್ಲಿ ವಿದ್ಯಾರ್ಥಿಗಳು ಶಿಕ್ಷಕರನ್ನು ಸಂಪೂರ್ಣವಾಗಿ ಅವಲಂಬಿಸಬೇಕೆಂದಿಲ್ಲ. ಶಿಕ್ಷಕರು ಕೇವಲ ಮಾರ್ಗದರ್ಶಕರಾಗಿದ್ದರೆ ಸಾಕಾಗುತ್ತದೆ. ಒಟ್ಟಿನಲ್ಲಿ ವಿದ್ಯಾರ್ಥಿಗಳ ಕನ್ನಡ ಭಾಷಾ ಕೌಶಲಗಳ ಕಲಿಕೆಯ ಪ್ರಭುತ್ವದ ಮಟ್ಟವು, ಕನ್ನಡ ಮಾಧ್ಯಮದ ಇತರ ವಿಷಯಗಳ ಕಲಿಕೆಯ ಮಟ್ಟದ ಮೇಲೆ ಅತ್ಯಂತ ಪರಿಣಾಮಕಾರಿಯಾದ ಹಿನ್ನೆಲೆಯನ್ನು ಉಂಟುಮಾಡುತ್ತದೆ.

ಕನ್ನಡ ಕಲಿಕೆಯಲ್ಲಿ ಹಿಂದುಳಿದ ಅಂದರೆ ಶೇಕಡಾ ೪೫ಕ್ಕಿಂತ ಕಡಿಮೆ ಅಂಕಗಳನ್ನು ತೆಗೆದುಕೊಳ್ಳುವ (ಕೆಲವು ಶಾಲೆಗಳಲ್ಲಿ ಶ್ರೇಣಿಯನ್ನು ನೀಡುವ ವ್ಯವಸ್ಥೆಯಿದೆ. ಶಿಕ್ಷಕರು ಪ್ರತ್ಯೇಕವಾಗಿ ಅಂಕಗಳನ್ನು ನಮೂದಿಸಿರುತ್ತಾರೆ. ವಿದ್ಯಾರ್ಥಿಗಳಿಗೆ ಶ್ರೇಣಿಯನ್ನು ಮಾತ್ರ ಹೇಳುತ್ತಾರೆ. ಅಂಕಗಳ ಮಾಹಿತಿಯನ್ನು ಶಿಕ್ಷಕರಿಂದ ಹಾಗೂ ಕಚೇರಿಯಿಂದ ಸ್ವೀಕರಿಸಲಾಗಿದೆ.) ವಿದ್ಯಾರ್ಥಿಗಳನ್ನು ಯಾದೃಚ್ಛಿಕವಾಗಿ ರಾಜ್ಯದ ೧೫೦೦ ವಿದ್ಯಾರ್ಥಿಗಳನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಎಂಟು, ಒಂಭತ್ತು ಹಾಗೂ ಹತ್ತನೆಯ ತರಗತಿಯ ವಿದ್ಯಾರ್ಥಿಗಳನ್ನು ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಮೊದಲಿಗೆ ಶಿಕ್ಷಕರೊಂದಿಗೆ ಚರ್ಚಿಸಿ ಕಡಿಮೆ ಅಂಕ ಪಡೆದ ವಿದ್ಯಾರ್ಥಿಗಳನ್ನು ಗುರುತಿಸಿಕೊಳ್ಳಲಾಯಿತು. ತದನಂತರ ಆ ವಿದ್ಯಾರ್ಥಿಗಳು ಉಳಿದ ವಿಷಯಗಳಲ್ಲಿ ಅಂದರೆ ಗಣಿತ, ವಿಜ್ಞಾನ, ಸಮಾಜಗಳಲ್ಲಿ ಯಾವ ಹಂತದಲ್ಲಿದ್ದಾರೆ ಎಂಬುದನ್ನು ತಿಳಿದುಕೊಳ್ಳಲಾಯಿತು. ಕನ್ನಡದ ಕಲಿಕೆಯ ಹಿನ್ನೆಲೆಯಲ್ಲಿ ಗುರುತಿಸಿಕೊಂಡ ವಿದ್ಯಾರ್ಥಿಗಳ ಅಂಕಗಳ ಜೊತೆ ಅವರು ಇತರ ವಿಷಯಗಳಲ್ಲಿ ಗಳಿಸಿರುವ ಅಂಕಗಳನ್ನು ಬರೆದುಕೊಳ್ಳಲಾಯಿತು. ಸಮಗ್ರವಾಗಿ ಕ್ರೋಢೀಕರಣಗೊಳಿಸಲಾಯಿತು. ಶಿಕ್ಷಕರಿಂದ ಕನ್ನಡ ಭಾಷಾ ಕಲಿಕೆ ಮತ್ತು ಕನ್ನಡ ಮಾಧ್ಯಮದ ಕಲಿಕೆಯ ಅಂತರ್ ಸಂಬಂಧದ ಬಗ್ಗೆ ಮಾಹಿತಿ ಸಂಗ್ರಹಿಸಲಾಯಿತು.

ಕನ್ನಡ ಕಲಿಕೆಯಲ್ಲಿ ಹಿಂದುಳಿದಿರುವ ವಿದ್ಯಾರ್ಥಿಗಳು ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನಗಳ ಕಲಿಕೆಯಲ್ಲಿಯೂ ಹಿಂದಿರುವ ಕುರಿತು ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನ ಬೋಧಿಸುವ ಶಿಕ್ಷಕರೊಂದಿಗೆ ಚರ್ಚಿಸಲಾಗಿದೆ. ಅವರ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದ್ದು, ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ. ಮುಖ್ಯವಾದ ಕಾರಣಗಳನ್ನು ಕಂಡುಕೊಳ್ಳಲಾಗಿದೆ.

## ೫.೨ ತರಗತಿವಾರು ವಿಶ್ಲೇಷಣೆ.




ಎಂಟನೆಯ ತರಗತಿಯಲ್ಲಿ ಕನ್ನಡ ಕಲಿಕೆಯಲ್ಲಿ ಶೇಕಡಾ ೪೫ ಕ್ಕಿಂತ ಕಡಿಮೆ ಅಂಕಗಳನ್ನು ತೆಗೆದ ೫೦೦ ವಿದ್ಯಾರ್ಥಿಗಳಲ್ಲಿ ಶೇಕಡಾ ೧೦೦ ರಷ್ಟು ವಿದ್ಯಾರ್ಥಿಗಳು ಗಣಿತದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಶೇಕಡಾ ೯೮ ರಷ್ಟು ವಿದ್ಯಾರ್ಥಿಗಳು ವಿಜ್ಞಾನದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಶೇಕಡಾ ೮೯ ರಷ್ಟು ವಿದ್ಯಾರ್ಥಿಗಳು ಸಮಾಜ ವಿಜ್ಞಾನದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಕನ್ನಡ ಭಾಷೆಯ ಓದು ಮತ್ತು ಬರಹಗಳ ಕೌಶಲಗಳನ್ನು ಕಲಿಸುವಲ್ಲಿ ಇರುವ ದೋಷದಿಂದಾಗಿ ವಿದ್ಯಾರ್ಥಿಗಳು ಕನ್ನಡ ಮಾದ್ಯಮದಲ್ಲಿಯೇ ಇರುವ ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನಗಳ ಪಠ್ಯಗಳನ್ನು ನಿರರ್ಗಳವಾಗಿ ಓದಿ ಅರ್ಥಮಾಡಿಕೊಳ್ಳಲಾಗದ ಸ್ಥಿತಿಯಲ್ಲಿದ್ದಾರೆ.



ಒಂಭತ್ತನೆಯ ತರಗತಿಯಲ್ಲಿ ಕನ್ನಡ ಕಲಿಕೆಯಲ್ಲಿ ಶೇಕಡಾ ೪೫ ಕ್ಕಿಂತ ಕಡಿಮೆ ಅಂಕಗಳನ್ನು ತೆಗೆದ ೫೦೦ ವಿದ್ಯಾರ್ಥಿಗಳಲ್ಲಿ ಶೇಕಡಾ ೯೯ರಷ್ಟು ವಿದ್ಯಾರ್ಥಿಗಳು ಗಣಿತದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಶೇಕಡಾ ೧೦೦ ರಷ್ಟು ವಿದ್ಯಾರ್ಥಿಗಳು ವಿಜ್ಞಾನದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಶೇಕಡಾ ೯೪ ರಷ್ಟು ವಿದ್ಯಾರ್ಥಿಗಳು ಸಮಾಜ ವಿಜ್ಞಾನದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ.

ಕನ್ನಡವನ್ನು ನಿರರ್ಗಳವಾಗಿ ಓದಲು ಬರದಿರುವುದರಿಂದ ವಿದ್ಯಾರ್ಥಿಗಳು ವಿಜ್ಞಾನದ ಹಾಗೂ ಸಮಾಜ ವಿಜ್ಞಾನದ ಪಾಠಗಳನ್ನು ನಿರರ್ಗಳವಾಗಿ ಓದಲಾರರು. ವಿಜ್ಞಾನ ಹಾಗೂ ಸಮಾಜ ವಿಜ್ಞಾನದ ಪಾಠಗಳು ಕನ್ನಡ ಮಾಧ್ಯಮದಲ್ಲಿಯೇ ಇರುವುದರಿಂದ ಕನ್ನಡ ಲಿಪಿ ಗ್ರಹಿಕೆಯಲ್ಲಿ ಗೊಂದಲವನ್ನೆದುರಿಸುತ್ತಿರುವ ವಿದ್ಯಾರ್ಥಿಗಳು ಪಾಠಗಳಲ್ಲಿರುವ ಆಳವಾದ ವಿಷಯಗಳನ್ನು ಗ್ರಹಿಸಿಕೊಳ್ಳುವಲ್ಲಿ ವಿಫಲರಾಗುತ್ತಿದ್ದಾರೆ.

ವಿದ್ಯಾರ್ಥಿಗಳಿಗೆ ಪ್ರಾಥಮಿಕ ಶಾಲಾ ಹಂತದಲ್ಲಿಯೇ ಲಿಪಿ ಗ್ರಹಿಕೆಯ ಕೌಶಲವನ್ನು ಸಮರ್ಪಕವಾಗಿ ಕಲಿಸದಿರುವುದರಿಂದಲೇ ವಿದ್ಯಾರ್ಥಿಗಳು ಪ್ರೌಢಶಾಲಾ ಹಂತದಲ್ಲಿಯೂ ಕಲಿಕಾ ಸಮಸ್ಯೆಗಳನ್ನು ಎದುರಿಸಬೇಕಾದ ಸನ್ನಿವೇಶವಿದೆ ಎಂಬುದು ಬಹಳಷ್ಟು ಶಿಕ್ಷಕರ ಅಭಿಪ್ರಾಯವಾಗಿದೆ. ಪ್ರೌಢಶಾಲಾ ಹಂತದಲ್ಲಿ ವಿದ್ಯಾರ್ಥಿಗಳಿಗೆ ಬರವಣಿಗೆಯನ್ನು ಕಲಿಸಲಾಗುವುದಿಲ್ಲ. ಅದಕ್ಕಾಗಿ ಸಮಯವನ್ನು ಮೀಸಲಿಟ್ಟಲ್ಲಿ ಪಠ್ಯದಲ್ಲಿರುವ ಪಾಠಗಳನ್ನು ನಿಗದಿತ ಸಮಯದಲ್ಲಿ ಮಾಡಲಾಗುವುದಿಲ್ಲ. ಶಿಕ್ಷಣ ಇಲಾಖೆಯು ನಿಗದಿತ ಸಮಯದಲ್ಲಿ ಪಾಠಗಳನ್ನು ಮುಗಿಸಲು ಹಾಗೂ ಮೌಲ್ಯಮಾಪನಮಾಡಲು ಶಿಕ್ಷಕರಿಗೆ ನಿರ್ದೇಶಿಸುವುದರಿಂದ ಶಿಕ್ಷಕರು ವಿದ್ಯಾರ್ಥಿಗಳ ಕಲಿಕೆಗಿಂತ ನಿಗದಿತ ಅವಧಿಯಲ್ಲಿ ತಮ್ಮ ಪಾಠಗಳನ್ನು ಮುಗಿಸುವುದಕ್ಕೆ ಮೊದಲ ಆದ್ಯತೆ ಕೊಡುತ್ತಾರೆ. ಇದರಿಂದ ಕಲಿಕೆಯಲ್ಲಿ ತೊಡಕನ್ನು ಎದುರಿಸುತ್ತಿರುವ ವಿದ್ಯಾರ್ಥಿಗಳು ಸಮಸ್ಯೆಗಳಲ್ಲಿಯೇ ಬಳಲುತ್ತಿರುತ್ತಾರೆ.



ಹತ್ತನೆಯ ತರಗತಿಯಲ್ಲಿ ಕನ್ನಡ ಕಲಿಕೆಯಲ್ಲಿ ಶೇಕಡಾ ೪೫ ಕ್ಕಿಂತ ಕಡಿಮೆ ಅಂಕಗಳನ್ನು ತೆಗೆದ ೫೦೦ ವಿದ್ಯಾರ್ಥಿಗಳಲ್ಲಿ ಶೇಕಡಾ ೯೮ರಷ್ಟು ವಿದ್ಯಾರ್ಥಿಗಳು ಗಣಿತದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಶೇಕಡಾ ೯೭ ರಷ್ಟು ವಿದ್ಯಾರ್ಥಿಗಳು ವಿಜ್ಞಾನದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಶೇಕಡಾ ೯೯ ರಷ್ಟು ವಿದ್ಯಾರ್ಥಿಗಳು ಸಮಾಜ ವಿಜ್ಞಾನದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ.

ಹತ್ತನೆಯ ತರಗತಿಯ ವಿದ್ಯಾರ್ಥಿಗಳಿಗೆ ಒಂಭತ್ತು ವರ್ಷಗಳಿಂದ ಕನ್ನಡ ಭಾಷೆಯನ್ನು ಕಲಿಸಲಾಗುತ್ತಿದೆ. ಒಂಭತ್ತು ವರ್ಷಗಳಿಂದ ಅವರು ಕನ್ನಡದ ಕಲಿಕಾ ಸನ್ನಿವೇಶದಲ್ಲಿದ್ದಾರೆ. ಕನ್ನಡ ಮಾಧ್ಯಮದಲ್ಲಿಯೇ ಅವರಿಗೆ ಬೋಧನೆಯಾಗುತ್ತಿದೆ. ಆದರೂ ಕೂಡ ಅವರಿಗೆ ಕನ್ನಡದ ಸ್ಪಷ್ಟ ಓದು ಹಾಗೂ ಶುದ್ಧ ಬರಹದ ಕೌಶಲ ಕೈಗೂಡುತ್ತಿಲ್ಲ. ಶಿಕ್ಷಣ ವ್ಯವಸ್ಥೆಯಲ್ಲಿ ವಿದ್ಯಾರ್ಥಿಗಳನ್ನು ಕೇಂದ್ರವಾಗಿಟ್ಟುಕೊಂಡು ಬೋಧನೆ ನಡೆಯುತ್ತಿಲ್ಲ. ಶಿಕ್ಷಕರು ಇಲಾಖೆ ನಿಗದಿಪಡಿಸಿರುವ ಪಠ್ಯಕ್ರಮವನ್ನು ನಿಗದಿತ ಅವಧಿಯಲ್ಲಿ ಮುಗಿಸುತ್ತಿದ್ದಾರೆ. ಪಠ್ಯಪುಸ್ತಕವೇ ಕೇಂದ್ರವಾಗಿರುವುದರಿಂದ ವಿದ್ಯಾರ್ಥಿಗಳಿಗೆ ಅರ್ಥವಾಗಲೀ ಇಲ್ಲದಿರಲಿ ವೇಳಾಪಟ್ಟಿಯಂತೆ ಪಾಠ ಮುಗಿಸುತ್ತಿದ್ದಾರೆ. ಮೌಲ್ಯಮಾಪನ ಪ್ರಕ್ರಿಯೆಗಳನ್ನು ಮುಗಿಸುತ್ತಿದ್ದಾರೆ.

ಕನ್ನಡ ಭಾಷೆಯನ್ನು ನಿರರ್ಗಳವಾಗಿ ಓದುವ ವಿದ್ಯಾರ್ಥಿಗಳು ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನಗಳ ಪಾಠಗಳನ್ನು ನಿರರ್ಗಳವಾಗಿ ಓದುತ್ತಾರೆ. ಕನ್ನಡ ಕಲಿಕೆಯಲ್ಲಿ ಹೆಚ್ಚು ಕುಶಲಿಗರಾಗಿರುವ ಬಹುತೇಕ ವಿದ್ಯಾರ್ಥಿಗಳು ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನಗಳ ಕಲಿಕೆಯಲ್ಲಿಯೂ ಕುಶಲಿಗರಾಗಿದ್ದಾರೆ. ಕನ್ನಡ ಭಾಷಾ ಕಲಿಕೆಯು ಕನ್ನಡ ಮಾಧ್ಯಮದ ಕಲಿಕೆಯ ಮೇಲೆ ಅತ್ಯಂತ ಗಾಢವಾದ ಪರಿಣಾಮ ಬೀರಿರುವುದು ಅಧ್ಯಯನದ ಸಂದರ್ಭಗಳಲ್ಲಿ ಕಂಡುಬಂದಿದೆ.

## ೫.೩ ಶಿಕ್ಷಕರು ಕೊಡುವ ಕಾರಣಗಳು

- ಪ್ರಾಥಮಿಕ ಶಾಲೆಗಳಲ್ಲಿ ಸರಿಯಾಗಿ ಬೋಧನೆ ಮಾಡುತ್ತಿಲ್ಲ.
- ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಪಾಠಕ್ಕಿಂತ ತರಬೇತಿ ಹಾಗೂ ಕಚೇರಿ ಕಾರ್ಯಗಳು ಹೆಚ್ಚಿರುತ್ತವೆ.
- ಮಕ್ಕಳನ್ನು ಅನುತ್ತೀರ್ಣಗೊಳಿಸಬಾರದೆಂಬ ಸರ್ಕಾರದ ಕಾನೂನಿನಿಂದಾಗಿ ಈ ಪರಿಸ್ಥಿತಿ ನಿರ್ಮಾಣವಾಗುತ್ತಿದೆ.
- ಕಲಿಕೆಯಲ್ಲಿ ಸಾಮರ್ಥ್ಯಗಳಿಸಿಕೊಳ್ಳದವರಿಗೆ ಮರುಬೋಧನೆ, ಮರು ಮೌಲ್ಯಮಾಪನ ಮಾಡಬೇಕೆಂಬ ನಿಬಂಧನೆಯಿದೆ. ಇದು ಕೂಡಾ ಸರಿಯಾಗಿ ನಡೆಯುತ್ತಿಲ್ಲ
- ಮಕ್ಕಳು ಕೂಡ ಆಸಕ್ತಿವಹಿಸುವುದಿಲ್ಲ, ಬೇಜವಾಬ್ದಾರಿಯವರಾಗಿದ್ದಾರೆ

- ಪೋಷಕರು ಮಕ್ಕಳ ಶೈಕ್ಷಣಿಕ ಸಾಧನೆಗಳ ಬಗ್ಗೆ ಚಿಂತಿಸುವುದಿಲ್ಲ.
- ಪೋಷಕರಿಗೆ ಹಾಗೂ ವಿದ್ಯಾರ್ಥಿಗಳಿಗೆ ಶಾಲೆಯ ಬಗ್ಗೆ ಗೌರವ ಕಡಿಮೆಯಾಗಿದೆ.
- ತಾವು ಹೇಗೆ ಬರೆದರೂ ಶಿಕ್ಷಕರು ನಮ್ಮನ್ನು ಪಾಸುಮಾಡಿಯೇ ಮಾಡುತ್ತಾರೆಂಬ ವರ್ತನೆ ಕೆಲವು ವಿದ್ಯಾರ್ಥಿಗಳಲ್ಲಿದೆ.
- ಅನೇಕ ಶಿಕ್ಷಕರು ಸರಿಯಾಗಿ ಪಾಠ ಮಾಡುವುದಿಲ್ಲ. ಕಾಟಾಚಾರಕ್ಕಾಗಿ ಪಠ್ಯಕ್ರಮ ಮುಗಿಸುವವರೇ ಹೆಚ್ಚು. ಶಿಕ್ಷಣಕ್ರಮದ ಗುಣಮಟ್ಟ ಕುಸಿದಿದೆ.
- ಕೌಶಲ ಯುಕ್ತ ಹಾಗೂ ಸೃಜನಶೀಲ ಶಿಕ್ಷಕರ ಸಂಖ್ಯೆ ಕಡಿಮೆ.
- ವಸ್ತು ನಿಷ್ಠ ಪ್ರಶ್ನೆಗಳು ಬಂದಮೇಲೆ ಮಕ್ಕಳು ಮತ್ತಷ್ಟು ಸೋಮಾರಿಗಳಾಗಿದ್ದಾರೆ.
- ತ್ರಿಭಾಷಾ ಸೂತ್ರ ಮಕ್ಕಳಿಗೆ ಹೊರೆಯಾಗಿದೆ. ಇದು ಕಲಿಕೆಗೆ ಹೊರೆಯಾಗಿದೆಯೇ ಹೊರತು ಕಲಿಕೆಯ ಸಾಧನೆ ಏನೇನೂ ಸಾಲದು.
- ಆಧುನಿಕ ತಂತ್ರಾಂಶಗಳನ್ನು ಶಿಕ್ಷಣದಲ್ಲಿ ಅಳವಡಿಸಿಕೊಂಡ ಶಾಲೆಗಳಿಲ್ಲ.
- ಶಾಲಾ ಪರಿಸರ, ಶಾಲಾ ಕೊಠಡಿಗಳು ಮಕ್ಕಳನ್ನು ಆಕರ್ಷಿಸುವಲ್ಲಿ ವಿಫಲವಾಗುತ್ತಿವೆ. ಇದರಿಂದ ಮಕ್ಕಳ ಆಸಕ್ತಿ, ಅವಧಾನಗಳು ಕುಂಠಿತವಾಗುತ್ತಿವೆ.
- ಪ್ರೌಢಶಾಲೆಗೆ ಬಂದ ಮೇಲೆ ಅಕ್ಷರಗಳನ್ನು ತಿದ್ದುವ ಕೆಲಸ ಮಾಡಿಸಲು ಸಮಯ ಸಿಗುವುದಿಲ್ಲ, ಇರುವ ಪಠ್ಯಕ್ರಮವನ್ನೇ ಮುಗಿಸಲು ಸಮಯ ಸಾಲದಾಗಿದೆ.
- ಭಾಷೆಯ ಜೊತೆಗೆ ಗಣಿತ, ವಿಜ್ಞಾನ, ಸಮಾಜ ವಿಜ್ಞಾನದ ಮೂಲಭೂತ ಅಂಶಗಳನ್ನು ಪ್ರಾಥಮಿಕ ಶಾಲೆಗಳಲ್ಲಿ ಸರಿಯಾಗಿ ಹೇಳಿಕೊಡುವುದಿಲ್ಲ.
- ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಭಾಷಾ ಶಿಕ್ಷಕರನ್ನು ನೇಮಿಸಬೇಕು.
- ಪ್ರಾಥಮಿಕ ಶಾಲೆಗಳಲ್ಲಿ ಲಿಪಿಕ ಹುದ್ದೆಯನ್ನು ಸೃಷ್ಟಿಸಿ, ಶಿಕ್ಷಕರನ್ನು ಸಂಪೂರ್ಣವಾಗಿ ಬೋಧನೆಗೆ ತೊಡಗಿಸಬೇಕು.
- ಪ್ರಾಥಮಿಕ ಶಾಲೆಗಳಲ್ಲಿ ನೂತನ ವಿಧಾನಗಳ ಹೆಸರಿನಲ್ಲಿ ಕಲಿಕೆ ಹಾಗೂ ಬೋಧನೆಗಳಲ್ಲಿ ಗೊಂದಲವನ್ನುಂಟು ಮಾಡುತ್ತಿರುವ ಶಿಕ್ಷಣ ಇಲಾಖೆ.
- ಹೇಗೆ ಕಲಿಸಬೇಕೆಂಬುದಕ್ಕಿಂತ ಪ್ರಯೋಗಗಳನ್ನು ಮಾಡುವುದೇ ಸುಧಾರಣೆ ಎಂಬಂತಹ ಸ್ಥಿತಿ ಪ್ರಾಥಮಿಕ ಶಾಲಾ ಸನ್ನಿವೇಶದಲ್ಲಿರುವುದು.
- ಕನ್ನಡ ಭಾಷೆಯ ಓದು, ಬರಹ ಕೌಶಲಗಳು ಮೊನಚಾಗದಿದ್ದರೆ ಅದರ ನೇರ ಪರಿಣಾಮ ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನ ಪಠ್ಯಗಳಲ್ಲೂ ಆಗುತ್ತದೆ. ಆದುದರಿಂದ ಓದು, ಬರಹ ಕೌಶಲಗಳಿಗೆ ಹೆಚ್ಚಿನ ಪ್ರಧಾನತೆ ನೀಡಬೇಕು.

- ಸರಕಾರ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯು ಈ ನಿಟ್ಟಿನಲ್ಲಿ ತಳಮಟ್ಟದಲ್ಲಿಯೇ ಕಾರ್ಯಾಗಾರಗಳನ್ನು, ತರಬೇತಿಗಳನ್ನು ಆಯೋಜಿಸಬೇಕು.
- ಆಯೋಜಿಸುವ ತರಬೇತಿಗಳ ವಿಚಾರಗಳು ತರಗತಿಯೊಳಗೆ ಅನ್ವಯಿಸುವಂತಿರಬೇಕು

ವಿದ್ಯಾರ್ಥಿಗಳ ಕಲಿಕೆಯ ಸಾಮರ್ಥ್ಯವನ್ನು ನಿರ್ಧರಿಸುವಲ್ಲಿ ಶಿಕ್ಷಕರ ಕೊರತೆಯೂ ಕೂಡ ಮಹತ್ವದ ಪರಿಣಾಮ ಬೀರುತ್ತದೆಯೆಂಬುದು ಹಲವು ಶಿಕ್ಷಕರ ಹಾಗೂ ಪೋಷಕರ ಅಭಿಪ್ರಾಯವಾಗಿದೆ. ೨೦೦೯ರಿಂದ ೨೦೧೩ರ ವರೆಗಿನ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಲ್ಲಿನ ಅನುಮೋದನೆಗೊಂಡ, ಕಾರ್ಯ ನಿರ್ವಹಿಸುತ್ತಿರುವ ಹಾಗೂ ಖಾಲಿ ಇರುವ ಶಿಕ್ಷಕರ ಹುದ್ದೆಗಳ ವಿವರ ಈ ಕೆಳಕಂಡಂತಿದೆ.[೨]

| ವರ್ಷ | ಅನುಮೋದನೆಗೊಂಡ ಹುದ್ದೆಗಳು | ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರ ಸಂಖ್ಯೆ | ಖಾಲಿ ಇರುವ ಹುದ್ದೆಗಳು |
|---|---|---|---|
| ೨೦೦೯-೧೦ | ೨೨೫೨೦೯ | ೨೦೬೬೪೦ | ೧೮೫೬೯ |
| ೨೦೧೦-೧೧ | ೨೨೮೦೭೯ | ೨೧೦೪೪೫ | ೧೭೬೩೪ |
| ೨೦೧೧-೧೨ | ೨೨೮೩೭೧ | ೨೦೫೧೪೬ | ೨೩೨೨೫ |
| ೨೦೧೨-೧೩ | ೨೨೮೫೬೭ | ೨೦೧೧೮೦ | ೨೭೩೮೭ |

ಕರ್ನಾಟಕದ ಪ್ರಾಥಮಿಕ ಹಾಗೂ ಪ್ರೌಢಶಾಲಾ ಶೈಕ್ಷಣಿಕ ವ್ಯವಸ್ಥೆಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳದ ಕಾರಣ ಕಲಿಕಾ ವಿಚಾರದಲ್ಲಿ ವಿದ್ಯಾರ್ಥಿಗಳು ಶಿಕ್ಷಕರನ್ನು ಸಂಪೂರ್ಣವಾಗಿ ಅವಲಂಬಿಸಬೇಕಾದ ಸನ್ನಿವೇಶವಿದೆ. ೨೦೧೨-೧೩ನೇ ಸಾಲಿನಲ್ಲಿ ಕರ್ನಾಟಕದ ಪ್ರೌಢಶಾಲೆಗಳಲ್ಲಿ ೨೭೩೮೭ ಶಿಕ್ಷಕರ ಹುದ್ದೆಗಳು ತೆರವಾಗಿವೆ. ವಿದ್ಯಾರ್ಥಿಗಳು ಕಲಿಕಾ ಸಂದರ್ಭದಲ್ಲಿ ಸಂಪೂರ್ಣವಾಗಿ ಶಿಕ್ಷಕರನ್ನೇ ಅವಲಂಬಿಸಿರುವ ಸನ್ನಿವೇಶದಲ್ಲಿರುವಾಗ ಶಿಕ್ಷಕರ ಅನುಪಸ್ಥಿತಿಯು ವಿದ್ಯಾರ್ಥಿಗಳ ಕಲಿಕೆಯ ಮೇಲೆ ವ್ಯತಿರಿಕ್ತವಾದ ಗಾಢ ಪರಿಣಾಮ ಬೀರುತ್ತದೆ.

ಕನ್ನಡ ಕಲಿಕೆಯಲ್ಲಿ ಹಿಂದುಳಿದಿರುವ ವಿದ್ಯಾರ್ಥಿಗಳು ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನದ ಅಧ್ಯಯನದಲ್ಲಿಯೂ ಹಿಂದುಳಿದಿದ್ದಾರೆ. ಕನ್ನಡ ಭಾಷಾ ಕಲಿಕೆಯ ಪ್ರಭಾವವು ಕನ್ನಡ ಮಾಧ್ಯಮದ ಕಲಿಕೆಯ ಮೇಲೂ ಗಾಢವಾದ ಪ್ರಭಾವವನ್ನು

ಬೀರಿರುವುದು ಅಧ್ಯಯನದಲ್ಲಿ ಕಂಡುಬಂದಿದೆ. ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನ ಬೋಧಿಸುವ ಶಿಕ್ಷಕರು ಕೂಡ ಇದೇ ಅಭಿಪ್ರಾಯವನ್ನು ನೀಡಿದ್ದಾರೆ.

ಭಾಷಾ ಕೌಶಲಗಳು ಕರಗತವಾದಾಗ ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನದ ಪಾಠಗಳನ್ನು ಕೊನೆಯ ಪಕ್ಷ ನಿರರ್ಗಳವಾಗಿ ಓದುತ್ತಾರೆ. ಅವರ ಸ್ವ ಕಲಿಕೆಯ ಮಟ್ಟವೂ ಹೆಚ್ಚುತ್ತದೆ. ಇಲ್ಲದಿದ್ದಲ್ಲಿ ವಿದ್ಯಾರ್ಥಿಗಳು ಕಂಠಪಾಠಕ್ಕಾಗಿ ಅಧ್ಯಾಪಕರ ಟಿಪ್ಪಣಿಗಾಗಿ ಕಾಯಬೇಕಾಗುತ್ತದೆ. ಸ್ಪಷ್ಟ ಓದು ಶುದ್ಧ ಬರಹ ಕೈಗೂಡಿದಲ್ಲಿ, ಕನ್ನಡ ಭಾಷಾ ಬೋಧನೆಯ ಗುರಿ ಉದ್ದೇಶಗಳು ಕೂಡ ಉನ್ನತ ಮಟ್ಟದಲ್ಲಿ ಸಾಧಿಸಿದಂತಾಗುತ್ತದೆ. ವಿದ್ಯಾರ್ಥಿಗಳನ್ನು ಕಲಿಕೆಯಲ್ಲಿ ಸ್ವಾವಲಂಬಿಗಳನ್ನಾಗಿ ಮಾಡಬೇಕು. ಸ್ವ ಕಲಿಕೆಯಲ್ಲಿ ತೊಡಗಿಕೊಳ್ಳಬೇಕೆಂಬ ಆಶಯ, ಉದ್ದೇಶಗಳಿಗೆ ಅನುಗುಣವಾದ ಕೆಲವೊಂದು ಕಟ್ಟು ನಿಟ್ಟಿನ ಹೊಸ ಕಾನೂನುಗಳನ್ನು, ಪ್ರಯೋಗಗಳನ್ನು ಹಾಗೂ ಯೋಜನೆಗಳನ್ನೂ ತರಬೇಕಾಗಿದೆ.

### ೫.೪ ತ್ರಿಭಾಷಾ ಸೂತ್ರದ ಮಿತಿ ಮತ್ತು ಶಕ್ತಿ

ಶಿಕ್ಷಣ ಕ್ಷೇತ್ರದಲ್ಲಿ ಹಲವು ವರ್ಷಗಳಿಂದ ಬಹು ಚರ್ಚಿತವಾಗಿ ಇಂದಿಗೂ ಬಗೆಹರಿಯದ ವಿಷಯವೆಂದರೆ ಅದು ಶಿಕ್ಷಣದ ಮಾಧ್ಯಮದ ವಿಚಾರ ಮತ್ತು ತ್ರಿಭಾಷಾ ಸೂತ್ರದ ಅಳವಡಿಕೆಯ ವಿಚಾರ. ಶಿಕ್ಷಣದ ಎಲ್ಲ ಹಂತಗಳಲ್ಲಿ ಕನ್ನಡವೇ ಪ್ರಧಾನವಾಗಬೇಕು; ಕನ್ನಡ ಮಾಧ್ಯಮವೇ ಬೇಕು ಎಂಬ ಒಂದು ವಾದ. ಜಾಗತಿಕ ನೆಲೆಯ ಅವಕಾಶಗಳಿಗೆ ತೆರೆದುಕೊಳ್ಳಬೇಕಿದ್ದರೆ ಆಂಗ್ಲ ಭಾಷೆ ಅತಿ ಮುಖ್ಯವಾಗುತ್ತದೆ; ಈ ಹಿನ್ನೆಲೆಯಲ್ಲಿ ಆಂಗ್ಲ ಮಾಧ್ಯಮವೇ ಬೇಕು ಎಂಬ ಇನ್ನೊಂದು ವಾದವಿದೆ. ಇವೆರಡರ ನಡುವೆ ಸರಕಾರವು ೪ನೆಯ ತರಗತಿಯವರೆಗೆ ಕಡ್ಡಾಯ ಕನ್ನಡ ಮಾಧ್ಯಮವೆಂದೂ ಅಥವಾ ಮಾತೃಭಾಷೆಯಲ್ಲೇ ಶಿಕ್ಷಣ ಕಡ್ಡಾಯವೆಂದೂ, ತದನಂತರ ವಿದ್ಯಾರ್ಥಿಯ ಆಯ್ಕೆ ಎಂಬ ನಿಲುವನ್ನು ತಾಳಿ ಹೊಸದೊಂದು ಮಾರ್ಗವನ್ನು ಕಂಡುಕೊಂಡಿದ್ದರೂ ಮಾಧ್ಯಮದ ವಿಚಾರವಾಗಿ ಚರ್ಚೆ ನಡೆಯುತ್ತಲೇ ಇದೆ. ರಾಜ್ಯ ಹಾಗೂ ಅಂತಾರಾಷ್ಟ್ರೀಯ ಭಾಷೆಗಳ ನಡುವೆ ರಾಷ್ಟ್ರ ಭಾಷೆಯಾದ ಹಿಂದಿಯೂ ಬಂದು ಸೇರಿಕೊಂಡಿದೆ.

"೧೯೫೨ರ ಪ್ರೌಢಶಾಲಾ ಶಿಕ್ಷಣ ಆಯೋಗವು ಶಿಕ್ಷಣ ಕ್ರಮದಲ್ಲಿ ಅಳವಡಿಸಬೇಕಾದ ಐದು ನಿಶ್ಚಿತ ಭಾಷೆಗಳನ್ನು ಸೂಚಿಸಿತು. "ಮಾತೃಭಾಷೆಯ ಕಲಿಕೆಯ ಜೊತೆ ಜೊತೆಗೆ ಉಳಿದ ಎರಡು ಭಾಷೆಗಳ ಕಲಿಕೆಯು ವಿದ್ಯಾರ್ಥಿಗೆ ಭಾರವಾದೀತು. ಆದರೂ ವಿವಿಧ ಭಾಷೆಗಳ ನಾಡಾದ ನಮ್ಮ ದೇಶದಲ್ಲಿ ಆ ಹೊರೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ನಾವು ನಮ್ಮ ಸಮೃದ್ಧ ಭಾಷಿಕ ಪರಂಪರೆಗೆ ಈ ರೀತಿಯ ಬೆಲೆ ಕೊಡಲೇಬೇಕು" ಎಂದು ಆಯೋಗವು ಘೋಷಿಸಿತು. ೧೯೫೬ರಲ್ಲಿ ಶಿಕ್ಷಣದ ಕೇಂದ್ರೀಯ ಸಲಹಾ ಸಮಿತಿಯು ದೇಶದ ಆವಶ್ಯಕತೆ ಮತ್ತು ಸಂವಿಧಾನದ ನಿಯಮಗಳನ್ನು ಅವಲಂಬಿಸಿ ತ್ರಿಭಾಷಾ ಸೂತ್ರದ ಸ್ಪಷ್ಟ ಚಿತ್ರಣ

ನೀಡಿತು. ೧೯೬೧ರಲ್ಲಿ ಮುಖ್ಯಮಂತ್ರಿಗಳ ಸಮಾವೇಶವು ಈ ಸೂತ್ರವನ್ನು ಸರಳೀಕರಿಸಿತು. ೧೯೫೬ರ ಕೇಂದ್ರೀಯ ಶಿಕ್ಷಣ ಸಲಹಾ ಸಮಿತಿ ಮತ್ತು ೧೯೬೧ರ ಮುಖ್ಯಮಂತ್ರಿಗಳ ಸಮಾವೇಶವು ಮಾಡಿದ ಶಿಫಾರಸನ್ನು ೧೯೬೪-೬೬ರ ಶಿಕ್ಷಣ ಆಯೋಗವು "ಈ ತ್ರಿಭಾಷಾ ಸೂತ್ರವು ಶೈಕ್ಷಣಿಕವಾಗಿರದೆ ರಾಜಕೀಯ ಮತ್ತು ಸಾಮಾಜಿಕ ಉದ್ದೇಶಗಳಿಂದ ಕೂಡಿದೆ" ಎಂದು ಟೀಕಿಸಿತು ಎಂಬುದೂ ಗಮನಾರ್ಹ.

೨೫-೧-೮೯ರಂದು ಕರ್ನಾಟಕದ ಉಚ್ಚ ನ್ಯಾಯಾಲಯವು ಪ್ರೌಢಶಾಲೆಗಳಲ್ಲಿ ಕನ್ನಡವನ್ನು ಕಡ್ಡಾಯ ವಿಷಯವನ್ನಾಗಿ ಮಾಡುವುದರ ಪರವಾಗಿ ಸೂಚಿಸಿತು. ನ್ಯಾಯಾಲಯದ ಆಜ್ಞೆಯಲ್ಲಿ ಕನ್ನಡವನ್ನು ಪ್ರಥಮೇತರ ಭಾಷಾ ಸ್ಥಾನದಲ್ಲಿ ಕಡ್ಡಾಯ ಮಾಡಲು ಅವಕಾಶವನ್ನು ಕಲ್ಪಿಸಲಾಯಿತು. ಪ್ರಾಥಮಿಕ ಹಂತದಲ್ಲಿ ಯಾವ ತರಗತಿಯಿಂದ ಕನ್ನಡ ವಿದ್ಯಾರ್ಥಿಗಳಿಗೆ ಕನ್ನಡವಲ್ಲದೆ ಇನ್ನೊಂದು ಭಾಷೆಯನ್ನು ಕಲಿಸಲಾಗುತ್ತದೋ ಆ ತರಗತಿಯಿಂದ ಕನ್ನಡೇತರ ವಿದ್ಯಾರ್ಥಿಗಳಿಗೆ ಕನ್ನಡವನ್ನು ಕಡ್ಡಾಯವಾಗಿ ಕಲಿಸುವ ಆದೇಶವನ್ನು ಹೊರಡಿಸಲು ಸರಕಾರಕ್ಕೆ ಅಧಿಕಾರವಿದೆಯೆಂದು ಹೇಳಿತು. ಅಂದರೆ ಉನ್ನತ ನ್ಯಾಯಾಲಯದ ತೀರ್ಪಿನಂತೆ ಪ್ರೌಢಶಾಲೆಗಳಲ್ಲಿ ಕನ್ನಡವನ್ನು ದ್ವಿತೀಯ, ತೃತೀಯ ಭಾಷೆಯಾಗಿ ಹಾಗೂ ಪ್ರಾಥಮಿಕ ಹಂತದಲ್ಲಿ ಐದನೆಯ ತರಗತಿಯಿಂದ ಕಡ್ಡಾಯವಾಗಿ ಕಲಿಸಬಹುದು; ಏಕೈಕ ಕಡ್ಡಾಯ ಪ್ರಥಮ ಭಾಷೆಯಾಗಿ ಅಲ್ಲ"[೩]. ಜಾಗತಿಕ ನೆಲೆಯ ಅವಕಾಶಗಳಿಗೆ ಅನುವು ಮಾಡಿಕೊಡುವ ಭಾಷೆಯಾಗಿರುವುದರಿಂದ ಆಂಗ್ಲ ಭಾಷೆಯನ್ನು ಕಲಿಸಬೇಕು, ಇಲ್ಲದಿದ್ದಲ್ಲಿ ಮಕ್ಕಳು ಅವಕಾಶ ವಂಚಿತರಾಗುತ್ತಾರೆಂಬ ಧೋರಣೆಯಿಂದಾಗಿ ಆಂಗ್ಲ ಭಾಷೆಯನ್ನು ಅಳವಡಿಸಲಾಗಿದೆ. ರಾಷ್ಟ್ರೀಯತೆಯ ಹಾಗೂ ಏಕತೆಯ ತತ್ವಗಳನ್ನು ಬಿತ್ತಿದಂತಾಗುತ್ತದೆಯೆಂಬ ನೆಲೆಯಲ್ಲಿ ರಾಷ್ಟ್ರಭಾಷೆ ಹಿಂದಿಯನ್ನು ಅಳವಡಿಸಲಾಗಿದೆ. ಈ ವಿಚಾರಧಾರೆಗಳು ಶೈಕ್ಷಣಿಕ ತತ್ವಗಳನ್ನು ಆಧರಿಸಿಲ್ಲವೆಂಬುದು ಬಹು ಮುಖ್ಯ ಅಂಶ. ಪ್ರಸ್ತುತ ತ್ರಿಭಾಷಾ ಸೂತ್ರದ ಅಳವಡಿಕೆಯ ಸ್ಥಿತಿಯನ್ನು ನೋಡಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಈ ನಿಟ್ಟಿನಲ್ಲಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತ್ರಿಭಾಷಾ ಸೂತ್ರದ ಇತಿ ಮಿತಿಯನ್ನು ತಿಳಿಯಲು ಶಿಕ್ಷಕರೊಂದಿಗೆ, ಪೋಷಕರೊಂದಿಗೆ ಹಾಗೂ ವಿದ್ಯಾರ್ಥಿಗಳೊಂದಿಗೆ ಅನೌಪಚಾರಿಕವಾದ ಸಂಭಾಷಣೆ ಮತ್ತು ಅವಲೋಕನ ವಿಧಾನಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ವಿದ್ಯಾರ್ಥಿಗಳಿಗೆ ಇತ್ತ ಮಾತೃಭಾಷೆಯಾದ ಕನ್ನಡದ ಪ್ರಾಥಮಿಕ ಕೌಶಲದ ಕಲಿಕೆಯಲ್ಲೂ ಪರಿಪೂರ್ಣತೆ ಇಲ್ಲ. ಅತ್ತ ರಾಷ್ಟ್ರಭಾಷೆಯಾದ ಹಿಂದಿಯ ಭಾಷಾ ಕೌಶಲಗಳಲ್ಲೂ ಪಕ್ವತೆಯಿಲ್ಲ. ಉಚ್ಚಾರಣೆಗೂ, ಬರವಣಿಗೆಗೂ ಹೊಂದಿಕೆಯಿರದ ಆಂಗ್ಲಬಾಷೆ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಕಬ್ಬಿಣದ ಕಡಲೆಯಾಗುತ್ತಿದೆ. ಕನ್ನಡ ಮಾಧ್ಯಮದ ಹೆಚ್ಚಿನ ವಿದ್ಯಾರ್ಥಿಗಳು ಹಿಂದಿ ಹಾಗೂ ಆಂಗ್ಲಭಾಷೆಗಳನ್ನು ಕೇವಲ ಉತ್ತೀರ್ಣತೆಯ ಮಾನದಂಡವಾದ ಮೂವತ್ತೈದು ಅಂಕಗಳಿಗಾಗಿ ಮಾತ್ರ ಕಲಿಯುತ್ತಿರುವ ಚಿತ್ರಣ ಕಂಡುಬರುತ್ತಿದೆ.

ವಿದ್ಯಾರ್ಥಿಗಳಲ್ಲಿ ಏಕಕಾಲಕ್ಕೆ ಮೂರು - ನಾಲ್ಕು ಭಾಷೆಯನ್ನು ಕಲಿಯುವ ಸಾಮರ್ಥ್ಯವಿರುತ್ತದೆ; ಇಲ್ಲವೆಂದಲ್ಲ. ಆದರೆ ಕಲಿಸುವ ವಿಧಾನ ಹಾಗೂ ಕಲಿಕೆಯ ಸನ್ನಿವೇಶವನ್ನು ಇದು ಅವಲಂಬಿಸಿರುತ್ತದೆ ಎಂಬುದು ಮುಖ್ಯವಾಗಿ ಗಮನಿಸಬೇಕಾದ ವಿಚಾರ. ಕರಾವಳಿಯಲ್ಲಿ ಕೊಂಕಣಿ, ಮರಾಠಿ, ಬ್ಯಾರಿ, ಉರ್ದು ಇತ್ಯಾದಿ ಮನೆಮಾತಾದ ಮಕ್ಕಳು ಕನ್ನಡ, ತುಳು ಭಾಷೆಯನ್ನೂ ಜೊತೆ ಜೊತೆಯಲ್ಲಿಯೇ ಕಲಿತಿರುತ್ತಾರೆ.

ಭಾಷೆಯನ್ನು ಬದುಕಿನ ಭಾಗವಾಗುವಂತೆ ಕಲಿಸಿದರೆ ಮಾತ್ರ ಮಕ್ಕಳು ಅದನ್ನು ಸುಲಭವಾಗಿ ಕಲಿಯುತ್ತಾರೆ. ತ್ರಿಭಾಷಾ ಸೂತ್ರದ ಪದ್ಧತಿಯ ಹಿನ್ನೆಲೆಯಲ್ಲಿ ಮೂರು ಭಾಷೆಗಳನ್ನು ಕಲಿಸಲಾಗುತ್ತಿದೆ. ಕಲಿಕೆಯ ವಾತಾವರಣ ಮಾತ್ರ ಅತ್ಯಂತ ಕೃತಕವಾಗಿದೆ. ಕಲ್ಪಿತ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪಠ್ಯಪುಸ್ತಕಗಳನ್ನು ರಚಿಸಲಾಗಿದೆ. ಪಠ್ಯಪುಸ್ತಕದಲ್ಲಿನ ಪಾಠಗಳನ್ನು ಇಲಾಖೆಯು ನಿಗದಿಗೊಳಿಸಿದ ಅವಧಿಯಲ್ಲಿ ಮುಗಿಸುವ ಧೋರಣೆಗಳೇ ಮುಖ್ಯವಾಗಿವೆ. ವಿದ್ಯಾರ್ಥಿಗಳಿಗೆ ಸಿದ್ಧಿಸಬೇಕಾದ ಕೌಶಲಗಳ ಕುರಿತು ಯಾವ ಮೌಲ್ಯಮಾಪಕಗಳೂ ಇಲ್ಲ. ನಿಗದಿತ ಪ್ರಶ್ನೆಗಳಿಗೆ ನಿಗದಿತ ಉತ್ತರಗಳನ್ನು ಬರೆಯುವುದೇ ಕಲಿಕೆ ಎಂಬಂಥಹ ಸನ್ನಿವೇಶವಿದೆ. ವಿದ್ಯಾರ್ಥಿಗಳಿಗಾಗಲೀ, ಅಧ್ಯಾಪಕರಿಗಾಗಲೀ ಪಠ್ಯ ಅಥವಾ ಪಾಠಗಳ, ವಿಷಯ, ವಿಚಾರಗಳ ಆಯ್ಕೆಯ ಸ್ವಾತಂತ್ರ್ಯವಿಲ್ಲ. ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕೆಂಬ ಧೋರಣೆಯ ಒತ್ತಡದಲ್ಲಿ ಬೋಧನೆ ಮತ್ತು ಕಲಿಕೆ ಸಾಗುತ್ತಿದೆ. ಈ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳ ಶಕ್ತಿ ಹಾಗೂ ಕಾಲ ಎರಡೂ ವ್ಯರ್ಥವಾಗುತ್ತಿದೆ. ಪಠ್ಯಾಂಶಗಳಿಂದ ವಿದ್ಯಾರ್ಥಿಗಳು ಏನನ್ನು ತಿಳಿಯಬೇಕೋ ಅದನ್ನು ತಿಳಿಯದಿದ್ದರೆ, ಯಾವ ಸಾಮರ್ಥ್ಯಗಳನ್ನು ಗಳಿಸಿಕೊಳ್ಳಬೇಕೋ ಅಂತಹ ಸಾಮರ್ಥ್ಯಗಳನ್ನು ಗಳಿಸಿಕೊಳ್ಳದಿದ್ದರೆ ಉದ್ದೇಶ ವ್ಯರ್ಥವಾಗುತ್ತದೆ.

### ಅ) ಟಿಪ್ಪಣಿ ಆಧಾರಿತ ಕಲಿಕೆ:

ಸಾರ್ವಜನಿಕ ಶಿಕ್ಷಣ ಇಲಾಖೆಯು ರಾಷ್ಟ್ರೀಯ ಪಠ್ಯಕ್ರಮದ ಹಿನ್ನೆಲೆಯಲ್ಲಿ ಪ್ರೌಢಶಾಲಾ ತರಗತಿಗಳಿಗೆ ಅಳವಡಿಸಿರುವ ತ್ರಿಭಾಷಾ ಸೂತ್ರದ ಅಳವಡಿಕೆಯ ಕುರಿತು ತರಗತಿಗಳಲ್ಲಿ ವಿದ್ಯಾರ್ಥಿಗಳೊಂದಿಗೆ ಚರ್ಚಿಸಲಾಗಿದೆ. ಆಂಗ್ಲ ಹಾಗೂ ಹಿಂದಿ ಭಾಷೆಗಳನ್ನು ಬೋಧಿಸುವ ಸಂದರ್ಭಗಳು, ಟಿಪ್ಪಣಿಯನ್ನು ಕೊಡುವ ಬಗೆ, ಭಾಷಾ ಚಟುವಟಿಕೆಗಳನ್ನು ಹಮ್ಮಿಕೊಳ್ಳುವ ಬಗೆ, ಕೌಶಲಗಳನ್ನು ಕಲಿಸುವ ರೀತಿಗಳ ಕುರಿತು ಮಾಹಿತಿ ಸಂಗ್ರಹಿಸಲಾಗಿದೆ. ಅವಲೋಕನ ವಿಧಾನದಿಂದಲೂ ಕೆಲವು ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ತ್ರಿಭಾಷಾ ಸೂತ್ರದ ಅಳವಡಿಕೆಯ ಹಿನ್ನೆಲೆಯಲ್ಲಿ ಸಂಗ್ರಹಿಸಿದ ಮಾಹಿತಿಗಳ ಆಧಾರದ ಮೇಲೆ ಈ ಕೆಳಗಿನ ಅಂಶಗಳನ್ನು ಗುರುತಿಸಲಾಗಿದೆ.

- ತ್ರಿಭಾಷಾ ಸೂತ್ರದ ಹಿನ್ನೆಲೆಯಲ್ಲಿ ಹಿಂದಿ ಹಾಗೂ ಆಂಗ್ಲ ಭಾಷೆಗಳನ್ನು ಕನ್ನಡದಂತೆಯೇ ಬೋಧಿಸಲಾಗುತ್ತಿದೆ.
- ಪಾಠ ಮತ್ತು ಪದ್ಯ ಬೋಧನಾ ವಿಧಾನಗಳು ಉಪನ್ಯಾಸ ಮಾದರಿಯಲ್ಲಿ ನಡೆಯುತ್ತಿವೆ.
- ಇಂಗ್ಲಿಷ್ ಹಾಗೂ ಹಿಂದಿ ಭಾಷಾ ಶಿಕ್ಷಕರಿಗೂ ಕೂಡ ಪ್ರತ್ಯೇಕವಾದ ಹಾಗೂ ವಿಶೇಷವಾದ ತರಬೇತಿಗಳಿಲ್ಲ. ಕನ್ನಡ ಭಾಷಾ ಬೋಧನೆಯ ಕುರಿತು ಇರುವ ತರಬೇತಿಯಂತೆಯೇ ಉಳಿದ ಭಾಷೆಗಳ ತರಬೇತಿಗಳಿವೆ.
- ಕರ್ನಾಟಕದಲ್ಲಿನ ಕನ್ನಡ ಮಾತೃಭಾಷೆಯಾದ ವಿದ್ಯಾರ್ಥಿಗಳ ಕನ್ನಡ ಕಲಿಕಾ ಸನ್ನಿವೇಶಕ್ಕೂ ಅದೇ ವಿದ್ಯಾರ್ಥಿಗಳು ಇಂಗ್ಲಿಷ್ ಭಾಷೆಯನ್ನು ಕಲಿಯುವ ಸನ್ನಿವೇಶಕ್ಕೂ ಬಹಳ ವ್ಯತ್ಯಾಸವಿದೆ. ಹೊಸ ಭಾಷೆಯನ್ನು ಕಲಿಸುವ ಸಂದರ್ಭಗಳಲ್ಲಿ ವಿಶೇಷವಾದ ಪರಿಣತಿಯಿರುವ ಹಾಗೂ ವಿಶೇಷ ತರಬೇತಿಗಳನ್ನು ಪಡೆದಿರುವ ಶಿಕ್ಷಕರ ಆವಶ್ಯಕತೆಯಿದೆ. ಶಿಕ್ಷಣ ಇಲಾಖೆಯು ಈ ಕುರಿತು ಯಾವುದೇ ಪೂರ್ವ ತಯಾರಿಗಳನ್ನು ಮಾಡಿಕೊಳ್ಳದೆಯೇ ತ್ರಿಭಾಷಾ ಸೂತ್ರವನ್ನು ಅಳವಡಿಸಿಕೊಂಡಿದೆ.
- ಬೋಧನಾ ವಿಧಾನವು ಅತ್ಯಂತ ಸಾಂಪ್ರದಾಯಿಕ ಪದ್ಧತಿಯಲ್ಲಯೇ ನಡೆಯುತ್ತಿದ್ದು ಯಾವುದೇ ಆಧುನಿಕ ಬೋಧನಾ ತಂತ್ರಗಳನ್ನು ಅಳವಡಿಸಿಕೊಂಡಿರುವುದಿಲ್ಲ.
- ಪಾಠ ಮತ್ತು ಪದ್ಯಗಳನ್ನು ಮಕ್ಕಳಿಂದ ಓದಿಸುವುದು, ಕಠಿಣ ಪದಗಳ ಅರ್ಥವನ್ನು ಕನ್ನಡದಲ್ಲಿ ಬರೆಸುವುದು. ಪಾಠವನ್ನು ವಿವರಿಸುವುದು. ಟಿಪ್ಪಣಿ ಪುಸ್ತಕದಲ್ಲಿ ಪ್ರಶ್ನೋತ್ತರಗಳನ್ನು ಬರೆಸುವುದು. ಪರೀಕ್ಷೆಗಳನ್ನು ನಡೆಸುವುದು. ಮೌಲ್ಯಮಾಪನ ಮಾಡಿ ಉತ್ತೀರ್ಣರಾದಲ್ಲಿ ಮುಂದಿನ ತರಗತಿಗೆ ಕಳುಹಿಸುವುದು. ಇದು ಹೆಚ್ಚಿನ ಪ್ರೌಢಶಾಲೆಗಳಲ್ಲಿ ನಡೆಯುವ ವಿಧಾನವಾಗಿದೆ.
- ಹಿಂದಿನ ವರ್ಷದ ಟಿಪ್ಪಣಿ ಪುಸ್ತಕದ ಪ್ರಶ್ನೋತ್ತರಗಳನ್ನು ಪ್ರಸ್ತುತ ವರ್ಷದಲ್ಲೂ ಬರೆಸುವುದು. ವಿದ್ಯಾರ್ಥಿಗಳು ಅದನ್ನು ಕಂಠಪಾಠಮಾಡುವುದು ಸಾಮಾನ್ಯ ವಿಚಾರವಾಗಿದೆ.
- ಓದು ಮತ್ತು ಬರಹಕ್ಕೆ ಹೆಚ್ಚಿನ ಮಹತ್ವವನ್ನು ನೀಡಲಾಗುತ್ತಿದೆ. ಆಲಿಸುವಿಕೆ, ಮಾತನಾಡುವಿಕೆ, ಚಟುವಟಿಕೆಗಳು ಗೌಣವಾಗಿವೆ.
- ಕೆಲವು ಶಾಲೆಗಳಲ್ಲಿ ಶಿಕ್ಷಕರು ಟಿಪ್ಪಣಿಯನ್ನು ಬರೆಸುತ್ತಾರೆ. ಕಠಿಣ ಪದಗಳನ್ನು ಬರೆದು ಅರ್ಥವನ್ನು ಕನ್ನಡದಲ್ಲಿ ಬರೆಯುತ್ತಾರೆ.

- ಸುಂದರ ಕೈ ಬರಹವಿರುವ ವಿದ್ಯಾರ್ಥಿಗಳಿಗೆ ಹಿಂದಿನ ವರ್ಷದ ಉತ್ತಮ ಅಂಕ ಪಡೆದ ವಿದ್ಯಾರ್ಥಿಗಳ ಟಿಪ್ಪಣಿ ಪುಸ್ತಕವನ್ನು ಕೊಟ್ಟು ಕರಿಹಲಗೆಯ ಮೇಲೆ ಬರೆಸಲಾಗುತ್ತದೆ.
- ವಿದ್ಯಾರ್ಥಿಯೊಬ್ಬ ಟಿಪ್ಪಣಿ ಪುಸ್ತಕದ ಪ್ರಶ್ನೋತ್ತರಗಳನ್ನು ಓದಿ ಹೇಳುತ್ತಾನೆ. ಉಳಿದವರು ಬರೆದುಕೊಳ್ಳುತ್ತಾರೆ.
- ಪಠ್ಯದ ಯಾವ ಕಂಡಿಕೆಯಲ್ಲಿ ಉತ್ತರವಿದೆ ಎಂಬುದನ್ನು ಅಧ್ಯಾಪಕರು ಗುರುತುಹಾಕಿಸುತ್ತಾರೆ. ವಿದ್ಯಾರ್ಥಿಗಳು ಮನೆಪಾಠವಾಗಿ ಉತ್ತರಗಳನ್ನು ಬರೆಯಬೇಕಾಗುತ್ತದೆ. (ಇಂತಹ ಸಮಯದಲ್ಲಿ ಕೆಲವು ವಿದ್ಯಾರ್ಥಿಗಳು ಹಿರಿಯ ವಿದ್ಯಾರ್ಥಿಗಳ ಟಿಪ್ಪಣಿ ಪುಸ್ತಕವನ್ನು ತೆಗೆದಿಟ್ಟುಕೊಂಡು ಅದನ್ನು ನೋಡಿ ಬರೆಯುತ್ತಾರೆ. ಕೆಲವರು ಗೈಡ್‌ಗಳ ಮೊರೆಹೋಗುತ್ತಾರೆ. ಕೆಲವರು ಬೆಳಗಿನ ಪ್ರಾರ್ಥನೆಯ ಅವಧಿಗೆ ಮೊದಲು ಇತರ ವಿದ್ಯಾರ್ಥಿಗಳು ಬರೆದಿರುವುದನ್ನು ನೋಡಿ ಬರೆದುಕೊಳ್ಳುತ್ತಾರೆ.)
- ಭೇಟಿ ನೀಡಿದ ಯಾವ ಶಾಲೆಯಲ್ಲೂ ಆಂಗ್ಲ ಭಾಷೆಯ ಪದ್ಯಗಳನ್ನು ಹಾಡುವ ಪ್ರಯತ್ನವನ್ನು ಮಾಡಿಲ್ಲ.
- ಹಿಂದಿ ಪದ್ಯಗಳನ್ನು ಕೆಲವು ಶಾಲೆಗಳಲ್ಲಿ ಕೆಲವು ವಿದ್ಯಾರ್ಥಿಗಳು ಹಾಡಿದ್ದಾರೆ.
- ಬೇಟಿ ನೀಡಿದ ಯಾವ ಶಾಲೆಯಲ್ಲೂ ಆಂಗ್ಲ ಮತ್ತು ಹಿಂದಿ ಭಾಷೆಯ ನಾಟಕಗಳನ್ನು ಮಾಡಿಲ್ಲ.
- ಬೇಟಿ ನೀಡಿದ ಯಾವ ಶಾಲೆಯಲ್ಲೂ ಆಂಗ್ಲ ಭಾಷೆ ಅಥವಾ ಹಿಂದಿಯನ್ನು ಮಾತನಾಡುವ ಭಾಷೆಯನ್ನಾಗಿ ಬಳಸುತ್ತಿಲ್ಲ.

ತ್ರಿಭಾಷಾ ಸೂತ್ರದ ಹಿನ್ನೆಲೆಯಲ್ಲಿ ರಾಷ್ಟ್ರ ಹಾಗೂ ಅಂತಾರಾಷ್ಟ್ರೀಯ ತತ್ವವಿದೆ ಎಂಬ ಚರ್ಚೆ ಹಿಂದಿನಿಂದಲೂ ನಡೆದು ಬಂದಿದೆ. ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ತ್ರಿಭಾಷಾ ಸೂತ್ರದ ಅವಶ್ಯಕತೆಯ ಕುರಿತು ಚರ್ಚಿಸಿದಾಗ, ಹಿಂದಿ ರಾಷ್ಟ್ರಭಾಷೆಯಾದ್ದರಿಂದ ಅದು ಬೇಕು. ಅಂತಾರಾಷ್ಟ್ರೀಯ ಭಾಷೆಯಾದ್ದರಿಂದ ಆಂಗ್ಲ ಭಾಷೆಯೂ ಬೇಕು ಎಂಬ ಧೋರಣೆ ಶಿಕ್ಷಣ ಇಲಾಖೆಯಲ್ಲಿದೆ. ಕನ್ನಡ ಮಾಧ್ಯಮದಲ್ಲಿ ಓದುತ್ತಿರುವ ವಿದ್ಯಾರ್ಥಿಗಳ ಬಹಳಷ್ಟು ಪೋಷಕರಿಗೆ ಇದರ ಅರಿವಿಲ್ಲ. ನಾವಂತೂ ಕಲಿಯಲಿಲ್ಲ. ಮಕ್ಕಳಾದರೂ ಕಲಿಯಲಿ ಎಂಬ ಆಶಾಭಾವ ಹೆಚ್ಚಿನ ಪೋಷಕರಲ್ಲಿದೆ. ಕೆಲವು ಶಿಕ್ಷಕರು ಹಾಗೂ ಬೆರಳೆಣಿಕೆಯಷ್ಟು ಪೋಷಕರು ಮಾತ್ರ ಪ್ರೌಢಶಾಲಾ ಹಂತದಲ್ಲಿ ತ್ರಿಭಾಷಾ ಸೂತ್ರವನ್ನು ಅಳವಡಿಸಿರುವುದರ ಕುರಿತು ಕೆಲವೊಂದು ಗಂಭೀರ ಪ್ರಶ್ನೆಗಳ ಕುರಿತು ತಿಳಿಸಿದ್ದಾರೆ. ಅವರು ಕೇಳಿರುವ ಪ್ರಶ್ನೆಗಳನ್ನು ಯಥಾವತ್ತಾಗಿ ಇಲ್ಲಿ ಹೇಳಲಾಗಿದೆ.

- ಐದನೆಯ ತರಗತಿಯಿಂದ ಹತ್ತನೆಯ ತರಗತಿಯವರೆಗೆ ತ್ರಿಭಾಷಾ ಸೂತ್ರವಿದೆ. ನಂತರ ಪದವಿ ಪೂರ್ವ ತರಗತಿಗಾಗಲೀ, ಪದವಿ ತರಗತಿಗಾಗಲೀ ಈ ನಿಯಮವಿಲ್ಲ ಈ ತಾರತಮ್ಯ ಏಕೆ?
- ರಾಷ್ಟ್ರೀಯ ಭಾಷೆಯನ್ನು ಹತ್ತನೆಯ ತರಗತಿಯೊಳಗೆ ಪೂರ್ಣವಾಗಿ ಕಲಿಸಲಾಗಿದೆಯೇ? ಮುಂದಿನ ತರಗತಿಗಳಲ್ಲಿ ಅದರ ಆವಶ್ಯಕತೆಯಿಲ್ಲವೇ?
- ವಿದ್ಯಾರ್ಥಿಗಳ ಹಿತದ ಉದ್ದೇಶವೆಂದಾದರೆ ಪದವಿಪೂರ್ವ ಹಾಗೂ ಪದವಿ ತರಗತಿಗಳಿಗೆ ಏಕಿಲ್ಲ? ಪದವಿ ಪೂರ್ವ ಹಾಗೂ ಪದವಿ ತರಗತಿಗಳಿಗಿಲ್ಲದಿರುವ ತ್ರಿಭಾಷಾ ಸೂತ್ರದ ಹೊರೆ ಐದನೆಯ ತರಗತಿಯಂತಹ ಪುಟ್ಟ ಮಕ್ಕಳಿಗೆ ಈ ವ್ಯವಸ್ಥೆ ಏಕೆ? ಪುಟ್ಟ ಮಕ್ಕಳ ಮೇಲೆ ಇದು ದಬ್ಬಾಳಿಕೆಯಲ್ಲವೆ?
- ಮಕ್ಕಳಲ್ಲಿ ಮಾತೃಭಾಷಾ ಕಲಿಕೆಯ ಮೂಲ ಕೌಶಲಗಳೇ ಸಿದ್ಧಿಸದಿರುವಾಗ ಅನ್ಯ ಭಾಷೆಗಳನ್ನು ಹೇರುವುದರಿಂದ ಅವರ ಮಾತೃಭಾಷಾ ಕಲಿಕೆಗೆ ತೊಂದರೆ ಮಾಡಿದಂತಾಗಲಿಲ್ಲವೆ? ಇಲಾಖೆಯೇ ಮಕ್ಕಳ ಹಕ್ಕನ್ನು ಮೀರಿದಂತಾಗುವುದಿಲ್ಲವೆ?
- ಮಕ್ಕಳು ಆಂಗ್ಲ ಭಾಷೆಯಲ್ಲಿಯೋ ಹಿಂದಿ ಭಾಷೆಯಲ್ಲಿಯೋ ಸಾಹಿತ್ಯ ರಚಿಸಬೇಕಾಗಿಲ್ಲ. ನಿರರ್ಗಳವಾಗಿ ಮಾತನಾಡುವಷ್ಟು ಕಲಿತರೆ ಸಾಕು. ಹೀಗಿರುವಾಗ ಹಿಂದಿ ಅಥವಾ ಆಂಗ್ಲ ಭಾಷೆಯ ಸಾಹಿತ್ಯ ಹಾಗೂ ವ್ಯಾಕರಣವನ್ನೆಲ್ಲಾ ಪರಿಚಯಿಸುವ ಅಗತ್ಯವಿದೆಯೇ?
- ಈ ನೆಲದ ಮಕ್ಕಳು ಇಲ್ಲಿನ ಮಾತೃಭಾಷೆಯಲ್ಲಿಯೇ ಓದಲು ಬರೆಯಲು ಹಿಂದುಳಿದಿದ್ದಾರೆ. ಇನ್ನು ಭಾಷೆಗಳ ಹಿನ್ನೆಲೆಯನ್ನೇ ಅರಿಯದ ಭಾಷೆಗಳನ್ನು ಎಳೆಯ ಮಕ್ಕಳ ಮೇಲೆ ಹೇರುವುದು ಎಷ್ಟರಮಟ್ಟಿಗೆ ಸೂಕ್ತ?
- ಐದನೆಯ ತರಗತಿಯಿಂದ ಆಂಗ್ಲ ಭಾಷೆಯನ್ನು ಕಲಿಸುತ್ತಿದ್ದರೂ ಪದವಿಪೂರ್ವ ಹಂತದ ಆಂಗ್ಲ ಪಠ್ಯವನ್ನು ಓದಲು, ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತಿಲ್ಲವೆಂದರೆ, ಆಂಗ್ಲ ಭಾಷೆಯಲ್ಲಿ ಮಾತನಾಡಲು ಬರುತ್ತಿಲ್ಲವೆಂದಾದರೆ ಅಂತಹ ಹೊರೆಯಿಂದ ಏನು ಪ್ರಯೋಜನ?
- ಇಂಗ್ಲಿಷ್ ಹಾಗೂ ಹಿಂದಿಯಲ್ಲಿ ಉತ್ತೀರ್ಣತೆ ಮಾನದಂಡವಾದ ಮೂವತ್ತೈದು ಅಂಕಗಳನ್ನು ಪಡೆದುಕೊಳ್ಳುವುದು ಅನಿವಾರ್ಯ. ಒಂದು ಪತ್ರಲೇಖನ, ಮೂರು ಪದ್ಯ, ಒಂದಷ್ಟು ಪ್ರಶ್ನೋತ್ತರಗಳನ್ನು ಕಂಠಪಾಠಮಾಡಿಕೊಂಡರೆ ಉಳಿದಂತೆ ವಸ್ತುನಿಷ್ಠ ಪ್ರಶ್ನೆಗಳು ಮೂವತ್ತೈದು ಅಂಕ ಪಡೆದು ಉತ್ತೀರ್ಣನಾಗಲು ಸಹಾಯಮಾಡುತ್ತವೆ!
- ಪದವಿ ತರಗತಿಗಳಿಗೆ ತ್ರಿಭಾಷಾ ಸೂತ್ರ ಜಾರಿಗೆ ತಂದರೆ ಅವರು ಬಲವಂತದ ಹೇರಿಕೆಯ ಕುರಿತು ದನಿಯೆತ್ತುತ್ತಾರೆ, ಮುಷ್ಕರ ಹೂಡುತ್ತಾರೆ. ಪ್ರಾಥಮಿಕ ಹಾಗೂ

ಪ್ರೌಢಶಾಲೆಯ ವಿದ್ಯಾರ್ಥಿಗಳು ಚಿಕ್ಕವರಾದ್ದರಿಂದ ಶಿಕ್ಷಣ ತಜ್ಞರ ಎಲ್ಲಾ ರೀತಿಯ ಪ್ರಯೋಗಗಳಿಗೆ ಬಲಿಪಶುಗಳಾಗುತ್ತಾರೆ.

- ಕೇಂದ್ರೀಯ ವಿದ್ಯಾಲಯಗಳಿಗೆ, ಐ.ಸಿ.ಎಸ್.ಸಿ ಶಾಲೆಗಳಿಗೆ ಇರದ ನಿಯಮಗಳು ನಮಗೆ ಮಾತ್ರ ಯಾಕೆ?
- ದ್ವಿತೀಯ, ತೃತೀಯ ಭಾಷೆ ಎಂಬ ವಿಭಾಗವಿದ್ದರೂ ಪಠ್ಯ ಪುಸ್ತಕದಲ್ಲಿ ಯಾವ ಬದಲಾವಣೆಯೂ ಇಲ್ಲವೇಕೆ?

ಶಿಕ್ಷಕರು ಹಾಗೂ ಸಾರ್ವಜನಿಕವಲಯದಲ್ಲಿ ತ್ರಿಭಾಷಾ ಸೂತ್ರದ ಕುರಿತು ಕೇಳಿಬರುತ್ತಿರುವ ಇಂತಹ ಪ್ರಶ್ನೆಗಳಿಗೆ ಇಲಾಖೆ ಸೂಕ್ತ ಉತ್ತರ ನೀಡಬೇಕಿದೆ. ತ್ರಿಭಾಷಾ ಸೂತ್ರದ ಕುರಿತು ಹೆಚ್ಚಿನ ಪೋಷಕರಿಗೆ ಅರಿವಿಲ್ಲ. ವಾಸ್ತವವಾಗಿ ಪೋಷಕರ ಆಶಾಭಾವಕ್ಕೆ ವಿರುದ್ಧವಾದ ಕಲಿಕಾ ವಾತಾವರಣವಿದೆ. ವಿದ್ಯಾರ್ಥಿಗಳಿಗೆ ಭಾಷಿಕ ಕನಿಷ್ಠ ಸಾಮರ್ಥ್ಯಗಳೇ ಸಿದ್ಧಿಸುತ್ತಿಲ್ಲ ಎಂಬ ಅರಿವು ಪೋಷಕರಿಗಿಲ್ಲ. ತಮ್ಮ ಮಕ್ಕಳು ಹೆಚ್ಚು ಅಂಕ ಪಡೆಯಬೇಕು ಎಂಬುದೇ ಅವರ ಕಟ್ಟ ಕಡೆಯ ನಿಲುವಾಗಿದೆ. ಮಕ್ಕಳ ಕಲಿಕಾ ಹಿನ್ನಡೆಗೆ ಶಿಕ್ಷಣ ಇಲಾಖೆಯ ಧೋರಣೆಗಳು, ಸಾಂಪ್ರದಾಯಿಕ ಬೋಧನಾ ವಿಧಾನಗಳು ಕಾರಣವಾಗುತ್ತಿವೆ ಎಂಬ ಅರಿವು ಅವರಿಗಿಲ್ಲ. ತಮ್ಮ ಮಕ್ಕಳು ಕಡಿಮೆ ಅಂಕ ಪಡೆದಾಗ ಶಾಲೆ ಸರಿಯಿಲ್ಲವೆಂದೋ, ಅಧ್ಯಾಪಕರು ಸರಿಯಿಲ್ಲವೆಂದೋ, ತಮ್ಮ ಮಕ್ಕಳೇ ಸರಿಯಾಗಿ ಓದುತ್ತಿಲ್ಲವೆಂದು ದೂರುವ ಸನ್ನಿವೇಶವಿದೆ.

೧೯೫೨ರ ಪ್ರೌಢಶಾಲಾ ಶಿಕ್ಷಣ ಆಯೋಗವು ಶಿಕ್ಷಣದಲ್ಲಿ ಅಳವಡಿಸಿಕೊಳ್ಳಬೇಕಾದ ಭಾಷೆಗಳನ್ನು ಸೂಚಿಸಿತು. ೧೯೫೬ ರಲ್ಲಿ ಶಿಕ್ಷಣದ ಕೇಂದ್ರಿಯ ಸಲಹಾ ಸಮಿತಿಯು ತ್ರಿಭಾಷಾ ಸೂತ್ರದ ಸ್ಪಷ್ಟ ಚಿತ್ರಣ ನೀಡಿತು. ತ್ರಿಭಾಷಾ ಸೂತ್ರವನ್ನು ಅಂದಿನಿಂದ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣದಲ್ಲಿ ಅಳವಡಿಸಿಕೊಂಡು ಬರಲಾಗಿದೆ. ಕರ್ನಾಟಕದಲ್ಲಿ ತ್ರಿಭಾಷಾ ಸೂತ್ರದ ಫಲಿತಗಳ ಬಗ್ಗೆ ಸಮಗ್ರವಾದ ಅಧ್ಯಯನ ನಡೆದಿಲ್ಲ. ಕನ್ನಡ ಮಾಧ್ಯಮದಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳ ಮೇಲೆ ತ್ರಿಭಾಷಾ ಸೂತ್ರ ಬೀರಿದ ಪ್ರಭಾವ, ಹಿಂದಿ ಹಾಗೂ ಆಂಗ್ಲ ಭಾಷೆಯ ಕಲಿಕಾ ಉದ್ದೇಶಗಳು, ಬೋಧನೆಯ ಗುರಿಗಳು ಎಷ್ಟರಮಟ್ಟಿಗೆ ಸಾಧಿತವಾಗಿವೆ ಎಂಬ ವಿಚಾರ, ಈ ಎರಡೂ ಭಾಷೆಗಳ ಕಲಿಕೆಯಿಂದಾಗಿ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳ ವ್ಯಕ್ತಿತ್ವದಲ್ಲಾದ ಗಮನಾರ್ಹ ಬದಲಾವಣೆ, ಆ ಎರಡು ಭಾಷೆಗಳ ಕೌಶಲಗಳನ್ನು ವಿದ್ಯಾರ್ಥಿಗಳು ಗಳಿಸಿಕೊಂಡಿರುವ ಮಟ್ಟ, ಹಿಂದಿ ಹಾಗೂ ಆಂಗ್ಲ ಭಾಷೆಯ ಕಲಿಕೆ ಹಾಗೂ ಬೋಧನೆಯ ಪ್ರಸ್ತುತ ಸನ್ನಿವೇಶ ಇತ್ಯಾದಿ ವಿಚಾರಗಳ ಕುರಿತು ಸಮಗ್ರ ಅಧ್ಯಯನ ನಡೆಯಬೇಕಿದೆ. ಈ ಕುರಿತು ಕಿರು ಸಂಶೋಧನೆಗಳನ್ನು ಹಾಗೂ ಸಮಗ್ರ ಸಂಶೋಧನೆಗಳನ್ನು ಪ್ರಾದೇಶಿಕವಾಗಿ ನಡೆಸಬೇಕಾದ ಅನಿವಾರ್ಯತೆಯಿದೆ.

## ೫.೫ ಪಂಚ ಭಾಷಾ ಸೂತ್ರ ಮತ್ತು ಷಡ್ ಭಾಷಾ ಸೂತ್ರ




ಕರ್ನಾಟಕದ ಹಲವು ಭಾಗಗಳಲ್ಲಿ ವಿದ್ಯಾರ್ಥಿಗಳ ಆಡುನುಡಿಯ ಕನ್ನಡವು ಗ್ರಂಥಸ್ಥ ಕನ್ನಡಕ್ಕಿಂತ ಬಹಳ ಭಿನ್ನವಾಗಿದೆ. ಗ್ರಂಥಸ್ಥ ಕನ್ನಡ ಅಂದರೆ, ಪಠ್ಯದಲ್ಲಿರುವ ಕನ್ನಡವನ್ನು ಮನೆಯಲ್ಲಾಗಲೀ, ದೈನಂದಿನ ವ್ಯವಹಾರಕ್ಕಾಗಲೀ ಬಳಸುವುದಿಲ್ಲ. ಕರ್ನಾಟಕದ ಸಂದರ್ಭದಲ್ಲಿ ಉತ್ತರ ಕರ್ನಾಟಕದ ಹಾಗೂ ಗ್ರಾಮೀಣ ಭಾಗದಲ್ಲಿ ಪ್ರಾಥಮಿಕ ಶಾಲಾ ಸನ್ನಿವೇಶಗಳಲ್ಲಿ ವಿದ್ಯಾರ್ಥಿಗಳು ಕನ್ನಡವನ್ನು ಅನ್ಯ ಭಾಷೆಯೆಂಬಂತೆ ಕಲಿಯುವ ಸನ್ನಿವೇಶಗಳಿವೆ. ತದನಂತರ ಸೇರ್ಪಡೆಗೊಳ್ಳುವ ಹಳಗನ್ನಡವು ಸಂಪೂರ್ಣ ಭಿನ್ನವಾಗಿರುವುದರಿಂದ ಅದು ಅವರಿಗೆ ಅತ್ಯಂತ ಅಪರಿಚಿತ ಭಾಷೆಯಾಗುತ್ತದೆ; ಹೊಸಭಾಷೆಯಾಗುತ್ತದೆ. ಇದರಿಂದಾಗಿ ಕನ್ನಡದಲ್ಲಿಯೇ ಮೂರು ವಿಭಿನ್ನ ನೆಲೆಗಳ ಕನ್ನಡವನ್ನು ನೋಡಬೇಕಾದ ಸ್ಥಿತಿ ವಿದ್ಯಾರ್ಥಿಗಳಿಗಿದೆ.

ಮನೆಯ ಕನ್ನಡ ಅಥವಾ ದೈನಂದಿನ ವ್ಯವಹಾರದ ಆಡುನುಡಿಯ ರೂಪದ ಕನ್ನಡ, ಪಠ್ಯದ ಸಂದರ್ಭದಲ್ಲಿನ ಗ್ರಂಥಸ್ಥ ಭಾಷೆ, ಪಠ್ಯದೊಳಗಿರುವ ಹಳಗನ್ನಡ, ಇದರೊಂದಿಗೆ ಇಂಗ್ಲೀಷ್ ಹಾಗೂ ಹಿಂದಿ ಈ ಎಲ್ಲಾ ಸಂದರ್ಭಗಳು ಸೇರಿ ಐದು ಭಾಷೆಗಳನ್ನು ಕಲಿಯುವ ಸನ್ನಿವೇಶದಲ್ಲಿ ಪ್ರೌಢಶಾಲೆಯ ಅನೇಕ ವಿದ್ಯಾರ್ಥಿಗಳಿದ್ದಾರೆ.




ಕನ್ನಡ ಮಾತೃಭಾಷೆಯಾಗಿರುವ ಹಿನ್ನೆಲೆಯ ವಿದ್ಯಾರ್ಥಿಗಳು ಐದು ಭಾಷೆಗಳನ್ನು ಕಲಿಯುವಂಥಹ ಸನ್ನಿವೇಶದಲ್ಲಿದ್ದಾರೆ, ಕನ್ನಡೇತರ ವಿದ್ಯಾರ್ಥಿಗಳು ಅಂದರೆ ಕೊಂಕಣಿ, ಮರಾಠಿ, ಉರ್ದು, ಮಲಯಾಳ, ಬ್ಯಾರಿ, ತೆಲುಗು, ತಮಿಳು, ತುಳು ಇತ್ಯಾದಿ ಭಾಷೆಗಳು ಮಾತೃಭಾಷೆಯಾಗಿರುವ ವಿದ್ಯಾರ್ಥಿಗಳು ಆರು ಭಾಷೆಗಳನ್ನು ಕಲಿಯುವ ಹಿನ್ನೆಲೆಯವರಾಗುತ್ತಾರೆ. ಇಷ್ಟೊಂದು ಭಿನ್ನತೆ ಇರುವ ಪ್ರೌಢಶಾಲಾ ಕನ್ನಡ ಕಲಿಕಾ ವಾತಾವರಣಗಳಲ್ಲಿ ಏಕರೂಪೀ ಪಠ್ಯವನ್ನು ತರುವುದು ವಿದ್ಯಾರ್ಥಿಗಳ ಭಾಷಾ ಕಲಿಕೆಯ ದೃಷ್ಟಿಯಿಂದ ಸರಿ ಎನ್ನಿಸುವುದಿಲ್ಲ. ಪಠ್ಯಗಳಲ್ಲಿನ ಸಾಂಪ್ರದಾಯಿಕ ಧೋರಣೆಗಳನ್ನು ಬದಲಿಸಿಕೊಳ್ಳಬೇಕಿದೆ. ಕನ್ನಡವನ್ನು ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ಬೋಧಿಸಬೇಕಿದೆ. ಪ್ರೌಢಶಾಲಾ ಕನ್ನಡ ಕಲಿಕಾ ಸನ್ನಿವೇಶ ವಿಕೇಂದ್ರೀಕರಣಗೊಳ್ಳಬೇಕಿದೆ.

### ೫.೬ ವಿದ್ಯಾರ್ಥಿ ಕೇಂದ್ರಿತ ಶಿಕ್ಷಣ–ಆದರ್ಶ ಕಲ್ಪನೆ

ವಿದ್ಯಾರ್ಥಿ ಕೇಂದ್ರಿತ ಶಿಕ್ಷಣ ಎಂಬುದು ಒಂದು ಆದರ್ಶ ಕಲ್ಪನೆ. ಕಲಿಕೆಯ ಸಮಸ್ತ ಚಟುವಟಿಕೆಗಳು ವಿದ್ಯಾರ್ಥಿಗಳಿಗಾಗಿ ಇರುವುದರಿಂದ ಎಲ್ಲಾ ಶಿಕ್ಷಣ ತಜ್ಞರೂ ಕೂಡ ವಿದ್ಯಾರ್ಥಿ ಕೇಂದ್ರಿತ ಶಿಕ್ಷಣವನ್ನು ಪ್ರತಿಪಾದಿಸಿದ್ದಾರೆ. ವಿದ್ಯಾರ್ಥಿ ಕೇಂದ್ರಿತ ಶಿಕ್ಷಣವನ್ನು ರೂಪಿಸುವವರು ಈ ನಿಟ್ಟಿನಲ್ಲಿ ಆದರ್ಶಗಳನ್ನು ಹೇಳಿದರೂ ಕೂಡ ತರಗತಿಯ

ವಾತಾವರಣಗಳು ಮಾತ್ರ ವಿದ್ಯಾರ್ಥಿಗಳ ಉಸಿರನ್ನು ಕಟ್ಟಿಸುವಂತಿವೆ ಎಂಬುದು ಅಧ್ಯಯನದ ಸಂದರ್ಭದಲ್ಲಿ ತಿಳಿದುಬಂದಿದೆ. ವಿದ್ಯಾರ್ಥಿ ಕೇಂದ್ರಿತ ಎಂಬ ಕಲ್ಪನೆ ತರಗತಿಯ ವಾಸ್ತವದಲ್ಲಿ ಕಂಡುಬರುವುದಿಲ್ಲ.




ಅಧ್ಯಯನದಲ್ಲಿ ಅವಲೋಕಿಸಿದಂತೆ ಸರಕಾರೀ ಹಾಗೂ ಅನುದಾನಿತ ಪ್ರೌಢ ಶಾಲೆಗಳ ಕಲಿಕಾ ವಾತಾವರಣವು ವಿದ್ಯಾರ್ಥಿ ಕೇಂದ್ರಿತ ವ್ಯವಸ್ಥೆಯಾಗಿಲ್ಲ. ವಿದ್ಯಾರ್ಥಿ ಕೇಂದ್ರಿತ ಎಂಬ ಕಲ್ಪನೆ ತರಬೇತಿ, ಕಾರ್ಯಾಗಾರ, ಭಾಷಣ, ಪ್ರಬಂಧಗಳಲ್ಲಿ ಮಾತ್ರ ಕಾಣುವಂತಾಗಿದೆ. ವಾಸ್ತವದಲ್ಲಿ ವಿದ್ಯಾರ್ಥಿಯನ್ನು ಕೇಂದ್ರವಾಗಿಟ್ಟುಕೊಂಡು ಉಳಿದ ಪದ್ಧತಿಗಳು ಪ್ರಬಲವಾಗಿ ಕಾರ್ಯನಿರ್ವಹಿಸುತ್ತಿವೆ. ಪಠ್ಯ ಕೇಂದ್ರಿತ, ಪರೀಕ್ಷಾ ಕೇಂದ್ರಿತ, ಅಂಕ ಕೇಂದ್ರಿತ, ಶಿಕ್ಷಕ ಕೇಂದ್ರಿತ, ಕಂಠಪಾಠ ಕೇಂದ್ರಿತ ಶಿಕ್ಷಣ ವ್ಯವಸ್ಥೆಗಳು ಕಲಿಕಾ ಸನ್ನಿವೇಶದಲ್ಲಿ ವಿದ್ಯಾರ್ಥಿಗಳನ್ನು ಆವರಿಸಿವೆ. ಇದರಿಂದಾಗಿ ವಿದ್ಯಾರ್ಥಿಗಳಿಗೆ ಕಲಿಕೆಯು ಸಹಜ ಕಲಿಕೆಯಾಗುತ್ತಿಲ್ಲ. ಕೃತಕ ಸನ್ನಿವೇಶಗಳ ಸಂದರ್ಭಗಳಿಂದಾಗಿ ಶಿಕ್ಷಣ ಇಲಾಖೆಯ ಹಾಗೂ ರಾಷ್ಟ್ರೀಯ ಶಿಕ್ಷಣ ನೀತಿಯ ಧ್ಯೇಯೋದ್ದೇಶಗಳು ನಿರೀಕ್ಷಿತ ಮಟ್ಟದಲ್ಲಿ ಸಾಧಿತವಾಗದ ಸಂದರ್ಭವಿದೆ.

ಅಧ್ಯಯನದ ಸಂದರ್ಭದಲ್ಲಿ ದೊರೆತ ಅಂಕಿ ಅಂಶಗಳು, ಶಿಕ್ಷಕರೊಡನೆ ನಡೆಸಿದ ಚರ್ಚೆಗಳು, ಕಲಿಕೆ ಹಾಗೂ ಬೋಧನೆಯ ವಿಚಾರದಲ್ಲಿ ಉದ್ದೇಶ ಪೂರ್ವಕವಾಗಿ ಸ್ವತಃ ಗಮನಿಸಿದ ವಿಚಾರಗಳು ಹಾಗೂ ಪೋಷಕರೊಂದಿಗೆ ಚರ್ಚಿಸಿದ ಹಿನ್ನೆಲೆಯಲ್ಲಿ ಕೆಳಗಿನ ಅಂಶಗಳನ್ನು ಗುರುತಿಸಲಾಗಿದೆ. ಕನ್ನಡ ಮಾಧ್ಯಮ ಕಲಿಕೆ ಮತ್ತು ಭಾಷಾ ಕಲಿಕೆಗಳ ಅಂತರ್ ಸಂಬಂಧಗಳ ವಿಚಾರವಾಗಿ ಕೆಲವು ತೀರ್ಮಾನಕ್ಕೆ ಬರಲಾಗಿದೆ.

- ❖ ಕನ್ನಡ ಭಾಷಾ ಕೌಶಲಗಳಾದ ಓದು ಮತ್ತು ಬರಹ ಕೌಶಲಗಳಲ್ಲಿ ಹಿಂದುಳಿದಿರುವ ವಿದ್ಯಾರ್ಥಿಗಳು ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನಗಳ ಕಲಿಕೆಯಲ್ಲಿಯೂ ಹಿಂದುಳಿದಿದ್ದಾರೆ.
- ❖ ಕನ್ನಡ ಭಾಷಾ ಕಲಿಕೆಯ ಪ್ರಭಾವ ಕನ್ನಡ ಮಾಧ್ಯಮದ ಕಲಿಕೆಯ ಮೇಲೆ ದಟ್ಟವಾಗಿ ಪರಿಣಾಮ ಬೀರುತ್ತಿದೆ.
- ❖ ಕನ್ನಡದ ಕಲಿಕೆಯು, ಕನ್ನಡ ಮಾಧ್ಯಮಗಳಲ್ಲಿನ ವಿದ್ಯಾರ್ಥಿಗಳ ಸಮಗ್ರ ಕಲಿಕಾ ಸಾಮರ್ಥ್ಯಗಳನ್ನು ನಿಯಂತ್ರಿಸುತ್ತದೆ.
- ❖ ತ್ರಿಭಾಷಾ ಸೂತ್ರ ವಿದ್ಯಾರ್ಥಿಗಳಿಗೆ ಹೊರೆಯಾಗಿದೆ. ಬಹಳಷ್ಟು ವಿದ್ಯಾರ್ಥಿಗಳು ಚತುರ್ಭಾಷಾ, ಪಂಚಭಾಷಾ ಕಲಿಕೆಯ ಹೊರೆಯನ್ನು ಹೊರುವಂಥಹ ಪರಿಸ್ಥಿತಿ ಇದೆ.
- ❖ ಕಲ್ಪಿತ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ತ್ರಿಭಾಷಾ ಪಠ್ಯಗಳನ್ನು ರಚಿಸಲಾಗಿದ್ದು ವಾಸ್ತವದ ವಿದ್ಯಾರ್ಥಿಗಳಿಗೂ ಕಲ್ಪಿತ ವಿದ್ಯಾರ್ಥಿಗಳಿಗೂ ಬಹಳ ಅಂತರವಿದೆ.
- ❖ ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಶಾಲೆಗಳಲ್ಲಿ, ಆಂಗ್ಲ ಹಾಗೂ ಹಿಂದಿ ಭಾಷೆಗಳ ಅಳವಡಿಕೆಯ ಹಿನ್ನೆಯಲ್ಲಿನ ಬೋಧನೋದ್ದೇಶಗಳು ಸಾಧಿತವಾಗುತ್ತಿಲ್ಲ.
- ❖ ತ್ರಿಭಾಷಾ ಸೂತ್ರದ ಹಿನ್ನೆಲೆಯಲ್ಲಿ ಹಿಂದಿ ಹಾಗೂ ಆಂಗ್ಲ ಭಾಷೆಗಳನ್ನು ಕನ್ನಡದಂತೆಯೇ ಕಲಿಸಲಾಗುತ್ತಿದೆ.
- ❖ ಪಾಠ ಮತ್ತು ಪದ್ಯ ಬೋಧನಾ ವಿಧಾನಗಳು ಉಪನ್ಯಾಸ ಮಾದರಿಯಲ್ಲಿ ನಡೆಯುತ್ತಿವೆ. ಬೋಧನಾ ವಿಧಾನವು ಅತ್ಯಂತ ಸಾಂಪ್ರದಾಯಿಕ ಪದ್ಧತಿಯಲ್ಲಿಯೇ ನಡೆಯುತ್ತಿದ್ದು ಯಾವುದೇ ಆಧುನಿಕ ಬೋಧನಾ ತಂತ್ರಗಳನ್ನು ಅಳವಡಿಸಿಕೊಂಡಿರುವುದಿಲ್ಲ.
- ❖ ಇಂಗ್ಲಿಷ್ ಹಾಗೂ ಹಿಂದಿ ಭಾಷಾ ಪ್ರತ್ಯೇಕವಾದ ಹಾಗೂ ವಿಶೇಷವಾದಂಥಹ ತರಬೇತಿಗಳಿಲ್ಲ. ಕನ್ನಡ ಭಾಷಾ ಬೋಧನೆಯ ಕುರಿತು ಇರುವ ತರಬೇತಿಯಂತೆಯೇ ಉಳಿದ ಭಾಷೆಗಳ ತರಬೇತಿಗಳಿವೆ.
- ❖ ಕರ್ನಾಟಕದಲ್ಲಿನ, ಕನ್ನಡ ಮಾತೃಭಾಷೆಯಾದ ವಿದ್ಯಾರ್ಥಿಗಳ ಕನ್ನಡ ಕಲಿಕಾ ಸನ್ನಿವೇಶಕ್ಕೂ ಅದೇ ವಿದ್ಯಾರ್ಥಿಗಳು ಇಂಗ್ಲಿಷ್ ಭಾಷೆಯನ್ನು ಕಲಿಯುವ ಸನ್ನಿವೇಶಕ್ಕೂ ಬಹಳ ವ್ಯತ್ಯಾಸವಿದೆ. ಹೊಸ ಭಾಷೆಯನ್ನು ಕಲಿಸುವ ಸಂದರ್ಭಗಳಲ್ಲಿ ವಿಶೇಷವಾದ ಪರಿಣತಿಯಿರುವ ಹಾಗೂ ವಿಶೇಷ ತರಬೇತಿಗಳನ್ನು ಪಡೆದಿರುವ

ಶಿಕ್ಷಕರ ಆವಶ್ಯಕತೆಯಿದೆ. ಶಿಕ್ಷಣ ಇಲಾಖೆಯು ಈ ಕುರಿತು ಯಾವುದೇ ಪೂರ್ವ ತಯಾರಿಗಳನ್ನು ಮಾಡಿಕೊಳ್ಳದೆಯೇ ತ್ರಿಭಾಷಾ ಸೂತ್ರವನ್ನು ಅಳವಡಿಸಿಕೊಂಡಿದೆ.

❖ ಪಾಠ ಮತ್ತು ಪದ್ಯಗಳನ್ನು ಮಕ್ಕಳಿಂದ ಓದಿಸುವುದು, ಕಠಿಣ ಪದಗಳ ಅರ್ಥವನ್ನು ಕನ್ನಡದಲ್ಲಿ ಬರೆಸುವುದು. ಪಾಠವನ್ನು ವಿವರಿಸುವುದು. ಟಿಪ್ಪಣಿ ಪುಸ್ತಕದಲ್ಲಿ ಪ್ರಶ್ನೋತ್ತರಗಳನ್ನು ಬರೆಸುವುದು. ಪರೀಕ್ಷೆಗಳನ್ನು ನಡೆಸುವುದು. ಮೌಲ್ಯಮಾಪನ ಮಾಡಿ ಉತ್ತೀರ್ಣರಾದಲ್ಲಿ ಮುಂದಿನ ತರಗತಿಗೆ ಕಳುಹಿಸುವುದು. ಇದು ಹೆಚ್ಚಿನ ಪ್ರೌಢಶಾಲೆಗಳಲ್ಲಿ ನಡೆಯುವ ಯಾಂತ್ರಿಕ ವಿಧಾನವಾಗಿದೆ.

❖ ಹಿಂದಿನ ವರ್ಷದ ಟಿಪ್ಪಣಿ ಪುಸ್ತಕದ ಪ್ರಶ್ನೋತ್ತರಗಳನ್ನು ಪ್ರಸ್ತುತ ವರ್ಷದಲ್ಲೂ ಬರೆಸುವುದು. ವಿದ್ಯಾರ್ಥಿಗಳು ಅದನ್ನು ಕಂಠಪಾಠಮಾಡುವುದು ಸಾಮಾನ್ಯ ವಿಚಾರವಾಗಿದೆ.

❖ ಓದು ಮತ್ತು ಬರಹಕ್ಕೆ ಹೆಚ್ಚಿನ ಮಹತ್ವವನ್ನು ನೀಡಲಾಗುತ್ತಿದೆ. ಆಲಿಸುವಿಕೆ, ಮಾತನಾಡುವಿಕೆ ಹಾಗೂ ಇತರ ಚಟುವಟಿಕೆಗಳು ಗೌಣವಾಗಿವೆ.

ಪ್ರೌಢಶಾಲಾ ಹಂತದಲ್ಲಿ ಶೇಕಡಾ ಐವತ್ತಕ್ಕೂ ಹೆಚ್ಚು ವಿದ್ಯಾರ್ಥಿಗಳು ಭಾಷೆಗಳೂ ಸೇರಿದಂತೆ ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನದ ಜ್ಞಾನ ಶಾಖೆಗಳ ಕಲಿಕೆಯಲ್ಲಿಯೂ ಹಿಂದುಳಿಯಲು ಹಲವು ಕಾರಣಗಳನ್ನು ಗುರುತಿಸಿಕೊಳ್ಳಲಾಗಿದೆ. ಕೆಲವು ಪ್ರತ್ಯಕ್ಷ ಕಾರಣಗಳಾದರೆ ಇನ್ನೂ ಕೆಲವು ಕಾರಣಗಳು ಪರೋಕ್ಷವಾಗಿ ವಿದ್ಯಾರ್ಥಿಗಳ ಕಲಿಕಾ ಹಿನ್ನೆಡೆಗೆ ಕಾರಣಗಳಾಗಿವೆ. ಅವುಗಳನ್ನು ಈ ಕೆಳಕಂಡಂತೆ ಗುರುತಿಸಲಾಗಿದೆ.

- ಪಠ್ಯ ರಚನಾ ಸಮಿತಿ(ಪಠ್ಯ ಪುಸ್ತಕ), ಸಾರ್ವಜನಿಕ ಶಿಕ್ಷಣ ಇಲಾಖೆ(ಆಡಳಿತ ವಿಭಾಗ) ಮತ್ತು ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ(ಮೌಲ್ಯಮಾಪನ)ಗಳು ಪ್ರತ್ಯೇಕವಾಗಿ ಕೆಲಸ ನಿರ್ವಹಿಸುತ್ತಿವೆ. ವಿದ್ಯಾರ್ಥಿಗಳ ಕಲಿಕಾ ಪ್ರಕ್ರಿಯೆಗೆ ಪೂರಕವಾಗುವಂತೆ ಈ ಮೂರೂ ವಿಭಾಗಗಳು ಒಗ್ಗೂಡಿ ಯೋಜನೆಗಳನ್ನು ಕೈಗೊಳ್ಳಬೇಕಿದೆ.
- ಕೆಲವು ಶಾಲೆಗಳಲ್ಲಿ ಶಿಕ್ಷಕರು ಬಡ್ಡಿ ವ್ಯವಹಾರ, ಅಂಗಡಿ ಮುಂಗಟ್ಟು, ಕೃಷಿ ಚಟುವಟಿಕೆಗಳು, ಜಮೀನು ಮನೆ ಪರಭಾರೆ(Land Links), ಚೀಟಿ ವ್ಯವಹಾರ ಇತ್ಯಾದಿ ಚಟುವಟಿಕೆಗಳಲ್ಲಿ ಅತ್ಯಂತ ಕ್ರಿಯಾಶೀಲರಾಗಿದ್ದಾರೆ. ಇಂಥವರಿಗೆ ಮಕ್ಕಳ ವಿದ್ಯಾಭ್ಯಾಸದ ಕುರಿತು ಹೆಚ್ಚಿನ ಕಾಳಜಿಯಿಲ್ಲ. ಕೆಲವು ಶಿಕ್ಷಕರು ಶಾಲಾ ಕೆಲಸಕ್ಕಿಂತ ಹೆಚ್ಚಾಗಿ ಅವರ ವೈಯಕ್ತಿಕ ಕೆಲಸಗಳಿಗೆ ಹೆಚ್ಚಿನ ಪ್ರಧಾನ್ಯ ನೀಡುತ್ತಿದ್ದಾರೆ. ಕೆಲವು ಶಿಕ್ಷಕರು ದುಶ್ಚಟ ದುರಭ್ಯಾಸಗಳನ್ನು ರೂಢಿಸಿಕೊಂಡಿದ್ದಾರೆ. ಕೆಲವು ಶಿಕ್ಷಕರು ಕಾಟಾಚಾರಕ್ಕಾಗಿ ಪಾಠ ಮಾಡುತ್ತಾರೆ.

- ಶಿಕ್ಷಣ ಇಲಾಖೆಯು ಉತ್ತೀರ್ಣತೆಯ ಹಾಗೂ ಅಂಕಗಳ ಅಂಕಿ ಅಂಶಗಳನ್ನು ಶಿಕ್ಷಕರಿಂದ ಕೇಳುತ್ತದೆ ಹಾಗೂ ಆ ಅಂಕಿ ಅಂಶಗಳ ಆಧಾರದ ಮೇಲೆ ಸಾಧನೆಯನ್ನು ತೋರಿಸುತ್ತದೆ. ವಿದ್ಯಾರ್ಥಿಗಳ ನಿಜವಾದ ಕಲಿಕೆಯ ಕುರಿತು ಇಲಾಖೆಗೆ ಯಾವುದೇ ಕಾಳಜಿ ಇರುವಂಥಹ ಯೋಜನೆಗಳಿಲ್ಲ.
- ಶಾಲೆಗಳಿಗೆ ಹಾಗೂ ವಿದ್ಯಾರ್ಥಿಗಳಿಗೆ ನೀಡಲಾಗುವ ಬಾಹ್ಯ ಸೌಲಭ್ಯಗಳ ಪೂರೈಕೆಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡು ಶೈಕ್ಷಣಿಕ ಅಭಿವೃದ್ಧಿಯನ್ನು ಅಳೆಯುವ ಮಾನದಂಡಗಳಿವೆ.
- ಕಲಿಕೆಯಿಂದಾಗಬಹುದಾದ ವಿದ್ಯಾರ್ಥಿಗಳ ವ್ಯಕ್ತಿತ್ವ ವಿಕಸನದ ಪ್ರಮಾಣಗಳನ್ನು ಮೌಲ್ಯಮಾಪನ ಪ್ರಕ್ರಿಯೆ ಇಂದಿನ ಶೈಕ್ಷಣಿಕ ವ್ಯವಸ್ಥೆಯಲ್ಲಿಲ್ಲ.
- ಕಲಿಕೆಯಲ್ಲಿ ಆಸಕ್ತಿಯನ್ನು ಕಳೆದುಕೊಂಡಿರುವ ಹಾಗೂ ಶಿಕ್ಷಣದ ಮಹತ್ವವನ್ನು ತಿಳಿದುಕೊಂಡಿರದ ವಿದ್ಯಾರ್ಥಿಗಳು ಮತ್ತು ಈ ಕುರಿತು ಜಾಗ್ರತ ಪ್ರಜ್ಞೆಯನ್ನು ಹೊಂದಿರದ ಪೋಷಕರು.
- ಕಲಿಕೆಯನ್ನು ಜೀವನಾನುಭವದೊಂದಿಗೆ ಬೆಸೆಯದೇ ಇರುವ ಪಾಠಗಳು ಮತ್ತು ಪಠ್ಯಪುಸ್ತಕಗಳು. ವಿದ್ಯಾರ್ಥಿಗಳಿಗೆ ಪ್ರಾಯೋಗಿಕವಾದ ಮತ್ತು ಕಲಿಕೆಯ ಅನುಭವಗಳನ್ನು ನೀಡದ ಪಾಠಗಳು ಮತ್ತು ಬೋಧನೆ. ಈ ವಿಚಾರಗಳ ಕುರಿತು ಶಿಕ್ಷಣ ಇಲಾಖೆ ಯಾವ ಕ್ರಮಗಳನ್ನೂ ಕೈಗೊಳ್ಳದಿರುವುದು ಹಾಗೂ ಶಿಕ್ಷಕರಿಗೆ ನಿರ್ದಿಷ್ಟವಾದ ತರಬೇತಿಗಳನ್ನು ನೀಡದಿರುವುದು.
- ಪಠ್ಯ, ಪಾಠಗಳು, ಬೋಧನೆ, ಕಲಿಕಾ ಸನ್ನಿವೇಶಗಳು ಅತ್ಯಂತ ಸಾಂಪ್ರದಾಯಿಕ ಮಾದರಿಯಲ್ಲಿರುವುದು ಹಾಗೂ ಆಕರ್ಷಣೀಯವಾಗಿಲ್ಲದಿರುವುದು.
- ಕಲ್ಪಿತ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಕೇಂದ್ರೀಕೃತ ಮಾದರಿಯಲ್ಲಿ ಪಠ್ಯಗಳನ್ನು ರಚಿಸಿರುವುದು.
- ವಿದ್ಯಾರ್ಥಿಗಳ ಕಲಿಕಾ ಆಸಕ್ತಿಗಳಿಗೆ ಅನುವಾಗುವಂಥಹ ವಿಷಯಗಳಿಗೆ ಸಂಬಂಧಿಸಿದಂತೆ ಯಾವುದೇ ಆಯ್ಕೆಗಳ ಸ್ವಾತಂತ್ರ್ಯವಿಲ್ಲದಿರುವುದು.
- ಬೋಧನೆಯ ವಿಚಾರವೂ ಕೇಂದ್ರೀಕೃತವಾಗಿರುವುದು. ಶಿಕ್ಷಕರಿಗೆ ಹಾಗೂ ಅವರ ಸೃಜನಶೀಲತೆಗೆ ಯಾವುದೇ ಸ್ವಾತಂತ್ರ್ಯವಿಲ್ಲದೆಯೇ ಪಠ್ಯಗಳಲ್ಲಿ ನಿಗದಿಪಡಿಸಿರುವ ವಿಚಾರಗಳಿಗೆ ಮಾತ್ರ ಸೀಮಿತಗೊಳಿಸಿರುವುದು.
- ಮಕ್ಕಳಿಗೆ ಕನ್ನಡ ಭಾಷೆ ಹೊಸದಲ್ಲ, ಅವರಿಗೆ ಗೊತ್ತಿರುವ, ಅವರಾಡುವ ಭಾಷೆಯ ಧ್ವನಿಗಳಿಗೆ ಲಿಪಿ ಸಂಕೇತಗಳನ್ನು ಕಲಿಸುವಲ್ಲಿಯೇ ಶಿಕ್ಷಕರು ಎಡವುತ್ತಿದ್ದಾರೆ.

- ಬಹಳಷ್ಟು ವಿದ್ಯಾರ್ಥಿಗಳು ಕನ್ನಡ ಭಾಷೆಯ ಲಿಪಿ ಗ್ರಹಿಕೆಯಲ್ಲೇ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಹೆಚ್ಚಿನ ವಿದ್ಯಾರ್ಥಿಗಳು ಅಕ್ಷರಗಳನ್ನು ಗುರುತಿಸಲಾರರು, ವೇಗವಾಗಿ ಓದಲಾರರು, ಓದಿದ್ದನ್ನು ಗ್ರಹಿಸಿಕೊಳ್ಳಲಾರರು, ಶುದ್ಧವಾಗಿ ಬರೆಯಲಾರರು, ಗ್ರಹಿಸಿದುದನ್ನು ಅಭಿವ್ಯಕ್ತಿಗೊಳಿಸಲಾರರು.
- ಕನ್ನಡ ಭಾಷೆಯಲ್ಲಿ ಓದಲು, ಬರೆಯಲು ಬರದಿರುವ ಹೆಚ್ಚಿನ ವಿದ್ಯಾರ್ಥಿಗಳು ಗಣಿತದಲ್ಲೂ ಹಿಂದಿದ್ದಾರೆ. ಅಂಕಗಣಿತ, ಬೀಜಗಣಿತ ಹಾಗೂ ರೇಖಾ ಗಣಿತದ ಸಾಮಾನ್ಯ ಲೆಕ್ಕಾಚಾರ ಮಾಡಲು ಅವರಿಗೆ ಸಾಧ್ಯವಾಗದ ಸ್ಥಿತಿಯಲ್ಲಿದ್ದಾರೆ.
- ಕನ್ನಡ ಭಾಷೆಯಲ್ಲಿ ಓದಲು, ಬರೆಯಲು ಬರದಿರುವ ಹೆಚ್ಚಿನ ವಿದ್ಯಾರ್ಥಿಗಳು ವಿಜ್ಞಾನದಲ್ಲೂ ಹಿಂದಿದ್ದಾರೆ. ಭೌತಶಾಸ್ತ್ರ, ರಸಾಯನ ಶಾಸ್ತ್ರ ಹಾಗೂ ಜೀವಶಾಸ್ತ್ರದ ಸಾಮಾನ್ಯ ಪ್ರಶ್ನೋತ್ತರಗಳಿಗೂ ಉತ್ತರ ಬರೆಯಲಾಗದ ಸ್ಥಿತಿಯಲ್ಲಿದ್ದಾರೆ.
- ಕನ್ನಡ ಭಾಷೆಯಲ್ಲಿ ಓದಲು, ಬರೆಯಲು ಬರದಿರುವ ಹೆಚ್ಚಿನ ವಿದ್ಯಾರ್ಥಿಗಳು ಸಮಾಜ ವಿಜ್ಞಾನದಲ್ಲೂ ಹಿಂದಿದ್ದಾರೆ. ಇತಿಹಾಸ, ಭೂಗೋಳ, ಪೌರನೀತಿ ಹಾಗೂ ಅರ್ಥಶಾಸ್ತ್ರದ ಪಾಠಗಳನ್ನು ನಿರರ್ಗಳವಾಗಿ ಓದಲು, ಪ್ರಶ್ನೋತ್ತರಗಳನ್ನು ಸ್ವಂತವಾಗಿ ಬರೆಯಲು ಅವರಿಗೆ ಸಾಧ್ಯವಾಗುತ್ತಿಲ್ಲ
- ಭಾಷಾ ಬೋಧನೆಯ ಗುರಿ ಹಾಗೂ ಉದ್ದೇಶ ಸಾಧಿತವಾಗದ ಕಾರಣ ಗಣಿತ, ವಿಜ್ಞಾನ, ಸಮಾಜದ ಬೋಧನಾಗುರಿಗಳು ಹಾಗೂ ಕಲಿಕೆಯ ಉದ್ದೇಶಗಳೂ ಕೂಡ ಸಾಧಿತವಾಗುತ್ತಿಲ್ಲ.
- ನಿರಂತರವಾದ ಬೋಧನೆ ಇದೆ, ಆದರೆ ಕಲಿಕೆ ಅಗುತ್ತಿಲ್ಲ. ಎಂದರೆ ಶಿಕ್ಷಣ ಪದ್ಧತಿಯಲ್ಲಿ ಹಾಗೂ ಬೋಧನಾ ವಿಧಾನಗಳಲ್ಲಿ ದೋಷಗಳಿವೆ. ಪ್ರಾಥಮಿಕ ಶಿಕ್ಷಣವು ವಿದ್ಯಾರ್ಥಿಗಳಿಗೆ ಸಂಪೂರ್ಣವಾಗಿ ಕನ್ನಡ ಮಾಧ್ಯಮವಾಗಿದ್ದು ಏಳು ವರ್ಷದ ಕಲಿಕೆಯಲ್ಲೂ ನಿರರ್ಗಳವಾದ ಓದು ಬರಹದ ಕೌಶಲ ಇವರಿಗೆ ಆಗಿಲ್ಲ ಎಂದರೆ ಇದು ಶಿಕ್ಷಣ ಪದ್ಧತಿಯ ಹಾಗೂ ಬೋಧನಾ ವಿಧಾನದ ದೋಷವಾಗಿದೆ.
- ಪಠ್ಯಕ್ರಮಗಳನ್ನು ತಿಂಗಳುವಾರು ಸೂಚನೆಯಂತೆ ಮುಗಿಸಬೇಕಾದ ಅನಿವಾರ್ಯತೆ ಶಿಕ್ಷಕರಿಗೆ ಇರುವುದರಿಂದ ಪ್ರೌಢಶಾಲೆಗಳಲ್ಲಿ ಕಾಗುಣಿತ ತಿದ್ದಿಸಲು ಆಗುವುದಿಲ್ಲ. ಕಾಗುಣಿತ ತಿದ್ದಿಸುವುದೇನಿದ್ದರೂ ಅದು ಕನ್ನಡ ಅಧ್ಯಾಪಕರ ಕೆಲಸ ಎಂಬ ಭಾವನೆ ಹಲವು ಶಿಕ್ಷಕರಲ್ಲಿದೆ.
- ಶಾಲೆಗಳಲ್ಲಿನ ಕಲಿಕಾ ಸಂದರ್ಭಗಳಿಗೆ ಆಧುನಿಕ ತಂತ್ರಜ್ಞಾನವನ್ನು ಸಮರ್ಥವಾಗಿ ಅಳವಡಿಸಿಕೊಂಡಿಲ್ಲ.
- ವಿದ್ಯಾರ್ಥಿಗಳ ಶೈಕ್ಷಣಿಕ ಸಾಧನೆ ಮತ್ತು ಸಾಮರ್ಥ್ಯಗಳನ್ನು ಮೌಲ್ಯಮಾಪನ ಮಾಡುವಂಥಹ ಪ್ರಾದೇಶಿಕ ಸಂಶೋಧನಾ ಸಂಸ್ಥೆಗಳಿಲ್ಲದಿರುವುದು.

**ಅಡಿಟಿಪ್ಪಣಿ:**

೧) Government of Karnataka, Department of Public Instruction, 'EDUCATION IN KARNATAKA 2012-13' "AN ANALITICAL REPORT".

೨) Government of Karnataka, Department of Public Instruction, 'EDUCATION IN KARNATAKA 2012-13' "AN ANALITICAL REPORT".

3) ಡಾ. ಮಹಾಬಲೇಶ್ವರ ರಾವ್. **'ಪ್ರೌಢ ಶಾಲೆಗಳಲ್ಲಿ ಕನ್ನಡ ಬೋಧನೆ.'** ನವಕರ್ನಾಟಕ ಪ್ರಕಾಶನ, ಬೆಂಗಳೂರು.

# ಅಧ್ಯಾಯ - ೬

## ಉಪಸಂಹಾರ

### ೬.೧. ಅಧ್ಯಯನದ ಫಲಿತಗಳು

೬.೧.೧ ಪ್ರೌಢಶಾಲಾ ಶಿಕ್ಷಣದಲ್ಲಿ ಕನ್ನಡ ಭಾಷಾ ಕಲಿಕೆಯ ಸ್ವರೂಪ

೬.೧.೨ ಪ್ರೌಢಶಾಲಾ ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕಗಳ ಸ್ವರೂಪ

೬.೧.೩ ಕನ್ನಡ ಭಾಷಾ ಕಲಿಕೆಯಲ್ಲಿ ಸಾಹಿತ್ಯದ ಸ್ವರೂಪ

೬.೧.೪ ಕನ್ನಡ ಮಾಧ್ಯಮ ಕಲಿಕೆ ಹಾಗೂ ಭಾಷಾ ಕಲಿಕೆಗಳ ಅಂತರ್ ಸಂಬಂಧ

### ೬.೨. ಸಂಶೋಧನಾರ್ಥಿಯ ಶಿಫಾರಸ್ಸುಗಳು

೧ ಸರ್ಕಾರದ ಭಾಷಾ ಯೋಜನೆಗಳು

೨ ಕನ್ನಡ ಭಾಷಾ ಬೋಧನೆಯ ಗುರಿ-ಉದ್ದೇಶಗಳು

೩ ಸ್ಪಷ್ಟ ಓದು-ಶುದ್ಧ ಬರಹದ ತರಗತಿಗಳು

೪ ನೂತನ ಏಕರೂಪೀ ಮಾಧ್ಯಮ

೫ ದೃಕ್ ಶ್ರವಣೋಪಕರಣಗಳ ಬಳಕೆ

೬ ಆಧುನಿಕ ಭಾಷಾ ವಿಜ್ಞಾನದ ಸಮರ್ಪಕ ಬಳಕೆ

೭ ಪ್ರಾಥಮಿಕ ಶಾಲೆಗಳಲ್ಲಿ ಲಿಪಿಕ ಹುದ್ದೆಯ ಸೃಷ್ಟಿ

೮ ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಭಾಷಾ ಶಿಕ್ಷಕರ ನೇಮಕಾತಿ

೯ ತರಗತಿಗಳಲ್ಲಿನ ಮಕ್ಕಳ ಸಂಖ್ಯೆಯ ಗಣನೆ

೧೦ ಬಿ.ಎಡ್ ತರಬೇತಿಯಲ್ಲಾಗಬೇಕಾದ ಬದಲಾವಣೆ

೧೧ ಪಠ್ಯಪುಸ್ತಕ ರಚನೆ

೧೨ ಕನ್ನಡ ಭಾಷಾ ತರಗತಿ

೧೩ ಕನ್ನಡ ಪ್ರಯೋಗ ಶಾಲೆ

೧೪ ಶಾಲಾ ಉತ್ತಮೀಕರಣ ಯೋಜನೆ

೬

## ಉಪಸಂಹಾರ

ರಾಷ್ಟ್ರದ ಶಿಕ್ಷಣ ಕ್ಷೇತ್ರದ ಪ್ರಗತಿಯು ಅಲ್ಲಿನ ಮಾನವ ಸಂಪನ್ಮೂಲದ ಸದ್ಬಳಕೆಗೆ ಕಾರಣವಾಗುತ್ತದೆ. ತನ್ಮೂಲಕ ಆರ್ಥಿಕ, ಸಾಮಾಜಿಕ, ರಾಜಕೀಯ, ನೈತಿಕ ಗುಣಮಟ್ಟವು ಸುಧಾರಣೆಯಾಗಿ ರಾಷ್ಟ್ರದ ಸರ್ವಾಂಗೀಣ ಅಭಿವೃದ್ಧಿಗೆ ನಾಂದಿಯಾಗುತ್ತದೆ. ಅತ್ಯುತ್ತಮ ಶಿಕ್ಷಣ ನೀಡುವುದರ ಮೂಲಕ ವಿದ್ಯಾರ್ಥಿಗಳನ್ನು ಉತ್ತಮ ಪ್ರಜೆಗಳನ್ನಾಗಿ ರೂಪಿಸುವ ಉದ್ದೇಶದಿಂದ ಕರ್ನಾಟಕದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯು ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಣಕ್ಕೆ ಕೋಟಿಗಟ್ಟಲೆ ಹಣವನ್ನು ವ್ಯಯಿಸುತ್ತಿದೆ.

ಯಾವುದೇ ಬಗೆಯ ಜ್ಞಾನಶಾಖೆಯನ್ನು ವಿದ್ಯಾರ್ಥಿಗಳಿಗೆ ನೀಡಲು ಭಾಷೆಯೆಂಬ ಮಾಧ್ಯಮ ಅತೀ ಅಗತ್ಯ. ಕರ್ನಾಟಕದಲ್ಲಿನ ಒಟ್ಟು ೧೬೦೧೮ ಪ್ರೌಢಶಾಲೆಗಳಲ್ಲಿ ೨೬೩೪೭೨೧ ವಿದ್ಯಾರ್ಥಿಗಳು ವಿವಿಧ ಮಾಧ್ಯಮಗಳಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಉಚಿತ ಮತ್ತು ಕಡ್ಡಾಯವಾಗಿ ಶಿಕ್ಷಣ ಪಡೆದುಕೊಳ್ಳುವುದು ಮಕ್ಕಳ ಹಕ್ಕಾಗಿರುವುದರಿಂದ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿಲುವುಗಳು ತರಗತಿಯೊಳಗೆ ಅನುಷ್ಠಾನಗೊಳ್ಳುತ್ತಿರುವ ವಿಚಾರಗಳ ಅಧ್ಯಯನ ಈ ನಿಟ್ಟಿನಲ್ಲಿ ಮುಖ್ಯವಾಗುತ್ತದೆ.

| ಕಲಿಕಾ ಮಾಧ್ಯಮ | ಪ್ರೌಢಶಾಲೆಗಳ ಸಂಖ್ಯೆ | ೨೦೧೨-೧೩ನೇ ಸಾಲಿನಲ್ಲಿ ನೋಂದಾವಣೆಯಾದ ವಿದ್ಯಾರ್ಥಿಗಳ ಸಂಖ್ಯೆ |
|---|---|---|
| ಕನ್ನಡ | ೧೦೩೭೭ | ೧೮೩೩೨೪೫ |
| ಇಂಗ್ಲಿಷ್ | ೪೭೪೭ | ೬೬೯೮೧೫ |
| ಉರ್ದು | ೫೪೦ | ೮೧೦೮೬ |
| ತಮಿಳು | ೧೦ | ೫೩೭ |
| ತೆಲುಗು | ೧೫ | ೯೪೫ |
| ಮರಾಠಿ | ೨೭೭ | ೪೫೮೯೨ |
| ಇತರೆ | ೫೨ | ೩೨೦೧ |
| **ಒಟ್ಟು** | **೧೬೦೧೮** | **೨೬೩೪೭೨೧** |

ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯಲ್ಲಿ ಗಳಿಸಿಕೊಳ್ಳುವ ಸಾಮರ್ಥ್ಯಗಳು ಅವರ ಸಮಗ್ರ ಕಲಿಕೆಗೆ ಪೂರಕವಾಗಿರುತ್ತವೆಯಾದ್ದರಿಂದ, ಕನ್ನಡ ಕಲಿಕೆಯ ವಿಚಾರವನ್ನು ಅಧ್ಯಯನ ಮಾಡಲಾಗಿದೆ.

ಅಖಿಲ ಕರ್ನಾಟಕ ವ್ಯಾಪ್ತಿಯಲ್ಲಿ ಪ್ರೌಢಶಾಲಾ ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕಗಳು ಏಕರೂಪಿಯಾಗಿವೆ. ಈ ಪಠ್ಯದ ಹಿನ್ನೆಲೆಯ ಪ್ರೌಢಶಾಲಾ ವಿದ್ಯಾರ್ಥಿಗಳು ಕನ್ನಡ ಕಲಿಕೆಯಲ್ಲಿ ಎದುರಿಸುತ್ತಿರುವ ಸಮಸ್ಯೆಗಳು, ಭಾಷಾ ಕಲಿಕೆಯ ಹಾಗೂ ಬೋಧನೆಯ ಸನ್ನಿವೇಶದಲ್ಲಿ ಭಾಷಾ ಬೋಧನೆಯ ಉದ್ದೇಶಗಳು ಎಷ್ಟರಮಟ್ಟಿಗೆ ಸಾಧಿತವಾಗುತ್ತಿವೆ ಎಂಬುದನ್ನು ಶೋಧಿಸಿ, ಬೋಧನಾ ಹಾಗೂ ಕಲಿಕಾ ಸಂಬಂಧಿತವಾದ ಸಮಸ್ಯೆಗಳಿಗೆ ಸೂಕ್ತ ಪರಿಹಾರಗಳು ಯಾವುವು ಎಂಬುದನ್ನು ತಿಳಿದುಕೊಳ್ಳಲಾಗಿದೆ.

ಪ್ರಸ್ತುತ ಭಾಷಾಕಲಿಕೆಯಲ್ಲಿ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ನಿಗದಿಪಡಿಸಿರುವ ಗದ್ಯ, ಕಾವ್ಯ, ಲೇಖನ, ವ್ಯಾಕರಣ, ಛಂದಸ್ಸುಗಳ ಇತಿ–ಮಿತಿ, ಪ್ರಸ್ತುತತೆ, ತ್ರಿಭಾಷಾ ಸೂತ್ರದ ಸಾಧಕ ಬಾಧಕಗಳು, ಇತಿಮಿತಿಗಳು, ಸಂವಿಧಾನದ ಪ್ರಾಥಮಿಕ ಆಶಯವನ್ನು ಕೇಂದ್ರವಾಗಿಟ್ಟುಕೊಂಡ ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಹಾಗೂ ತರಬೇತಿ ಸಂಸ್ಥೆಯ ಪಠ್ಯ ರಚನೆ ಹಾಗೂ ಬೋಧನೆಗಳ ಆದರ್ಶಗಳನ್ನು, ಈ ಆದರ್ಶಗಳು ವಾಸ್ತವದಲ್ಲಿ ಎಷ್ಟರ ಮಟ್ಟಿಗೆ ಅನುಷ್ಠಾನಗೊಳ್ಳುತ್ತಿವೆ ಎಂಬುದನ್ನು ಕ್ಷೇತ್ರಕಾರ್ಯದ ಮೂಲಕ, ವಿದ್ಯಾರ್ಥಿ, ಶಿಕ್ಷಕ, ಪಾಲಕರಿಂದ ಪಡೆದ ದತ್ತ ಮಾಹಿತಿಗಳು, ಹಾಗೂ ಅವಲೋಕನದ ಮೂಲಕ ಸಂಗ್ರಹಿಸಿದ ಮಾಹಿತಿಗಳನ್ನು ವಿದ್ಯಾರ್ಥಿ ಕೇಂದ್ರಿತ ತತ್ವದ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

**ಕ್ಷೇತ್ರಕಾರ್ಯ**

ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಗಳಲ್ಲಿ ಪ್ರಥಮ ಭಾಷೆ ಕನ್ನಡವನ್ನು ಕಲಿಯುತ್ತಿರುವ ವಿದ್ಯಾರ್ಥಿಗಳನ್ನು ಸಮೀಕ್ಷೆಗೆ ಬಳಸಿಕೊಂಡಿದೆ. ಕರ್ನಾಟಕದ ೨೧ ಜಿಲ್ಲೆಗಳ ೬೩ ಶಾಲೆಗಳಲ್ಲಿನ ೧೫೦೦ ವಿದ್ಯಾರ್ಥಿಗಳನ್ನು ಯಾದೃಚ್ಛಿಕವಾಗಿ ಆಯ್ಕೆಮಾಡಿಕೊಂಡಿದೆ. ಕ್ಷೇತ್ರಕಾರ್ಯವು ಸಂಪೂರ್ಣವಾಗಿ ಚಟುವಟಿಕೆಯಾಧಾರಿತ, ಮಾಹಿತಿ ಸಂಗ್ರಹಣ, ಅವಲೋಕನ ಹಾಗೂ ವಿಶ್ಲೇಷಣಾ ವಿಧಾನಗಳದ್ದಾಗಿದೆ. ವಾಸ್ತವ ಹಾಗೂ ಪ್ರಾಯೋಗಿಕ ಚಿತ್ರಣವನ್ನು ಅಧ್ಯಯನ ಮಾಡುವ ಉದ್ದೇಶದಿಂದ ತರಗತಿಯ ಒಳಗೆ ನಡೆಯುವ ಚಟುವಟಿಕೆಗಳನ್ನು ಅವಲೋಕಿಸಿದೆ. ವಿದ್ಯಾರ್ಥಿಗಳ ಕಲಿಕೆಗೆ ಸಂಬಂಧಿಸಿದ ವರ್ತನೆಗಳನ್ನು ಅವರು ಕಲಿಯುತ್ತಿರುವ ಸನ್ನಿವೇಶಗಳಲ್ಲಿಯೇ ನೇರವಾಗಿ ಗುರುತಿಸುವ ಉದ್ದೇಶವನ್ನು ಹೊಂದಿದೆ.

## ೬.೧ ಅಧ್ಯಯನದ ಫಲಿತಗಳು

ಅಧ್ಯಯನದ ಸಂದರ್ಭಗಳಲ್ಲಿ ತರಗತಿಗಳಲ್ಲಿ ನಡೆಸಿದ ಚಟುವಟಿಕೆಗಳು, ಅಧ್ಯಾಪಕರೊಂದಿಗೆ, ವಿದ್ಯಾರ್ಥಿಗಳೊಂದಿಗೆ ಹಾಗೂ ವಿದ್ಯಾರ್ಥಿಗಳ ಪೋಷಕರೊಂದಿಗೆ ನಡೆಸಿದ ಚರ್ಚೆ ಹಾಗೂ ಅಭಿಪ್ರಾಯ ಸಂಗ್ರಹಣೆ ಮತ್ತು ಅವಲೋಕನಗಳಿಂದ ಸಂಗ್ರಹಿಸಿದ ಮಾಹಿತಿಗಳ ಆಧಾರದ ಮೇಲೆ ಭಾಷಾ ಕಲಿಕೆಯ ಸ್ವರೂಪದಲ್ಲಿನ ಚಟುವಟಿಕೆಗಳು, ಪ್ರಸ್ತುತ ಪ್ರೌಢಶಾಲಾ ಪ್ರಥಮ ಭಾಷಾ ಕನ್ನಡ ಪಠ್ಯ ಪುಸ್ತಕಗಳು, ಕನ್ನಡ ಭಾಷಾ ಪಠ್ಯದ ಸಾಹಿತ್ಯದ ಸ್ವರೂಪ, ಕನ್ನಡ ಮಾಧ್ಯಮ ಕಲಿಕೆ ಮತ್ತು ಭಾಷಾ ಕಲಿಕೆಗಳ ಅಂತರ್ ಸಂಬಂಧಗಳ ಕುರಿತು ಈ ಕೆಳಗಿನ ತೀರ್ಮಾನಕ್ಕೆ ಬರಲಾಗಿದೆ.

### ೬.೧.೧ ಪ್ರೌಢಶಾಲಾ ಶಿಕ್ಷಣದಲ್ಲಿ ಕನ್ನಡ ಭಾಷಾ ಕಲಿಕೆಯ ಸ್ವರೂಪ

ರಾಜ್ಯದ ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಗಳ ಶೇಕಡಾ ೫೪.೫೫ ರಷ್ಟು ವಿದ್ಯಾರ್ಥಿಗಳು ಕನ್ನಡ ಭಾಷಾ ಕಲಿಕೆಯ ಮೂಲ ಕೌಶಲವಾದ ಓದುವಿಕೆಯಲ್ಲಿ ನಿರೀಕ್ಷಿತ ಸಾಮರ್ಥ್ಯವನ್ನು ಗಳಿಸಿಕೊಂಡಿಲ್ಲ. ಶೇಕಡಾ ೫೦ಕ್ಕೂ ಹೆಚ್ಚಿನ ವಿದ್ಯಾರ್ಥಿಗಳು ಕನ್ನಡ ಭಾಷಾ ಪಠ್ಯಪುಸ್ತಕದ ವಿಚಾರಗಳಿಗಾಗಿ ಶಿಕ್ಷಕರನ್ನು ಸಂಪೂರ್ಣವಾಗಿ ಅವಲಂಬಿಸಿದ್ದಾರೆ. ಅಕ್ಷರಗಳನ್ನು ಗುರುತಿಸುವ ಹಂತದಲ್ಲಿಯೇ ಬಹಳಷ್ಟು ವಿದ್ಯಾರ್ಥಿಗಳು ಗೊಂದಲವನ್ನು ಎದುರಿಸುತ್ತಿದ್ದಾರೆ. ಕಲಿಕೆಯಲ್ಲಿ ಸ್ವಾವಲಂಬನೆ, ಸ್ವಾಧ್ಯಾಯ ಸಾಧ್ಯವಾಗದ ಸ್ಥಿತಿಯಲ್ಲಿದ್ದಾರೆ. ಶೇಕಡಾ ೬೦ಕ್ಕೂ ಹೆಚ್ಚು ವಿದ್ಯಾರ್ಥಿಗಳು ತಾವು ಕೇಳಿದ ಪದಗಳನ್ನು ಅಕ್ಷರ ರೂಪದಲ್ಲಿ ಬರೆಯಲು ಅಸಮರ್ಥರಾಗಿದ್ದಾರೆ

ಪಠ್ಯಪುಸ್ತಕಗಳಲ್ಲಿರುವ ಚಟುವಟಿಕೆಗಳು ತರಗತಿಯಲ್ಲಿ ನಡೆಯುತ್ತಿಲ್ಲ. ಬಹಳಷ್ಟು ಅಧ್ಯಾಪಕರಿಗೆ ರಂಗಕಲೆ, ಅಭಿನಯ, ನಾಟಕಗಳ ಕೌಶಲ ತಿಳಿದಿಲ್ಲ. ಬಹಳಷ್ಟು ಅಧ್ಯಾಪಕರು ಕವಿತೆಗಳನ್ನು ಹಾಡಲಾರರು. ತರಗತಿಗಳಲ್ಲಿ ಭಾಷಾ ಪಠ್ಯಕ್ಕೆ ಸಂಬಂಧಿಸಿದಂತೆ ದೃಕ್ ಶ್ರವಣೋಪಕರಣಗಳನ್ನು ಬಳಸಲಾಗುತ್ತಿಲ್ಲ. ಪಾಠ ಪದ್ಯಗಳಿಗೆ ಸಂಬಂಧಿಸಿದಂತೆ ಯಾವುದೇ ಬೋಧನಾ ಸಲಕರಣೆಗಳನ್ನು ಬಳಸುತ್ತಿಲ್ಲ.

ಪಠ್ಯಗಳಲ್ಲಿನ ಅನೇಕ ಚಟುವಟಿಕೆಗಳು ವಿದ್ಯಾರ್ಥಿಗಳ ಮಟ್ಟವನ್ನು ಮೀರಿವೆ. ಗಾಯನ, ಅಭಿನಯ, ನಾಟಕ, ಭಾಷಣ ಮೊದಲಾದ ಕೌಶಲಗಳನ್ನು ಪ್ರಾಥಮಿಕ ಶಾಲೆಗಳಲ್ಲಿ ವ್ಯವಸ್ಥಿತವಾಗಿ ಕಲಿಕೆಯೊಂದಿಗೆ ರೂಢಿಸಿರದ ಕಾರಣ ಬಹಳಷ್ಟು ವಿದ್ಯಾರ್ಥಿಗಳು ಸಭಾಕಂಪನ, ಹಿಂಜರಿಕೆ, ಕೀಳರಿಮೆ, ನಾಚಿಕೆಯ ಸ್ವಭಾವಗಳಿಂದ ಕೂಡಿದವರಾಗಿದ್ದಾರೆ.

ಅಭ್ಯಾಸದ ಪ್ರಶ್ನೆಗಳಿಗೆ ಅಧ್ಯಾಪಕರೇ ಟಿಪ್ಪಣಿ ಬರೆಸುತ್ತಿದ್ದಾರೆ. ಪ್ರಬಂಧ ವಿಚಾರಗಳನ್ನು ಹೆಚ್ಚಿನ ಶಾಲೆಗಳಲ್ಲಿ ಮನೆಗೆಲಸಕ್ಕೆ ನೀಡಲಾಗುತ್ತಿದೆ.

ತರಗತಿಯ ಕೊಠಡಿಗಳು ಉಪನ್ಯಾಸ ಮಾದರಿಗೆ ಮಾತ್ರ ಸೂಕ್ತವಾಗಿದೆ. ಚಟುವಟಿಕೆಗಳಿಗೆ ಪೂರಕವಾಗುವ ಸೌಲಭ್ಯಗಳನ್ನು ತರಗತಿಯ ಕೊಠಡಿಗಳು ಹೊಂದಿಲ್ಲ. ಪ್ರೌಢಶಾಲೆಗಳಲ್ಲಿ ಶೇಕಡಾ ೬೦ಕ್ಕಿಂತಲೂ ಹೆಚ್ಚಿನ ವಿದ್ಯಾರ್ಥಿಗಳು ಲಿಪಿಗ್ರಹಿಕೆಯ ಹಂತದಲ್ಲಿಯೇ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಆದುದರಿಂದ ಇವರಿಗೆ ಮೂಲ ಆಕರ ಗ್ರಂಥಗಳನ್ನು ಓದಲು, ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಪರೀಕ್ಷೆಗಳಿಗೆ ಅಥವಾ ಮೌಲ್ಯ ಮಾಪನಕ್ಕೆ ಈ ಚಟುವಟಿಕೆಗಳನ್ನು ಕೇಳುವುದಿಲ್ಲವಾದ್ದರಿಂದ ಇವುಗಳಿಗೆ ಹೆಚ್ಚಿನ ಗಮನ ಕೊಡಬೇಕಾಗಿಲ್ಲ ಎಂಬ ಭಾವನೆ ಅನೇಕ ಶಿಕ್ಷಕರಲ್ಲಿದೆ. ಈ ರೀತಿಯ ಪರೀಕ್ಷಾ ಕೇಂದ್ರಿತವಾದ ಚಿಂತನೆಯಿಂದಾಗಿ ಪಠ್ಯದಲ್ಲಿನ ಚಟುವಟಿಕೆಗಳು ನಗಣ್ಯವಾಗಿವೆ.

ಒಟ್ಟಿನಲ್ಲಿ ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಗಳ ಪ್ರಥಮ ಭಾಷಾ ಕನ್ನಡದ ಕಲಿಕೆಯ ಸ್ವರೂಪವು ಉಪನ್ಯಾಸ ಮಾದರಿಯಲ್ಲಿ ನಡೆಯುತ್ತಿದೆ ಮತ್ತು ಪಠ್ಯ ಪುಸ್ತಕ ಹಾಗೂ ಪರೀಕ್ಷಾ ಕೇಂದ್ರಿತವಾಗಿದೆ. ಪಠ್ಯ ಪುಸ್ತಕಗಳ ಬೋಧನೆಯಿಂದ ವಿದ್ಯಾರ್ಥಿಗಳಿಗೆ ನಿರೀಕ್ಷಿತ ಮಟ್ಟದಲ್ಲಿ ಭಾಷಿಕ ಕೌಶಲಗಳು ಕರಗತವಾಗುತ್ತಿಲ್ಲ. ಪಠ್ಯ ಪುಸ್ತಕ ನಿರ್ದೇಶನಾಲಯವು ವಿದ್ಯಾರ್ಥಿಗಳ ಭಾಷಾ ಸಾಮರ್ಥ್ಯವನ್ನು ಹೆಚ್ಚಿಸುವ ಉದ್ದೇಶದಿಂದ ಪಠ್ಯ ಪುಸ್ತಕಗಳಲ್ಲಿ ನಿರ್ದೇಶಿಸಿರುವ ಚಟುವಟಿಕೆಗಳು ತರಗತಿಯ ವಾಸ್ತವದಲ್ಲಿ ನಡೆಯುತ್ತಿಲ್ಲ. ರಾಷ್ಟ್ರೀಯ ಶಿಕ್ಷಣ ನೀತಿಯ ಹಾಗೂ ರಾಜ್ಯ ಶಿಕ್ಷಣ ಇಲಾಖೆಯ ಭಾಷಿಕ ಧ್ಯೇಯೋದ್ದೇಶಗಳು ತರಗತಿಗಳಲ್ಲಿ ಸಾಧಿತವಾಗುತ್ತಿಲ್ಲ.

**೬.೧.೨ ಪ್ರೌಢಶಾಲಾ ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕಗಳ ಸ್ವರೂಪ**

ಎಂಟು, ಒಂಭತ್ತು ಹಾಗೂ ಹತ್ತನೆಯ ತರಗತಿಯ ಪಠ್ಯಗಳನ್ನು ಕಲ್ಪಿತ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಲಾಗಿದೆ. ಪಠ್ಯಗಳ ರಚನೆಯು ಅತ್ಯಂತ ಸಾಂಪ್ರದಾಯಿಕವಾಗಿದೆ. ಆಧುನಿಕ ಭಾಷಾ ಸಿದ್ಧಾಂತ, ತಂತ್ರಜ್ಞಾನಗಳನ್ನು ಪಠ್ಯಗಳು ಸಂಪೂರ್ಣವಾಗಿ ಕಡೆಗಣಿಸಿವೆ. ಪಠ್ಯದಲ್ಲಿನ ವಿಚಾರಗಳನ್ನು ನೆನಪಿಟ್ಟುಕೊಂಡು ಪರೀಕ್ಷೆಗಳಲ್ಲಿ ಬರೆದು ಉತ್ತೀರ್ಣವಾಗುವುದೇ ಕನ್ನಡದ ಕಲಿಕೆ ಎಂಬ ಪರಿಸ್ಥಿತಿಯಿದೆ.

ತರಗತಿಗಳ ಬಹುತೇಕ ವಿದ್ಯಾರ್ಥಿಗಳು ಪಾಠ ಪದ್ಯಗಳನ್ನು ಅರ್ಥಮಾಡಿಕೊಳ್ಳಲು ಅಧ್ಯಾಪಕರನ್ನು ಅವಲಂಬಿಸಲೇಬೇಕಾದ ಅನಿವಾರ್ಯ ಪರಿಸ್ಥಿತಿಯಲ್ಲಿದ್ದಾರೆ. ವಿದ್ಯಾರ್ಥಿಗಳು ಪರೀಕ್ಷೆಗಳಲ್ಲಿ ಉತ್ತೀರ್ಣತೆಯ ಮಾನದಂಡದ ಅಂಕಗಳಿಗಾಗಿ ಕಂಠಪಾಠದ ಮೊರೆಯನ್ನು ಹೋಗುತ್ತಿದ್ದಾರೆ. ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು, ಮಕ್ಕಳ

ಅವಶ್ಯಕತೆಗೆ ಸ್ಪಂದಿಸುವುದು, ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿಪಡಿಸುವುದು ಎಂಬ ರಾಷ್ಟ್ರೀಯ ಪಠ್ಯಕ್ರಮದ ವೈಶಿಷ್ಟ್ಯಗಳು ತರಗತಿಯಲ್ಲಿ ಸಾಧಿತವಾಗುತ್ತಿಲ್ಲ.

ಭಾಷೆಯ ಮೂಲಭೂತ ಕೌಶಲಗಳಾದ ಆಲಿಸುವಿಕೆ, ಮಾತನಾಡುವಿಕೆ, ಓದು ಹಾಗೂ ಬರಹದ ಕೌಶಲಗಳ ಗಳಿಕೆಯಲ್ಲಿ ವಿದ್ಯಾರ್ಥಿಗಳು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇದಕ್ಕೆ ಕಾರಣಗಳು ಹಲವಿದ್ದರೂ ವಿದ್ಯಾರ್ಥಿಗಳ ಕಲಿಕಾ ಸಾಮರ್ಥ್ಯದತ್ತ ಶಿಕ್ಷಣ ಇಲಾಖೆಯು ದಿವ್ಯ ನಿರ್ಲಕ್ಷ್ಯ ತೋರಿದೆ. ನೂತನ ಪಠ್ಯಪುಸ್ತಕ ತರುವಲ್ಲಿ ತೋರುವ ಆಸಕ್ತಿಯನ್ನು ವಿದ್ಯಾರ್ಥಿಗಳ ಭಾಷಾ ಕಲಿಕೆಯ ಸಾಮರ್ಥ್ಯ ಗಳಿಕೆಯ ಕಡೆಗೆ ಮತ್ತು ತರಗತಿಯ ವಾಸ್ತವದ ಕಡೆಗೆ ತೋರಿಸಿಲ್ಲ.

ವೃದ್ಧಿಸಂಧಿ, ಯಣ್, ಶ್ಚುತ್ವ, ಜಸ್ತ್ವ, ಅನುನಾಸಿಕ ಸಂಧಿಗಳು, ಸಂಯೋಜಿತ ವಾಕ್ಯ, ಮಿಶ್ರವಾಕ್ಯ, ಉತ್ತ, ದ, ವ ಎಂಬ ಕಾಲಸೂಚಕ ಪ್ರತ್ಯಯಗಳು, ಅವ್ಯಯಗಳು, ಕರ್ತರಿ, ಕರ್ಮಣಿ ಪ್ರಯೋಗಗಳು, ಬಹುವ್ರೀಹಿ, ಅಂಶಿ, ಗಮಕ ಸಮಾಸಗಳು, ಸಕರ್ಮಕ ಅಕರ್ಮಕ ಧಾತುಗಳು, ಕೃದಂತ, ಕೃದಂತ ನಾಮ, ವರ್ತಮಾನ ಕೃದಂತ, ಭೂತ ಕೃದಂತ, ನಿಷೇಧ ಕೃದಂತ, ಕೃದಂತ ಭಾವ ನಾಮ, ಕೃದಂತಾವ್ಯಗಳು. ತದ್ಧಿತ ಪ್ರತ್ಯಯ, ತದ್ಧಿತಾಂತ ನಾಮ, ತದ್ಧಿತಾಂತ ಭಾವ ನಾಮ, ತದ್ಧಿತಾಂತಾವ್ಯಯಗಳು. ಸುಳಾದಿ, ಉಗಾಭೋಗಗಳ ವಿವರಣೆ, ಉತ್ಪ್ರೇಕ್ಷಾಲಂಕಾರ, ದೃಷ್ಟಾಂತಾಲಂಕಾರ, ಅರ್ಥಾಂತರನ್ಯಾಸಾಲಂಕಾರ, ಶ್ಲೇಷಾಲಂಕಾರ, ವೃತ್ಯನುಪ್ರಾಸ, ಛೇಕನುಪ್ರಾಸ, ಯಮಕಾಲಂಕಾರ, ಚಿತ್ರಕವಿತ್ವ, ಉಪಮೇಯಲುಪ್ತೋಪಮೆ, ಧರ್ಮಲುಪ್ತೋಪಮೆ, ವಾಚಕಲುಪ್ತೋಪಮೆ, ವಾಚಕಧರ್ಮಲುಪ್ತೋಪಮೆ, ವಾಚಕಧರ್ಮೋಪಮಾನಲುಪ್ತೋಪಮೆ...... ಇವುಗಳನ್ನು ವಿದ್ಯಾರ್ಥಿಗಳಿಗೆ ಹೊರೆಯಾಗುವಂತೆ ಪಠ್ಯಗಳಲ್ಲಿ ತುಂಬಿಸಲಾಗಿದೆ. ಮಕ್ಕಳ ಮಟ್ಟಕ್ಕೆ ಮೀರಿದ ಈ ವಿಚಾರಗಳಿಂದ ವಿದ್ಯಾರ್ಥಿಗಳ ಕನ್ನಡ ಕಲಿಕಾ ಆಸಕ್ತಿ ಕುಂಠಿತಗೊಳ್ಳುತ್ತಿದೆ.

ಬಳಕೆಯಲ್ಲಿ ಇಲ್ಲದ ಅನೇಕ ಬಗೆಯ ವ್ಯಾಕರಣಾಂಶಗಳನ್ನು ಈಗಲೂ ಬಳಕೆಯಲ್ಲಿರುವಂತೆ ಬಿಂಬಿಸಿ ಪಠ್ಯಗಳಲ್ಲಿ ಅಳವಡಿಸಲಾಗಿದೆ. ವ್ಯಾಕರಣಾಂಶಗಳು ಪ್ರಾದೇಶಿಕವಾಗಿ ಭಿನ್ನವಾಗಿದ್ದರೂ ಅದನ್ನು ಪಠ್ಯಗಳಲ್ಲಿ ಗುರುತಿಸುವ ಹಾಗೂ ವಿದ್ಯಾರ್ಥಿಗಳಿಗೆ ಪರಿಚಯಿಸುವ ಪ್ರಯತ್ನವಿಲ್ಲ.

ಕನ್ನಡ ಸಾಹಿತ್ಯ ಚರಿತ್ರೆಯ ಸಮಗ್ರ ವಿಚಾರಗಳನ್ನು ಪ್ರೌಢಶಾಲಾ ಹಂತದಲ್ಲಿನ ಪಠ್ಯ ಪುಸ್ತಕಗಳಲ್ಲಿ ತಂದಿರುವುದರಿಂದ ವಿದ್ಯಾರ್ಥಿಗಳ ಭಾಷಾ ಕಲಿಕಾ ಸನ್ನಿವೇಶಗಳಲ್ಲಿ ಸಾಹಿತ್ಯದ ಕಲಿಕೆಯೇ ಪ್ರಧಾನವಾಗಿದೆ.

ಹೆಚ್ಚಿನ ವಿದ್ಯಾರ್ಥಿಗಳು ಲಿಪಿಗ್ರಹಿಕೆಯ ಸಂದರ್ಭದಲ್ಲಿಯೇ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವುದರಿಂದ ಪಠ್ಯಗಳನ್ನು ಸ್ವ ಅಧ್ಯಯನ ಮಾಡಲು ಸಾಧ್ಯವಾಗುತ್ತಿಲ್ಲ. ಪ್ರಸ್ತುತ ಪ್ರೌಢಶಾಲಾ ಪ್ರಥಮ ಭಾಷಾ ಪಠ್ಯ ಪುಸ್ತಕಗಳು ವಿದ್ಯಾರ್ಥಿಗಳ ಸ್ವ ಕಲಿಕೆಗೆ ಪೂರಕವಾಗಿಲ್ಲ. ಶಿಕ್ಷಕ ಕೇಂದ್ರಿತ ಹಾಗೂ ಮೌಲ್ಯ ಮಾಪನ ಕೇಂದ್ರಿತವಾಗಿವೆ.

ಪ್ರತೀ ಪಾಠ ಪದ್ಯಗಳ ಕೊನೆಯಲ್ಲಿ ಕೆಲವು ಸಿದ್ಧಮಾದರಿಯ ಪ್ರಶ್ನೆಗಳನ್ನು ಕೊಟ್ಟಿರುವುದರಿಂದ ಹಾಗೂ ಮೌಲ್ಯಮಾಪನಕ್ಕೆ ಆ ಪ್ರಶ್ನೆಗಳನ್ನೇ ಕೇಳುವುದರಿಂದ ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಗಳನ್ನು ಬರೆದು ಕಂಠಪಾಠಮಾಡುವುದೇ ಕನ್ನಡದ ಕಲಿಕೆಯೆಂಬಂತಾಗಿದೆ.

ಕನ್ನಡ ಭಾಷಾ ಪಠ್ಯ ರಚನಾ ತತ್ವಗಳಲ್ಲಿ ಆಧುನಿಕ ಭಾಷಾ ವಿಜ್ಞಾನದ ದೃಷ್ಟಿಗಿಂತ ಮಾನವೀಯ ಮೌಲ್ಯ, ಸಾಂಸ್ಕೃತಿಕ ತತ್ವ, ಸಾಹಿತ್ಯ ತತ್ವ, ಪ್ರಜಾಪ್ರಭುತ್ವ ಹಾಗೂ ರಾಷ್ಟ್ರೀಯ ಭಾವೈಕ್ಯತೆ, ಜೀವನಾನುಭವ ಮೊದಲಾದ ತತ್ವಗಳಿಗೆ ಮಹತ್ವ ನೀಡಲಾಗಿದೆ. ಇದರಿಂದಾಗಿ ಕನ್ನಡ ಕಲಿಕೆ ಹಾಗೂ ಬೋಧನೆಯ ಸನ್ನಿವೇಶಗಳಲ್ಲಿ ಭಾಷಾ ವಿಜ್ಞಾನದ ಚಟುವಟಿಕೆಗಳಿಗಿಂತ ಉಳಿದ ಮೌಲ್ಯಗಳ ಕಲಿಕೆಯು ಪ್ರಧಾನವಾಗಿ ಕನ್ನಡ ಕಲಿಕೆಯೆಂದರೆ ಮೌಲ್ಯಗಳಿಕೆ ಎಂಬ ಪರಿಸ್ಥಿತಿ ನಿರ್ಮಾಣವಾಗಿದೆ.

೨೦೦೫ರ ರಾಷ್ಟ್ರೀಯ ಪಠ್ಯಕ್ರಮವು ಹೇಳುವ ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸುವುದು. ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು. ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು. ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು. ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು. ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು. ವಿಷಯಗಳ ಮೇರೆಗಳನ್ನು ಮುರಿದು ಅವುಗಳ ಸಮಗ್ರ ದೃಷ್ಟಿಯ ಬೋಧನೆಯನ್ನು ಅಳವಡಿಸುವುದು. ಶಾಲೆಯ ಹೊರಬದುಕಿಗೆ ಜ್ಞಾನಸಂಯೋಜನೆ. ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿಪಡಿಸುವುದು ಎಂಬ ವಿಚಾರಗಳಿಗೂ ಹಾಗೂ ಪಠ್ಯಗಳ ಬೋಧನೆಯಿಂದಾಗುತ್ತಿರುವ ಪರಿಣಾಮಗಳಿಗೂ ಹೊಂದಿಕೆಯಾಗದಿರುವಂಥಹ ಸನ್ನಿವೇಶಗಳೇ ಕಂಡುಬರುತ್ತಿವೆ.

ಶಾಲಾ ಕಟ್ಟಡದ ತರಗತಿಯ ವಿನ್ಯಾಸವು ಉಪನ್ಯಾಸ ಮಾದರಿಯದ್ದಾಗಿದೆ. ಪಠ್ಯಪುಸ್ತಕಗಳಲ್ಲಿನ ಚಟುವಟಿಕೆಗಳಿಗೆ ಅದರದ್ದೇ ಆದ ವೇದಿಕೆಯಿರುವ ತರಗತಿಗಳಿಲ್ಲ ಹಾಗೂ ಭಾಷಾ ಪ್ರಯೋಗಾಲಯಗಳ ಸೌಲಭ್ಯವಿಲ್ಲ.

ಪ್ರಸ್ತುತ ಪ್ರೌಢಶಾಲಾ ಪ್ರಥಮ ಭಾಷಾ ಪಠ್ಯ ಪುಸ್ತಕಗಳು ವಿದ್ಯಾರ್ಥಿಗಳ ಸ್ವಕಲಿಕೆಗೆ ಪೂರಕವಾಗಿಲ್ಲ. ಪಠ್ಯಗಳು ವಿದ್ಯಾರ್ಥಿ ಕೇಂದ್ರಿತವಾಗಿಲ್ಲ. ಶಿಕ್ಷಕ ಕೇಂದ್ರಿತ, ಪಠ್ಯ ಕೇಂದ್ರಿತ, ಅಂಕ ಕೇಂದ್ರಿತ ಹಾಗೂ ಮೌಲ್ಯ ಮಾಪನ ಕೇಂದ್ರಿತವಾಗಿವೆ.

### ೬.೧.೩ ಕನ್ನಡ ಭಾಷಾ ಕಲಿಕೆಯಲ್ಲಿ ಸಾಹಿತ್ಯದ ಸ್ವರೂಪ

ಭಾಷೆಯ ಕಲಿಕೆಗೂ, ಭಾಷೆಯ ಕುರಿತ ಕಲಿಕೆಗೂ ಹಾಗೂ ಭಾಷೆಯ ಮೂಲಕ ಕಲಿಕೆಗೂ ಸೂಕ್ಷ್ಮವಾದ ಬಹಳಷ್ಟು ವ್ಯತ್ಯಾಸಗಳಿವೆ. ಈ ವ್ಯತ್ಯಾಸಗಳ ಕುರಿತು ಶಿಕ್ಷಕರಿಗೆ ತರಬೇತಿಗಳನ್ನು ನೀಡಲಾಗುತ್ತಿಲ್ಲ. ಭಾಷಾ ಕಲಿಕೆ ಹಾಗೂ ಸಾಹಿತ್ಯದ ಕಲಿಕೆಗಳ ವ್ಯತ್ಯಾಸದ

ಕುರಿತು ಹಾಗೂ ಪ್ರೌಢಶಾಲಾ ಕನ್ನಡ ಕಲಿಕಾ ಸಂದರ್ಭಗಳಲ್ಲಿ ಅವುಗಳನ್ನು ಸೂಕ್ತವಾಗಿ ನಿಭಾಯಿಸುವ ಕುರಿತು ಶಿಕ್ಷಕರಿಗೆ ನಿರ್ದಿಷ್ಟ ತರಬೇತಿಯನ್ನು ನೀಡಲಾಗಿಲ್ಲ. ಬಿ.ಎಡ್. ತರಬೇತಿಯಲ್ಲಾಗಲೀ ಅಥವಾ ಸೇವಾಂತರ್ಗತ ತರಬೇತಿಗಳಲ್ಲಾಗಲೀ ಈ ಕುರಿತು ಆಳವಾದ ಜ್ಞಾನ ನೀಡುವ ತರಬೇತಿಗಳಿಲ್ಲ. ಇದರಿಂದಾಗಿ ಶಿಕ್ಷಕ ವಲಯದಲ್ಲಿ ಈ ಕುರಿತು ಅನೇಕ ಗೊಂದಲಗಳಿವೆ.

ಭಾಷಾ ಪಠ್ಯದಲ್ಲಿ ಸಾಹಿತ್ಯದ ಎಲ್ಲಾ ಪ್ರಕಾರಗಳನ್ನು ಪ್ರೌಢಶಾಲಾ ಮಟ್ಟದಲ್ಲಿ ಪರಿಚಯಿಸುವ ಅಗತ್ಯವಿಲ್ಲ. ಇದು ವಿದ್ಯಾರ್ಥಿಗಳಲ್ಲಿ ಅನಗತ್ಯವಾದ ಗೊಂದಲಗಳನ್ನು ಮೂಡಿಸುತ್ತದೆ ಹಾಗೂ ಭಾಷಾ ಕಲಿಕೆಗಿಂತ ಸಾಹಿತ್ಯದ ಕಲಿಕೆಯೇ ಪ್ರಧಾನವಾಗುತ್ತದೆ.

ಸಾಹಿತ್ಯವನ್ನು ಹೊರತುಪಡಿಸಿ ಭಾಷೆಯನ್ನು ಕಲಿಸುವ ಬಗ್ಗೆ, ಭಾಷಾ ಪಠ್ಯಗಳಲ್ಲಿಯೇ ಭಾಷೆ, ಸಾಹಿತ್ಯ, ವ್ಯಾಕರಣ ಎಂಬ ಪ್ರತ್ಯೇಕ ವಿಭಾಗ ಕ್ರಮವನ್ನು ಅನುಸರಿಸುವ ಕುರಿತ ಸಾಧ್ಯತೆಗಳ ಬಗ್ಗೆ ಪ್ರಯೋಗಗಳಾಗಿಲ್ಲ.

ಕರ್ನಾಟಕ ರಾಜ್ಯ ಒಂದೇ ಆದರೂ ಇಲ್ಲಿ ಹಲವು ಕನ್ನಡಗಳಿವೆ. ಬಹಳಷ್ಟು ವಿದ್ಯಾರ್ಥಿಗಳ ಆಡುಭಾಷೆಗೂ ಪಠ್ಯಗಳ ಭಾಷೆಗೂ ಬಹಳಷ್ಟು ಭಿನ್ನತೆಗಳಿವೆ. ಶಿಷ್ಟ ಸಾಹಿತ್ಯವನ್ನು ಮಾತ್ರ ಪಠ್ಯಗಳಲ್ಲಿ ಪರಿಚಯಿಸಿದೆ. ಪ್ರಾದೇಶಿಕ ಬಿನ್ನತೆ ಹಾಗೂ ವೈವಿಧ್ಯಮಯ ಸಂಸ್ಕೃತಿಯ ಹಿನ್ನೆಲೆಯಿರುವ ವಿದ್ಯಾರ್ಥಿಗಳಿಗೆ ಏಕರೂಪೀ ಪಠ್ಯವನ್ನು ನಿಗದಿಗೊಳಿಸಿದೆ. ವಿದ್ಯಾರ್ಥಿಗಳ ಬಹುಭಾಷಿಕ ಸಂಸ್ಕೃತಿಯನ್ನು ಪ್ರಾದೇಶಿಕವಾಗಿ ಪಠ್ಯಗಳಲ್ಲಿ ಗುರುತಿಸುವ ಪ್ರಯೋಗಗಳಾಗಿಲ್ಲದಿರುವುದು ಕಂಡುಬಂದಿದೆ.

ಕನ್ನಡ ಸಾಹಿತ್ಯದ ಗದ್ಯ, ಕಾವ್ಯ, ಲೇಖನ ವಿಭಾಗಕ್ಕೆ ಸಂಬಂಧಿಸಿದಂತೆ ಅನೇಕ ಕವಿಕೃತಿಗಳನ್ನು ಪಠ್ಯಗಳಲ್ಲಿ ನೀಡಿದ್ದರೂ ಅವು ಅತ್ಯಂತ ಸಾಂಪ್ರದಾಯಿಕ ಪದ್ಧತಿಯಲ್ಲಿರುವುದರಿಂದ ಕವಿಗಳ ಹಾಗೂ ಲೇಖಕರ ವಿಚಾರಗಳನ್ನು ವಿದ್ಯಾರ್ಥಿಗಳು ಕಂಠಪಾಠಮಾಡಿಕೊಂಡು ಯಾಂತ್ರಿಕವಾಗಿ ಕಲಿಯುತ್ತಿದ್ದಾರೆ. ಅಂತಿಮ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದು ಮುಖ್ಯವಾಗುತ್ತಿದೆಯೇ ಹೊರತು ಸಾಹಿತ್ಯ ಸ್ವರೂಪಗಳ ಕಲಿಕೆ ಮತ್ತು ಗ್ರಹಿಕೆ ಮುಖ್ಯವಾಗುತ್ತಿಲ್ಲ.

ಕಥೆ, ಹಾಸ್ಯ ಲೇಖನ, ವಿಡಂಬನೆ, ಪ್ರಬಂಧ, ಜೀವನಚರಿತ್ರೆ, ಆತ್ಮಕಥೆ, ಲಲಿತ ಪ್ರಬಂಧ, ನಾಟಕ, ಪ್ರವಾಸ ಕಥನ, ವ್ಯಕ್ತಿಚಿತ್ರ, ಹಳಗನ್ನಡ ಗದ್ಯ, ವೈಜ್ಞಾನಿಕ ಲೇಖನ, ಪತ್ರ ಲೇಖನ ಮೊದಲಾದ ಗದ್ಯ ಸ್ವರೂಪಗಳು ಸಾಂಪ್ರದಾಯಿಕ ಬೋಧನಾ ಪದ್ಧತಿಯ ಕಾರಣದಿಂದಾಗಿ ವಿದ್ಯಾರ್ಥಿಗಳ ಕಲಿಕೆಯಲ್ಲಿ ನಿರೀಕ್ಷಿತ ಸಾಧನೆ ಕಾಣಿಸುತ್ತಿಲ್ಲ. ನವೋದಯ, ನವ್ಯ, ಬಂಡಾಯದ ಕವಿತೆಗಳು, ಜನಪದ ಗೀತೆಗಳು, ಕೀರ್ತನೆಗಳು, ಉಗಾಭೋಗ, ಸುಳಾದಿ, ಕಂದ, ರಗಳೆ, ಷಟ್ಪದಿ, ಖ್ಯಾತ ಕರ್ನಾಟಕಗಳು ಹಾಗೂ ಹೊಸಗನ್ನಡ, ನಡುಗನ್ನಡ, ಹಳಗನ್ನಡ ವಿಭಾಗದ ಕವಿತೆ ಹಾಗೂ ಕಾವ್ಯಗಳ ಭಾಗಗಳೂ ಕೂಡ ಸಾಂಪ್ರದಾಯಿಕ ಬೋಧನೆಯ ಸನ್ನಿವೇಶದಲ್ಲಿಯೇ ಸಾಗುತ್ತಿರುವುದರಿಂದ ಕಾವ್ಯಭಾಗದ ಬೋಧನೆಯಿಂದ

ಸಾಧ್ಯವಾಗಬಹುದಾದ ಸೃಷ್ಟಿಶೀಲತೆ ವಿದ್ಯಾರ್ಥಿಗಳಲ್ಲಿ ಕಂಡುಬರುತ್ತಿಲ್ಲ. ಸಾಹಿತ್ಯದ ಸ್ವರೂಪವೂ ಕೂಡ ಪರೀಕ್ಷಾ ಕೇಂದ್ರಿತ ಹಾಗೂ ಅಂಕ ಕೇಂದ್ರಿತವಾಗಿದೆ. ಪಠ್ಯಗಳಲ್ಲಿ ನೀಡಿರುವ ಲೇಖನಾಂಶಗಳ ಚಟುವಟಿಕೆಗಳೂ ಕೂಡ ವಿದ್ಯಾರ್ಥಿಗಳಲ್ಲಿ ಸೃಜನಶೀಲ ರಚನಾ ಕೌಶಲಗಳನ್ನು ಬೆಳೆಸುತ್ತಿಲ್ಲ. ಬಹಳಷ್ಟು ವಿದ್ಯಾರ್ಥಿಗಳಿಗೆ ಪ್ರಬಂಧವನ್ನು ಸ್ವತಂತ್ರವಾಗಿ ಬರೆಯುವ ಕೌಶಲ ಸಿದ್ಧಿಸಿಲ್ಲ.

### ೬.೧.೪ ಕನ್ನಡ ಮಾಧ್ಯಮ ಕಲಿಕೆ ಹಾಗೂ ಭಾಷಾ ಕಲಿಕೆಗಳ ಅಂತರ್ ಸಂಬಂಧ

೨೦೧೨-೨೦೧೩ನೇ ಸಾಲಿನಲ್ಲಿ ಕರ್ನಾಟಕದ ೧೦೩೭೭ ಪ್ರೌಢಶಾಲೆಗಳಲ್ಲಿನ ೧೮೩೩೨೪೫ ವಿದ್ಯಾರ್ಥಿಗಳು ಕನ್ನಡ ಮಾಧ್ಯಮದಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಈ ೧೦೩೭೭ ಕನ್ನಡ ಮಾಧ್ಯಮ ಪ್ರೌಢಶಾಲೆಗಳಲ್ಲಿ ಹಿಂದಿ ಹಾಗೂ ಆಂಗ್ಲ ಭಾಷಾ ತರಗತಿಗಳ ಹೊರತಾಗಿ ಗಣಿತ, ವಿಜ್ಞಾನ, ಸಮಾಜ ವಿಜ್ಞಾನಗಳ ಕಲಿಕಾ ವಾತಾವರಣ ಸಂಪೂರ್ಣ ಕನ್ನಡಮಯವಾಗಿದೆ. ಈ ವಿದ್ಯಾರ್ಥಿಗಳಿಗೆ ಜ್ಞಾನಶಾಖೆಗಳ ಸಮಗ್ರ ಪರಿಚಯವಾಗುವುದು ಕನ್ನಡ ಭಾಷೆಯ ಮೂಲಕ. ೧೮೩೩೨೪೫ ವಿದ್ಯಾರ್ಥಿಗಳು ಕನ್ನಡದಲ್ಲಿ ಗಳಿಸುವ ಪ್ರಭುತ್ವದ ಮಟ್ಟವು ಅವರ ಇತರ ಜ್ಞಾನಶಾಖೆಗಳ ಮಟ್ಟವನ್ನು ನಿಯಂತ್ರಿಸುತ್ತದೆ.

ಎಂಟನೆಯ ತರಗತಿಯಲ್ಲಿ ಕನ್ನಡ ಕಲಿಕೆಯಲ್ಲಿ ಶೇಕಡಾ ೪೫ ಕ್ಕಿಂತ ಕಡಿಮೆ ಅಂಕಗಳನ್ನು ತೆಗೆದ ೫೦೦ ವಿದ್ಯಾರ್ಥಿಗಳಲ್ಲಿ ಶೇಕಡಾ ೧೦೦ ರಷ್ಟು ವಿದ್ಯಾರ್ಥಿಗಳು ಗಣಿತದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಶೇಕಡಾ ೯೮ ರಷ್ಟು ವಿದ್ಯಾರ್ಥಿಗಳು ವಿಜ್ಞಾನದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಶೇಕಡಾ ೮೯ ರಷ್ಟು ವಿದ್ಯಾರ್ಥಿಗಳು ಸಮಾಜ ವಿಜ್ಞಾನದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ.

ಒಂಭತ್ತನೆಯ ತರಗತಿಯಲ್ಲಿ ಕನ್ನಡ ಕಲಿಕೆಯಲ್ಲಿ ಶೇಕಡಾ ೪೫ ಕ್ಕಿಂತ ಕಡಿಮೆ ಅಂಕಗಳನ್ನು ತೆಗೆದ ೫೦೦ ವಿದ್ಯಾರ್ಥಿಗಳಲ್ಲಿ ಶೇಕಡಾ ೯೯ರಷ್ಟು ವಿದ್ಯಾರ್ಥಿಗಳು ಗಣಿತದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಶೇಕಡಾ ೧೦೦ ರಷ್ಟು ವಿದ್ಯಾರ್ಥಿಗಳು ವಿಜ್ಞಾನದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಶೇಕಡಾ ೯೪ ರಷ್ಟು ವಿದ್ಯಾರ್ಥಿಗಳು ಸಮಾಜ ವಿಜ್ಞಾನದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ.

ಹತ್ತನೆಯ ತರಗತಿಯಲ್ಲಿ ಕನ್ನಡ ಕಲಿಕೆಯಲ್ಲಿ ಶೇಕಡಾ ೪೫ ಕ್ಕಿಂತ ಕಡಿಮೆ ಅಂಕಗಳನ್ನು ತೆಗೆದ ೫೦೦ ವಿದ್ಯಾರ್ಥಿಗಳಲ್ಲಿ ಶೇಕಡಾ ೯೮ರಷ್ಟು ವಿದ್ಯಾರ್ಥಿಗಳು ಗಣಿತದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಶೇಕಡಾ ೯೭ ರಷ್ಟು ವಿದ್ಯಾರ್ಥಿಗಳು

ವಿಜ್ಞಾನದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ. ಶೇಕಡಾ ೯೯ ರಷ್ಟು ವಿದ್ಯಾರ್ಥಿಗಳು ಸಮಾಜ ವಿಜ್ಞಾನದಲ್ಲೂ ಕಡಿಮೆ ಅಂಕಗಳನ್ನು ಗಳಿಸಿದ್ದಾರೆ.

ಕನ್ನಡ ಕಲಿಕೆಯಲ್ಲಿ ಹಿಂದುಳಿದಿರುವ ವಿದ್ಯಾರ್ಥಿಗಳು ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನದ ಅಧ್ಯಯನದಲ್ಲಿಯೂ ಹಿಂದುಳಿದಿದ್ದಾರೆ. ಕನ್ನಡ ಭಾಷಾ ಕಲಿಕೆಯ ಪ್ರಭಾವವು ಕನ್ನಡ ಮಾಧ್ಯಮದ ಕಲಿಕೆಯ ಮೇಲೂ ಗಾಢವಾದ ಪ್ರಭಾವವನ್ನು ಬೀರಿರುವುದು ಅಧ್ಯಯನದಲ್ಲಿ ಕಂಡುಬಂದಿದೆ. ಗಣಿತ, ವಿಜ್ಞಾನ ಹಾಗೂ ಸಮಾಜ ವಿಜ್ಞಾನ ಬೋಧಿಸುವ ಶಿಕ್ಷಕರು ಕೂಡ ಇದೇ ಅಭಿಪ್ರಾಯವನ್ನು ನೀಡಿದ್ದಾರೆ.

ಕರ್ನಾಟಕದ ಪ್ರಾಥಮಿಕ ಹಾಗೂ ಪ್ರೌಢಶಾಲಾ ಶೈಕ್ಷಣಿಕ ವ್ಯವಸ್ಥೆಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳದ ಕಾರಣ ಕಲಿಕಾ ವಿಚಾರದಲ್ಲಿ ವಿದ್ಯಾರ್ಥಿಗಳು ಶಿಕ್ಷಕರನ್ನು ಸಂಪೂರ್ಣವಾಗಿ ಅವಲಂಬಿಸಬೇಕಾದ ಸನ್ನಿವೇಶವಿದೆ. ೨೦೧೨-೧೩ನೇ ಸಾಲಿನಲ್ಲಿ ಕರ್ನಾಟಕದ ಪ್ರೌಢಶಾಲೆಗಳಲ್ಲಿ ೨೭೩೮೭ ಶಿಕ್ಷಕರ ಹುದ್ದೆಗಳು ತೆರವಾಗಿವೆ. ವಿದ್ಯಾರ್ಥಿಗಳು ಕಲಿಕಾ ಸಂದರ್ಭದಲ್ಲಿ ಸಂಪೂರ್ಣವಾಗಿ ಶಿಕ್ಷಕರನ್ನೇ ಅವಲಂಬಿಸಿರುವ ಸನ್ನಿವೇಶದಲ್ಲಿರುವಾಗ ಶಿಕ್ಷಕರ ಅನುಪಸ್ಥಿತಿಯು ವಿದ್ಯಾರ್ಥಿಗಳ ಕಲಿಕೆಯ ಮೇಲೆ ವ್ಯತಿರಿಕ್ತವಾದ ಗಾಢ ಪರಿಣಾಮ ಬೀರುತ್ತದೆ.

ತ್ರಿಭಾಷಾ ಸೂತ್ರದ ಹಿನ್ನೆಲೆಯಲ್ಲಿ ಹಿಂದಿ ಹಾಗೂ ಆಂಗ್ಲ ಭಾಷೆಗಳನ್ನು ಕನ್ನಡದಂತೆಯೇ ಬೋಧಿಸಲಾಗುತ್ತಿದೆ. ಪಾಠ ಮತ್ತು ಪದ್ಯ ಬೋಧನಾ ವಿಧಾನಗಳು ಉಪನ್ಯಾಸ ಮಾದರಿಯಲ್ಲಿ ನಡೆಯುತ್ತಿವೆ. ಇಂಗ್ಲಿಷ್ ಹಾಗೂ ಹಿಂದಿ ಭಾಷಾ ಶಿಕ್ಷಕರಿಗೂ ಕೂಡ ಪ್ರತ್ಯೇಕವಾದ ಹಾಗೂ ವಿಶೇಷವಾದ ತರಬೇತಿಗಳಿಲ್ಲ. ಕನ್ನಡ ಭಾಷಾ ಬೋಧನೆಯ ಕುರಿತು ಇರುವ ತರಬೇತಿಯಂತೆಯೇ ಉಳಿದ ಭಾಷೆಗಳ ತರಬೇತಿಗಳಿವೆ.

ಕರ್ನಾಟಕದಲ್ಲಿನ ಕನ್ನಡ ಮಾತೃಭಾಷೆಯಾದ ವಿದ್ಯಾರ್ಥಿಗಳ ಕನ್ನಡ ಕಲಿಕಾಸನ್ನಿವೇಶಕ್ಕೂ ಅದೇ ವಿದ್ಯಾರ್ಥಿಗಳು ಇಂಗ್ಲಿಷ್ ಭಾಷೆಯನ್ನು ಕಲಿಯುವ ಸನ್ನಿವೇಶಕ್ಕೂ ಬಹಳ ವ್ಯತ್ಯಾಸವಿದೆ. ಹೊಸ ಭಾಷೆಯನ್ನು ಕಲಿಸುವ ಸಂದರ್ಭಗಳಲ್ಲಿ ವಿಶೇಷವಾದ ಪರಿಣತಿಯಿರುವ ಹಾಗೂ ಈ ಕುರಿತು ವಿಶೇಷ ತರಬೇತಿಗಳನ್ನು ಪಡೆದಿರುವ ಶಿಕ್ಷಕರ ಆವಶ್ಯಕತೆಯಿದೆ. ಶಿಕ್ಷಣ ಇಲಾಖೆಯು ಈ ಕುರಿತು ಯಾವುದೇ ಪೂರ್ವ ತಯಾರಿಗಳನ್ನು ಮಾಡಿಕೊಳ್ಳದೆಯೇ ತ್ರಿಭಾಷಾ ಸೂತ್ರವನ್ನು ಅಳವಡಿಸಿಕೊಂಡಿದೆ. ಬೋಧನಾ ವಿಧಾನವು ಅತ್ಯಂತ ಸಾಂಪ್ರದಾಯಿಕ ಪದ್ಧತಿಯಲ್ಲಿಯೇ ನಡೆಯುತ್ತಿದ್ದು ಯಾವುದೇ ಆಧುನಿಕ ಬೋಧನಾ ತಂತ್ರಗಳನ್ನು ಅಳವಡಿಸಿಕೊಂಡಿರುವುದಿಲ್ಲ.

ಪಾಠ ಮತ್ತು ಪದ್ಯಗಳನ್ನು ಮಕ್ಕಳಿಂದ ಓದಿಸುವುದು, ಕಠಿಣ ಪದಗಳ ಅರ್ಥವನ್ನು ಕನ್ನಡದಲ್ಲಿ ಬರೆಸುವುದು. ಪಾಠವನ್ನು ವಿವರಿಸುವುದು. ಟಿಪ್ಪಣಿ ಪುಸ್ತಕದಲ್ಲಿ

ಪ್ರಶ್ನೋತ್ತರಗಳನ್ನು ಬರೆಸುವುದು. ಪರೀಕ್ಷೆಗಳನ್ನು ನಡೆಸುವುದು. ಮೌಲ್ಯಮಾಪನ ಮಾಡಿ ಉತ್ತೀರ್ಣರಾದಲ್ಲಿ ಮುಂದಿನ ತರಗತಿಗೆ ಕಳುಹಿಸುವುದು. ಇದು ಹೆಚ್ಚಿನ ಪ್ರೌಢಶಾಲೆಗಳಲ್ಲಿ ನಡೆಯುವ ಯಾಂತ್ರಿಕ ವಿಧಾನವಾಗಿದೆ.

ಮೇಲಿನ ಎಲ್ಲಾ ಕಾರಣಗಳಿಂದಾಗಿ ಕರ್ನಾಟಕದ ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಕಲಿಕೆಯ ಸ್ವರೂಪದ ಉದ್ದೇಶಗಳು ಸಾಧಿತವಾಗುತ್ತಿಲ್ಲ. ಆಂಗ್ಲ ಹಾಗೂ ಹಿಂದಿ ಭಾಷೆಗಳ ಅಳವಡಿಕೆಯ ಹಿನ್ನೆಲೆಯಲ್ಲಿನ ಬೋಧನೋದ್ದೇಶಗಳು ಸಾಧಿತವಾಗುತ್ತಿಲ್ಲ. ಪಠ್ಯಪುಸ್ತಕಗಳ ಆಶಯಗಳು ವಿದ್ಯಾರ್ಥಿಗಳಲ್ಲಿ ಮೈಗೂಡುತ್ತಿಲ್ಲ. ಕನ್ನಡ ಭಾಷಾ ಕೌಶಲಗಳನ್ನು ವಿದ್ಯಾರ್ಥಿಗಳಿಗೆ ಸಮರ್ಪಕವಾಗಿ ಕಲಿಸದ ಕಾರಣದಿಂದಾಗಿ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳ ಇತರೆ ಜ್ಞಾನಶಾಖೆಗಳ ಮಟ್ಟವೂ ಗಣನೀಯ ಪ್ರಮಾಣದಲ್ಲಿ ಕುಸಿದಿದೆ. ಕಲಿಕೆಯು ಸಂತಸದ ಕಲಿಕೆಯಾಗದೆ ಕಂಠಪಾಠದ ಕಲಿಕೆಯಾಗಿರುವುದರಿಂದ ಪ್ರೌಢಶಾಲಾ ತರಗತಿಗಳಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯ ಧ್ಯೇಯೋದ್ದೇಶಗಳು ಸಾಧಿತವಾಗುತ್ತಿಲ್ಲ.

## ೬.೨ ಸಂಶೋಧನಾರ್ಥಿಯ ಶಿಫಾರಸ್ಸುಗಳು

ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಗಳಲ್ಲಿನ ಕನ್ನಡ ಕಲಿಕಾ ವಾತಾವರಣವು ಸಂತಸದ ಕಲಿಕೆಯ ವಾತಾವರಣವಾಗಬೇಕಿದೆ. ಸಾಂಪ್ರದಾಯಿಕ ಬೋಧನಾ ಪದ್ಧತಿಯು ಕೊನೆಗಾಣಬೇಕಿದೆ. ಆಧುನಿಕ ಸಂದರ್ಭದ ವೈಜ್ಞಾನಿಕ ಆವಿಷ್ಕಾರಗಳನ್ನು ಕಲಿಕೆ ಹಾಗೂ ಬೋಧನಾ ಸಂದರ್ಭಗಳಲ್ಲಿ ರೂಢಿಸಿಕೊಳ್ಳಬೇಕಿದೆ. ಇಂದಿನ ಸಮಾಜದ ನಿರೀಕ್ಷೆಗಳಿಗೆ ತಕ್ಕಂತೆ ಶೈಕ್ಷಣಿಕ ವ್ಯವಸ್ಥೆಯನ್ನು ಪುನರ್ ರೂಪಿಸಬೇಕಿದೆ. ಈ ನಿಟ್ಟಿನಲ್ಲಿ ಕೆಲವು ಕಾರ್ಯಯೋಜನೆಗಳನ್ನು ತರಬೇಕಾಗಿದೆ.

### ೧. ಸರ್ಕಾರದ ಭಾಷಾಯೋಜನೆಗಳು

ಕನ್ನಡವನ್ನು ಬೆಳೆಸುವ ನಿಟ್ಟಿನಲ್ಲಿ ಸರ್ಕಾರವು ಮಹತ್ವದ ಭಾಷಾ ಯೋಜನೆಗಳನ್ನು ಜಾರಿಗೆ ತರುವ ಅಗತ್ಯವಿದೆ. ಕನ್ನಡವನ್ನು ವಿಜ್ಞಾನ ತಂತ್ರಜ್ಞಾನಗಳ ಭಾಷೆಯನ್ನಾಗಿ ಬೆಳೆಸುವಂಥಹ, ವೈದ್ಯಕೀಯ ಶಾಸ್ತ್ರ, ಸಮಾಜ ವಿಜ್ಞಾನ, ಜೀವ ವಿಜ್ಞಾನ, ರಾಜಕೀಯ ಶಾಸ್ತ್ರಗಳ ಭಾಷೆಯನ್ನಾಗಿ ಕನ್ನಡವನ್ನು ಬೆಳೆಸಬಲ್ಲಂಥಹ, ಸರಳ ಬಳಕೆಯಲ್ಲಿ ಅನುಸರಿಸುವಂತೆ ಕನ್ನಡವನ್ನು ಗಣಕಯಂತ್ರದ ಪರಿಭಾಷೆಯನ್ನಾಗಿಸುವಂಥಹ ಯೋಜನೆಗಳನ್ನು ಸರಕಾರ ರೂಪಿಸಬೇಕಾದ ಅಗತ್ಯವಿದೆ.

ಉದ್ಯೋಗ ಸೃಷ್ಟಿಯ ಹಿನ್ನೆಲೆಯ ನೆಲೆಯಲ್ಲಿ ಆಂಗ್ಲಭಾಷೆಯ ಪ್ರಭಾವ ಇಂದು ವ್ಯಾಪಕವಾಗಿದೆ. ಕನ್ನಡ ಮಾಧ್ಯಮ ಅಥವಾ ಕನ್ನಡ ಕಲಿತರೆ ಉದ್ಯೋಗಕ್ಕೆ

ಅನುಕೂಲವಾಗುವುದಿಲ್ಲ ಎಂಬ ವಾತಾವರಣವಿದೆ. ಇಂತಹ ಮೂಲಭೂತವಾದ ಕೆಲವು ಸೂಕ್ಷ್ಮಗಳನ್ನು ಗಮನಿಸಿ ಕನ್ನಡ ಕಲಿತರೂ ಉದ್ಯೋಗಕ್ಕೆ ಯಾವ ಸಮಸ್ಯೆಯಾಗಲಾರದೆಂಬ ವ್ಯವಸ್ಥೆಯ ವಾತಾವರಣ ಹಾಗೂ ಅದಕ್ಕೆ ಬೇಕಾದ ಸೌಲಭ್ಯಗಳನ್ನು, ಯೋಜನೆಗಳನ್ನು ಜಾರಿಗೆ ತರಬೇಕಾದ ಅವಶ್ಯಕತೆಯಿದೆ. ಕರ್ನಾಟಕದಲ್ಲಿನ ಉದ್ಯೋಗದಾತ ವಲಯಗಳಲ್ಲಿ ಕನ್ನಡದ ಅನುಷ್ಠಾನವನ್ನು ಮಾಡಬೇಕಿದೆ. ಇಲಾಖೆ ಹಾಗೂ ಕಚೇರಿಯಲ್ಲಿ ಕನ್ನಡದ ಅನುಷ್ಠಾನವಾಗಬೇಕಿದೆ. ಅಲ್ಲದೆ ಖಾಸಗಿ ಕ್ಷೇತ್ರದಲ್ಲೂ ಕನ್ನಡವನ್ನು ಕಡ್ಡಾಯವನ್ನಾಗಿಸುವುದರ ಮೂಲಕ ಕರ್ನಾಟಕದಲ್ಲಿ ಉದ್ಯೋಗಿಯಾದ ಬೇರೆ ರಾಜ್ಯ, ದೇಶದ ಪ್ರಜೆಗಳೂ ಕನ್ನಡ ಕಲಿಯಲೇಬೇಕಾದ ಅವಶ್ಯಕತೆಯಿದೆ ಎಂಬಂತಹ ವಾತಾವರಣವನ್ನು ನಿರ್ಮಾಣ ಮಾಡಬೇಕಾಗಿದೆ.

ಕನ್ನಡವನ್ನು ಶಿಕ್ಷಣದ ಮಾಧ್ಯಮವನ್ನಾಗಿ ಉಳಿಸಿಕೊಳ್ಳದಿದ್ದರೆ, ಅದರ ಅಸ್ತಿತ್ವಕ್ಕೆ ಬಹುದೊಡ್ಡ ತೊಂದರೆಯಿದೆ. ಆಂಗ್ಲ ಮಾಧ್ಯಮದಲ್ಲಿನ ಶಿಕ್ಷಣದ ಆಕರ್ಷಣೆಯಿಂದಾಗಿ ಕನ್ನಡ ಮಾಧ್ಯಮದ ಶಾಲೆಗಳನ್ನು ಮುಚ್ಚಬೇಕಾದ ಪರಿಸ್ಥಿತಿ ನಿರ್ಮಾಣವಾಗುತ್ತಿದೆ. ಆದುದರಿಂದ ಸರಕಾರ ಈ ಕೂಡಲೇ ಕ್ರಮಗಳನ್ನು ಕೈಗೊಂಡು ಕನ್ನಡವನ್ನು ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಸಮಗ್ರ ಕನ್ನಡಾಭಿವೃದ್ಧಿ ಯೋಜನೆಗಳನ್ನು ರೂಪಿಸಬೇಕಾದ ಅವಶ್ಯಕತೆಯಿದೆ.

**೨. ಕನ್ನಡ ಭಾಷಾ ಬೋಧನೆಯ ಗುರಿ,ಉದ್ದೇಶಗಳು ನಿಖರವಾಗಬೇಕು**

ಕನ್ನಡ ಭಾಷಾ ಬೋಧನೆಯ ಗುರಿ ಹಾಗೂ ಉದ್ದೇಶಗಳು ಸ್ಪಷ್ಟವಾಗಿರಬೇಕು, ನಿಖರವಾಗಿರಬೇಕು, ಶಿಕ್ಷಕರಿಗೆ ಅರ್ಥವಾಗುವಂತಿರಬೇಕು, ತರಗತಿಯೊಳಗೆ ಪ್ರಯೋಗಿಸುವಂತಿರಬೇಕು, ವಿದ್ಯಾರ್ಥಿಗಳು ಅರಗಿಸಿಕೊಳ್ಳುವಂತಿರಬೇಕು.

ಸ್ವಾತಂತ್ರ್ಯದ ನಂತರದ ದಶಕಗಳಲ್ಲಿದ್ದ ನೀತಿ ಪಾಠದ ಪಠ್ಯಪುಸ್ತಕಗಳಂತೆ ಪ್ರತ್ಯೇಕ ನೀತಿಪಾಠಗಳ ಪಠ್ಯಪುಸ್ತಕಗಳನ್ನು ಜಾರಿಗೊಳಿಸಬೇಕಾಗಿದೆ. ಕನ್ನಡ ಭಾಷಾ ಬೋಧನೆಯ ಉದ್ದೇಶಗಳೊಂದಿಗಿರುವ ನೀತಿ ಪಾಠದ ಉದ್ದೇಶದ ಅಂಶಗಳು ಪ್ರತ್ಯೇಕಿಸಬೇಕಿದೆ. ಇದರಿಂದ ಕನ್ನಡ ಕಲಿಕಾ–ಬೋಧನಾ ವಾತಾವರಣದಲ್ಲಿನ ಅನೇಕ ಗೊಂದಲಗಳು, ಸಮಸ್ಯೆಗಳು ಕೊನೆಗಾಣುತ್ತವೆ. ಕನ್ನಡ ಭಾಷೆಯನ್ನು ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ಕಲಿಸಲು ಹಾಗೂ ಭಾಷಾ ಕೌಶಲಗಳನ್ನು ಸಂಪೂರ್ಣವಾಗಿ, ಸಮರ್ಥವಾಗಿ ಕಲಿಸಬೇಕಾದಲ್ಲಿ ಮತ್ತು ಕನ್ನಡ ಭಾಷಾ ಬೋಧನೆಯ ಉದ್ದೇಶಸ್ಪಷ್ಟವಾಗಬೇಕಾದಲ್ಲಿ ಭಾಷಾ ಪಠ್ಯವನ್ನು ಭಾಷಾ ವಿಜ್ಞಾನದ ದೃಷ್ಟಿಯ ಪಠ್ಯವನ್ನಾಗಿಸಬೇಕಿದೆ. ಭಾಷಾ ವಿಚಾರಗಳನ್ನು ಹಾಗೂ ಸಾಹಿತ್ಯದ ವಿಚಾರಗಳನ್ನು ವಿದ್ಯಾರ್ಥಿಗಳಿಗೆ ಪ್ರತ್ಯೇಕವಾಗಿ ಕಲಿಸುವ ಪ್ರಯೋಗಗಳನ್ನು ಶಿಕ್ಷಣ ಇಲಾಖೆಯು ಈ ನಿಟ್ಟಿನಲ್ಲಿ ನಡೆಸಬಹುದಾಗಿದೆ.

**೩. ಸ್ಪಷ್ಟ ಓದು ಶುದ್ಧ ಬರಹದ ತರಗತಿಗಳು**

'ಕನ್ನಡ ಜಾಗೃತಿ ವರ್ಷ', 'ಸ್ಪಷ್ಟ ಓದು ಶುದ್ಧ ಬರಹ ವರ್ಷ', 'ಗುಣಾತ್ಮಕ ಶಿಕ್ಷಣಕ್ಕಾಗಿ ಕ್ರಿಯಾಶೀಲ ಆಡಳಿತ' ಇತ್ಯಾದಿಯಾಗಿ ಇಲಾಖೆಯು ಆಚರಣೆಗಾಗಿ ಘೋಷಣೆ ಮಾಡಿದರೆ ಸಾಲದು. ದಿಟ್ಟವಾಗಿ ಅನುಷ್ಠಾನಕ್ಕೆ ತರಬೇಕು.

ಪ್ರಾಥಮಿಕ ಶಿಕ್ಷಣದ ೫ನೆಯ ಅಥವಾ ೬ನೆಯ ತರಗತಿಯನ್ನು, ಅಥವಾ ಈ ಎರಡೂ ತರಗತಿಗಳನ್ನು 'ಸ್ಪಷ್ಟ ಓದು ಶುದ್ಧ ಬರಹದ ತರಗತಿ'ಯನ್ನಾಗಿ ಪರಿವರ್ತಿಸಬೇಕು. ಈ ತರಗತಿಗಳಲ್ಲಿ ಲಿಪಿ ಗ್ರಹಿಕೆಯ ಕೌಶಲವನ್ನು ಸಂಪೂರ್ಣವಾಗಿ ವಿದ್ಯಾರ್ಥಿಗಳು ಕರಗತಮಾಡಿಕೊಳ್ಳುವಂತೆ ನೋಡಿಕೊಳ್ಳಬೇಕು. ಸ್ಪಷ್ಟ ಓದು ಹಾಗೂ ಶುದ್ಧ ಬರಹದ ಕೌಶಲವನ್ನು ಕಲಿಸಲಿಕ್ಕಾಗಿ ಭಾಷಾ ಶಿಕ್ಷಕರಿಗೆ ವಿಶೇಷ ತರಬೇತಿಯನ್ನು ನೀಡಬೇಕು. ಇದಕ್ಕಾಗಿ ವಿಶೇಷ ಪಠ್ಯಗಳನ್ನು ಭಾಷಾ ತಜ್ಞರು ಹಾಗೂ ಸೃಜನಶೀಲ ಶಿಕ್ಷಕರ ಸಹಯೋಗದೊಂದಿಗೆ ರಚನೆಮಾಡಬೇಕು. ಈ ತರಗತಿಯ ಬೋಧನಾ ವಿಧಾನ ಹಾಗೂ ಮೌಲ್ಯ ಮಾಪನ ವಿಧಾನಗಳು ಸಾಂಪ್ರದಾಯಿಕ ಮಾದರಿಯದ್ದಾಗಬಾರದು. ವಿಶೇಷವಾದ ಬೋಧನಾವಿಧಾನ ಹಾಗೂ ವಿಶೇಷವಾದ ಮೌಲ್ಯಮಾಪನ ವಿಧಾನಗಳನ್ನು ಅಳವಡಿಸಬೇಕು. ಇದರಿಂದ ಲಿಪಿ ಗ್ರಹಿಕೆಯ ಸಮಸ್ಯೆಯಿಂದ ಬಳಲುತ್ತಿರುವ ಅದೆಷ್ಟೋ ವಿದ್ಯಾರ್ಥಿಗಳಿಗೆ ಮುಕ್ತಿದೊರೆತಂತಾಗುತ್ತದೆ. ವಿದ್ಯಾರ್ಥಿಗಳು ಪಠ್ಯಪುಸ್ತಕಗಳನ್ನು ಸ್ವಾಧ್ಯಾಯದ ಮೂಲಕ ಕಲಿಯಲು ಹಾಗೂ ಓದುವ ಕೌಶಲವನ್ನು ಬೆಳೆಸಲು ಇದು ಅತ್ಯಂತ ಸಹಾಯಕವಾಗುತ್ತದೆ. ಪ್ರದೇಶಕ್ಕನುಗುಣವಾದ ಪರಿಸರದ ಭಾಷೆಯನ್ನು ವಿದ್ಯಾರ್ಥಿಗಳು ಸಭಾ ಸಂದರ್ಭಗಳಲ್ಲಿಯೂ ನಿರರ್ಗಳವಾಗಿ ಮಾತನಾಡುವಂಥಹ ಸನ್ನಿವೇಶಗಳಿರಬಹುದಾದ ಕಲಿಕಾ ವಾತಾವರಣವನ್ನು ನಿರ್ಮಿಸುವಂಥಹ ಪಠ್ಯಗಳ ರಚನೆಯಾಗಬೇಕು. ಸರಕಾರ ಈ ನಿಟ್ಟಿನಲ್ಲಿ ಕಾರ್ಯಯೋಜನೆಗಳನ್ನು ರೂಪಿಸಿಕೊಳ್ಳಬೇಕಾದ ಅನಿವಾರ್ಯತೆಯಿದೆ.

ಸುಂದರ ಕೈಬರಹವೂ ಒಂದು ಕುಶಲತೆ. ಅಧ್ಯಯನಕ್ಕಾಗಿ ಸಮೀಕ್ಷಿಸಿದ ಹೆಚ್ಚಿನ ಶಾಲೆಗಳಲ್ಲಿ ವಿದ್ಯಾರ್ಥಿಗಳ ಅಕ್ಷರಗಳು ವಿಕಾರವಾಗಿವೆ. ಎಂಟು ಹತ್ತು ವರ್ಷಗಳಿಂದ ಕನ್ನಡದ ಅಕ್ಷರಗಳನ್ನು ನಿರಂತರವಾಗಿ ಬರೆಯುತ್ತಿದ್ದರೂ ಕೂಡ ಅಕ್ಷರಗಳ ಆಕಾರ ಸಮರ್ಪಕವಾಗಿಲ್ಲದಿರುವುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಸ್ಪಷ್ಟ ಓದು ಶುದ್ಧ ಬರಹಗಳ ತರಗತಿಯಲ್ಲಿ ಸುಂದರ ಕೈಬರಹವನ್ನು ರೂಢಿಸುವ ಕೆಲಸಗಳೂ ಕೂಡ ನಡೆಯಬೇಕಿದೆ.

**೪. ನೂತನ ಏಕರೂಪೀ ಮಾಧ್ಯಮ**

ಶಿಕ್ಷಣ ಕ್ಷೇತ್ರದಲ್ಲಿರುವ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮವೆಂಬ ಎರಡು ಭಿನ್ನ ದೃಷ್ಟಿಕೋನಗಳಿಗೆ ಶಾಶ್ವತ ಪರಿಹಾರಗಳನ್ನು ಕಂಡುಕೊಳ್ಳಬೇಕಿದೆ. ಬಹುಕಾಲದಿಂದ

ಬಹಳ ಚರ್ಚಿತವಾಗುತ್ತಿರುವ ಕಲಿಕಾ ಮಾಧ್ಯಮದ ಸಮಸ್ಯೆಗಳನ್ನು ಸಂಪೂರ್ಣವಾಗಿ ಬಗೆಹರಿಸಲು ಸರಕಾರ ಏಕರೂಪೀ ಕಲಿಕಾ ಮಾಧ್ಯಮ ನೀತಿಯನ್ನು ಜಾರಿಗೆ ತರಬೇಕಾಗಿದೆ.

| | |
|---|---|
| **ಒಂದರಿಂದ ನಾಲ್ಕನೆಯ ತರಗತಿಯವರೆಗೆ** | **ಸಂಪೂರ್ಣ ಕನ್ನಡ ಮಾಧ್ಯಮ** |

**ಐದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ಏಕರೂಪೀ ಮಾಧ್ಯಮದ ಶಾಲೆಗಳು**

| **ಕನ್ನಡ ಮಾಧ್ಯಮ** | **ಆಂಗ್ಲ ಮಾಧ್ಯಮ** |
|---|---|
| ಸಮಾಜ ವಿಜ್ಞಾನ | ವಿಜ್ಞಾನ |
| ಪರಿಸರ ಅಧ್ಯಯನ | ಗಣಿತ |
| ಮೌಲ್ಯ ಶಿಕ್ಷಣ | ಕಂಪ್ಯೂಟರ್ |
| ಲಲಿತಕಲೆ | |
| ಕರಕುಶಲ ಕಲೆ | |
| ದೈಹಿಕ ಶಿಕ್ಷಣ | |

ಈ ನೀತಿಯ ಪ್ರಕಾರ, ನಾಲ್ಕನೆಯ ತರಗತಿಯವರೆಗೆ ಮಾತೃಭಾಷೆಯಲ್ಲಿ ಶಿಕ್ಷಣ ನೀಡುವುದು. ಐದನೆಯ ತರಗತಿಯಿಂದ ಹತ್ತನೆಯ ತರಗತಿಯವರೆಗೆ ಸಮಾಜ ವಿಜ್ಞಾನ, ಪರಿಸರ ಅಧ್ಯಯನ, ಮೌಲ್ಯ ಶಿಕ್ಷಣ, ಲಲಿತಕಲೆಗಳನ್ನು ಕನ್ನಡ ಮಾಧ್ಯಮದಲ್ಲೂ, ಗಣಿತ, ವಿಜ್ಞಾನ, ಕಂಪ್ಯೂಟರ್ ಗಳನ್ನು ಆಂಗ್ಲ ಮಾಧ್ಯಮದಲ್ಲೂ ಬೋಧಿಸಬೇಕು. ಇದರಿಂದ ಪ್ರಸ್ತುತ ಶಿಕ್ಷಣ ಕ್ಷೇತ್ರದಲ್ಲಿ ಅನಗತ್ಯವಾಗಿ ತಲೆದೋರಿರುವ ಹಾಗೂ ವಿದ್ಯಾರ್ಥಿಗಳಲ್ಲಿಯೇ ತರತಮ ಭಾವಕ್ಕೆ ಕಾರಣವಾಗಿರುವ ಸಮಸ್ಯೆಗೆ ಶಾಶ್ವತ ಪರಿಹಾರ ನೀಡಿದಂತಾಗುತ್ತದೆ. ಸರಕಾರ ಈ ನಿಟ್ಟಿನಲ್ಲಿ ದಿಟ್ಟ ಹೆಜ್ಜೆಯನ್ನು ಇಡಬೇಕಾಗಿದೆ.

**೫. ದೃಕ್ ಶ್ರವಣೋಪಕರಣಗಳ ಬಳಕೆ**

ಇದು ವಿಜ್ಞಾನ–ತಂತ್ರ ಜ್ಞಾನಗಳ ಯುಗ. ಮಾಹಿತಿ ತಂತ್ರ ಜ್ಞಾನದ ಯುಗ. ತಾಂತ್ರಿಕ ವಿಚಾರಗಳು ವಿದ್ಯಾರ್ಥಿಗಳನ್ನು ಬಹುಬೇಗ ಸೆಳೆಯುತ್ತವೆ. ಸಾಂಪ್ರದಾಯಿಕ ವಿಚಾರಗಳಲ್ಲಿ ವಿದ್ಯಾರ್ಥಿಗಳು ತೋರುವ ಆಸಕ್ತಿಗಿಂತ ತಂತ್ರಜ್ಞಾನಗಳಲ್ಲಿ ಮಕ್ಕಳಿಗೆ ಹೆಚ್ಚು ಆಸಕ್ತಿ. ತಾಂತ್ರಿಕ ವಿಚಾರಗಳನ್ನು ಅವರು ಬಹುಬೇಗ ಗ್ರಹಿಸಿಕೊಳ್ಳುತ್ತಾರೆ ಕೂಡ. ಕನ್ನಡ ಕಲಿಕಾ ವಾತಾವರಣಕ್ಕೆ ದೃಕ್ ಶ್ರವಣೋಪಕರಣಗಳನ್ನು ಅಳವಡಿಸುವ, ನವೀನ ಮಾದರಿಯ ಬೋಧನಾ ಕೌಶಲಗಳನ್ನು ತರಬೇಕಾಗಿದೆ. ಶಿಕ್ಷಕರನ್ನು ಈ ನಿಟ್ಟಿನಲ್ಲಿ ತರಬೇತಿಗೊಳಿಸಬೇಕಾಗಿದೆ.

ಬಿ.ಎಡ್.ತರಬೇತಿಯ ಸಂದರ್ಭದಲ್ಲಿಯೇ ಅತ್ಯಾಧುನಿಕ ಕೌಶಲಗಳನ್ನೊಳಗೊಂಡ ತರಬೇತಿಯನ್ನು ನೀಡಬೇಕಾಗಿದೆ.

ಆಂಗ್ಲ ಮಾಧ್ಯಮ ಶಾಲೆಗಳು ವಿದ್ಯಾರ್ಥಿಗಳನ್ನು ಹಾಗೂ ಪೋಷಕರನ್ನು ಸೆಳೆಯಲು 'ಸ್ಮಾರ್ಟ್ ಕ್ಲಾಸ್' ಎಂಬ ನೂತನ ವಿಧಾನಗಳನ್ನು ಅಳವಡಿಸಿಕೊಳ್ಳುತ್ತಿವೆ. ಕಲಿಕೆಯ ದೃಷ್ಟಿಯಿಂದ ಇವು ಉಪಯುಕ್ತವಾಗಿವೆ. ಶಿಕ್ಷಣ ಇಲಾಖೆಯು ಕಲಿಕೆಯ ನೈಜ ಅನುಭವಗಳನ್ನು ವಿದ್ಯಾರ್ಥಿಗಳಿಗೆ ಮೂಡಿಸುವುದರೊಂದಿಗೆ ಕಲಿಕೆಯನ್ನು ಹೆಚ್ಚು ಪ್ರಮಾಣ ಬದ್ಧವಾಗಿಸುವತ್ತ ಪ್ರಯೋಗಗಳನ್ನು ನಡೆಸಿ ಯೋಜನೆಗಳನ್ನು ರೂಪಿಸಬೇಕು.

ದೃಕ್ ಶ್ರವಣೋಪಕರಣಗಳನ್ನು ಸೂಕ್ತವಾಗಿ ಬಳಸಿಕೊಂಡು ಗದ್ಯ, ಕಾವ್ಯ, ವ್ಯಾಕರಣಗಳನ್ನು ವಿದ್ಯಾರ್ಥಿಗಳಿಗೆ ಅತ್ಯುನ್ನತ ಮಟ್ಟದಲ್ಲಿ ಕಲಿಸಬೇಕಾಗಿದೆ. ಪ್ರತೀ ಶಾಲೆಯಲ್ಲೂ ಕನ್ನಡ ಪ್ರಯೋಗಾಲಯಗಳನ್ನು ನಿರ್ಮಿಸಬೇಕಾದ ಅನಿವಾರ್ಯತೆಯಿದೆ. ಪಠ್ಯಪುಸ್ತಕಗಳಲ್ಲಿರುವ ಪಠ್ಯಕ್ರಮದ ವಿಚಾರಗಳನ್ನು ದೃಕ್ ಶ್ರವಣ ರೂಪದಲ್ಲಿ ವಿದ್ಯಾರ್ಥಿಗಳಿಗೆ ನೀಡಿ ವಿದ್ಯಾರ್ಥಿಗಳು ಕಲಿಕೆಯಲ್ಲಿ ಅತ್ಯಂತ ಉತ್ಸಾಹದಿಂದ ಪಾಲ್ಗೊಳ್ಳುವಂಥಹ ಕಾರ್ಯಯೋಜನೆಗಳನ್ನು ಹಮ್ಮಿಕೊಳ್ಳಬೇಕಿದೆ.

**೬. ಆಧುನಿಕ ಭಾಷಾ ವಿಜ್ಞಾನದ ಸಮರ್ಪಕ ಬಳಕೆ**

ಪ್ರೌಢಶಾಲಾ ಕನ್ನಡ ಶಿಕ್ಷಕರಾಗಬಯಸುವವರಿಗೆ ಪದವಿ ಹಂತದಲ್ಲೇ ಆಧುನಿಕ ಭಾಷಾವಿಜ್ಞಾನದ ಕುರಿತು ಬೋಧನೆ, ತರಬೇತಿ ಹಾಗೂ ವಿದ್ಯಾರ್ಥಿಗಳಿಗೆ ಭಾಷಾ ಸಾಮರ್ಥ್ಯ ಕಲಿಸುವಲ್ಲಿ ಭಾಷಾವಿಜ್ಞಾನವನ್ನು ಅಳವಡಿಸಿಕೊಳ್ಳಬೇಕಾದ ರೀತಿಗಳ ಕುರಿತ ಪಠ್ಯಕ್ರಮವಿರಬೇಕು. ಬಿ.ಎಡ್ ತರಬೇತಿಯಲ್ಲೂ ಆಧುನಿಕ ಭಾಷಾ ವಿಜ್ಞಾದ ಅಳವಡಿಕೆಯನ್ನು ತರಗತಿಯಲ್ಲಿ ಹೇಗೆ ಅಳವಡಿಸಿಕೊಳ್ಳಬಹುದೆಂಬ ವಿಚಾರಗಳನ್ನು ಸೇರಿಸಬೇಕಿದೆ. ಪ್ರಾಥಮಿಕ ಶಾಲಾ ಶಿಕ್ಷಣದಲ್ಲೂ ಶಿಕ್ಷಕರಿಗೆ ಪ್ರತ್ಯೇಕ ತರಬೇತಿ ನೀಡುವ ಆವಶ್ಯಕತೆಯಿದೆ. ಅವರಿಗೂ ಆಧುನಿಕ ಭಾಷಾವಿಜ್ಞಾನದ ಕುರಿತು, ತರಗತಿಯಲ್ಲಿ ಅದರ ಅಳವಡಿಕೆಯ ಕುರಿತು ತರಬೇತಿ ನೀಡಬೇಕಾಗಿದೆ.

ಪ್ರಾಥಮಿಕ ಶಾಲಾ ಕನ್ನಡ ಭಾಷಾ ಶಿಕ್ಷಕರ ತರಬೇತಿಯನ್ನು ಆಧುನಿಕ ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ರೂಪಿಸಬೇಕಾದ ಅನಿವಾರ್ಯತೆಯಿದೆ. ಆಧುನಿಕ ಭಾಷಾ ವಿಜ್ಞಾನದ ನೂತನ ಸಂಶೋಧನೆಗಳನ್ನು ಉಪಯೋಗಿಸಿಕೊಂಡು ತರಗತಿಯಲ್ಲಿ ಅಳವಡಿಸಿಕೊಳ್ಳುವ ಕುರಿತು ತರಬೇತಿಯನ್ನು ನೀಡಬೇಕಿದೆ. ಆಧುನಿಕ ಭಾಷಾ ವಿಜ್ಞಾನದಲ್ಲಾಗುವ ನೂತನ ಶೋಧನೆಗಳ ಕುರಿತು, ಭಾಷಾ ಬೋಧನೆಯಲ್ಲಾಗುವ ಹೊಸ ಹೊಸ ಆವಿಷ್ಕಾರಗಳ ಕುರಿತ ವಿಚಾರಗಳನ್ನು, ಮಾಹಿತಿಗಳನ್ನು ಶಿಕ್ಷಕರಿಗೆ ಕಾಲ ಕಾಲಕ್ಕೆ ಸರಿಯಾಗಿ ಒದಗಿಸುವ

ಕಾರ್ಯವಾಗಬೇಕಿದೆ. ಅದರ ಅನುಷ್ಠಾನಕ್ಕಾಗಿ ಬೇಕಾದ ಸಂಪನ್ಮೂಲಗಳನ್ನು ಶಾಲೆಗಳಿಗೆ ನೀಡಬೇಕಿದೆ. ವಿನೂತನ ಕಲಿಕಾ ಪದ್ಧತಿಗಳು ಭಾಷಾ ಬೋಧನೆಯಲ್ಲಿ ತರಲು ಅನುಕೂಲವಾಗುವಂತೆ ನೋಡಿಕೊಳ್ಳಬೇಕಿದೆ.

**೭. ಪ್ರಾಥಮಿಕ ಶಾಲೆಗಳಲ್ಲಿ ಲಿಪಿಕ (ಕಚೇರಿ ಸಹಾಯಕ) ಹುದ್ದೆಯ ಸೃಷ್ಟಿ**

ವಿದ್ಯಾರ್ಥಿಗಳ ಹಿತ ದೃಷ್ಟಿಯಿಂದ ಪ್ರಾಥಮಿಕ ಶಾಲೆಯಲ್ಲಿ ಲಿಪಿಕ ಹುದ್ದೆಗಳನ್ನು ಸೃಷ್ಟಿ ಮಾಡಬೇಕು. ಈ ಮೂಲಕ ಪ್ರಾಥಮಿಕ ಶಾಲಾ ಶಿಕ್ಷಕರ ಮೇಲಿರುವ ಬೋಧನೇತರ ಒತ್ತಡಗಳನ್ನು ಕಡಿಮೆ ಮಾಡಬೇಕು. ಬಿಸಿಯೂಟದ ಅಕ್ಕಿ, ಬೇಳೆ, ಎಣ್ಣೆಯ ಲೆಕ್ಕಾಚಾರಗಳು, ಸೈಕಲ್ ಯೋಜನೆಯ ಲೆಕ್ಕಾಚಾರಗಳು, ಉನ್ನತ ಕಛೇರಿಗಳಿಗೆ ಪ್ರತಿ ತಿಂಗಳೂ ಕಳುಹಿಸಬೇಕಾದ ಕೆಲವು ಲೆಕ್ಕಾಚಾರಗಳು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಡಿ.ಡಿ.ಪಿ.ಐ ಕಛೇರಿಗಾಗಿ ತಿರುಗಾಟಗಳು, ವೇತನ ಬಿಲ್ಲುಗಳ ತಯಾರಿ, ಅದಕ್ಕಾಗಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಗೆ, ಬ್ಯಾಂಕುಗಳಿಗೆ ತಿರುಗಾಟಗಳು, ಚುನಾವಣಾ ಕೆಲಸಗಳು, ಜನಗಣತಿ, ಮಕ್ಕಳ ಗಣತಿ ಹೀಗೆ ಅನೇಕ ಕೆಲಸಗಳಿಂದ ಶಿಕ್ಷಕರನ್ನು ಬಿಡಿಸಬೇಕಿದೆ. ಈ ಕೆಲಸಕ್ಕಾಗಿ ಲಿಪಿಕ ಹುದ್ದೆಯನ್ನು ಸೃಷ್ಟಿಸಬೇಕು. ಶಿಕ್ಷಕರು ತಮ್ಮನ್ನು ತಾವು ಸಂಪೂರ್ಣವಾಗಿ ಬೋಧನೆಯಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಗುವಂತೆ, ತಮ್ಮ ಕೌಶಲಗಳನ್ನು ಹೆಚ್ಚಿಸಿಕೊಳ್ಳಲು, ವೃತ್ತಿಯಲ್ಲಿ ಹೆಚ್ಚು ಪರಿಣತಿಗಳಿಸಲು, ನೂತನ ಜ್ಞಾನವನ್ನು ತಿಳಿಯಲು, ತಂತ್ರಜ್ಞಾನವನ್ನು ಕಲಿತು ಬೋಧನೆಯಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಾಗುವಂತೆ ನೋಡಿಕೊಳ್ಳಬೇಕು. ಶಿಕ್ಷಕರನ್ನು ಬೋಧನೆಗೆ ಮಾತ್ರ ಸೀಮಿತವಾಗಿರಿಸಿ, ಪ್ರತೀ ವಿದ್ಯಾರ್ಥಿಯ ಮೇಲೆ ವೈಯಕ್ತಿಕ ಗಮನ ನೀಡಲು ಸಾಧ್ಯವಾಗುವಂತೆ ನೋಡಿಕೊಳ್ಳುವ, ತನ್ಮೂಲಕವಾಗಿ ವಿದ್ಯಾರ್ಥಿಗಳ ಭಾಷಾ ಕಲಿಕೆ ಸಮೃದ್ಧವಾಗುವಂತೆ ಮಾಡಬಹುದಾದ ಕಾರ್ಯಯೋಜನೆಗಳನ್ನು ರೂಪಿಸಬೇಕು.

**೮. ಪ್ರಾಥಮಿಕ ಶಾಲೆಗಳಲ್ಲಿ ಭಾಷಾ ಶಿಕ್ಷಕರ ನೇಮಕಾತಿ**

ಪ್ರಾಥಮಿಕ ಶಾಲೆಯಲ್ಲಿ ಕನ್ನಡ ಭಾಷಾ ಶಿಕ್ಷಕರನ್ನು ನೇಮಿಸಬೇಕು. ಅವರಿಗೆ ಪ್ರತ್ಯೇಕವಾದ ಕನ್ನಡ ಬೋಧನಾ ತರಬೇತಿಯನ್ನು ನೀಡಬೇಕು. ಭಾಷಾ ಕೌಶಲಗಳನ್ನು ಆಧುನಿಕ ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ಕಲಿಸುವಂತೆ ತರಬೇತಿಯನ್ನು ನೀಡಬೇಕು.

ಪ್ರಾಥಮಿಕ ಶಾಲಾ ಭಾಷಾ ಶಿಕ್ಷಕರ ನೇಮಕಾತಿಯನ್ನು ಮಾಡುವಾಗ ಅವರಲ್ಲಿನ ಗಾಯನ, ಅಭಿನಯ, ನಾಟ್ಯ, ಭಾಷಾ ನಿಪುಣತೆ, ಆಧುನಿಕ ಭಾಷಾ ವಿಜ್ಞಾನದ ತಿಳಿವಳಿಕೆ, ಮಕ್ಕಳ ಮನಃಶಾಸ್ತ್ರ, ಮಕ್ಕಳೊಂದಿಗೆ ಬೆರೆಯುವ ರೀತಿ, ಕೈಬರಹ, ಸ್ವರಚನೆ ಇತ್ಯಾದಿ ಅಂಶಗಳನ್ನೂ ಗಮನಿಸಬೇಕಾಗಿದೆ.

## ೯. ತರಗತಿಯಲ್ಲಿನ ಮಕ್ಕಳ ಸಂಖ್ಯೆಯ ಗಣನೆ

ತರಗತಿಯ ಪ್ರತಿಯೊಬ್ಬ ವಿದ್ಯಾರ್ಥಿಯ ವಿಶೇಷತೆಯನ್ನು ಗುರುತಿಸುವ, ಪ್ರತಿಯೊಬ್ಬ ವಿದ್ಯಾರ್ಥಿಯ ಮನಃಶಾಸ್ತ್ರೀಯ ಹಿನ್ನೆಲೆಯನ್ನು ಗಮನಿಸಿ ಬೋಧಿಸುವ ವಾತಾವರಣವನ್ನು ನಿರ್ಮಿಸಬೇಕು. ತರಗತಿಯಲ್ಲಿ ವಿದ್ಯಾರ್ಥಿಗಳ ಸಂಖ್ಯೆ ೨೫ ರಿಂದ ೩೦ರ ವರೆಗೆ ಇರುವಂತೆ ನೋಡಿಕೊಳ್ಳಬೇಕು. ಶಿಕ್ಷಕರಿಗೆ ವಿದ್ಯಾರ್ಥಿಗಳ ಅಕ್ಷರ, ಕಾಗುಣಿತ, ಕೈಬರಹ, ವ್ಯಾಕರಣ, ಅಕ್ಷರ ಹಾಗೂ ಪದಗಳ ಉಚ್ಚಾರಣಾ ರೀತಿ, ಸ್ವರಭಾರ, ದನಿಯ ಏರಿಳಿತ, ಆಸಕ್ತಿ, ಅವಧಾನ, ಗ್ರಹಿಕೆ, ವಿದ್ಯಾರ್ಥಿಯ ಹಿನ್ನೆಲೆ, ಸಮಸ್ಯೆ ಇತ್ಯಾದಿಗಳನ್ನು ಸಮಗ್ರವಾಗಿ ಗಮನಿಸಿ, ಗುರುತಿಸಿ, ಅವುಗಳ ಕುರಿತು ಕಾರ್ಯಯೋಜನೆ ಹಮ್ಮಿಕೊಳ್ಳಲು ಸಾಧ್ಯವಾಗುವಂತೆ ನೋಡಿಕೊಳ್ಳಬೇಕು.

## ೧೦. ಬಿ.ಎಡ್ ತರಬೇತಿಯಲ್ಲಾಗಬೇಕಾದ ಬದಲಾವಣೆಗಳು

ಪ್ರೌಢಶಾಲಾ ವಿದ್ಯಾರ್ಥಿಗಳ ಕನ್ನಡ ಭಾಷಾ ಕಲಿಕೆಯ ದೃಷ್ಟಿಯಿಂದ ಬಿ.ಎಡ್ ತರಬೇತಿಯಲ್ಲಿ ಈ ಕೆಳಗಿನ ಬದಲಾವಣೆಗಳನ್ನು ತರಬೇಕಿದೆ.

- ಬಿ.ಎಡ್.ತರಬೇತಿಯನ್ನು ಎರಡು ವರ್ಷಗಳಿಗೆ ನಿಗದಿಗೊಳಿಸಬೇಕು
- ಕನ್ನಡ ಭಾಷಾ ಶಿಕ್ಷಕರ ತರಬೇತಿಗೆ ಪ್ರತ್ಯೇಕ ಪಠ್ಯಕ್ರಮವನ್ನು ರೂಪುಗೊಳಿಸಬೇಕು
- ಪ್ರೌಢಶಾಲಾ ವಿದ್ಯಾರ್ಥಿಗಳ ಮನಃಶಾಸ್ತ್ರದ ಆಳ ಅಧ್ಯಯನ ನಡೆಯುವಂತೆ ನೋಡಿಕೊಳ್ಳಬೇಕು.
- ನೂತನ ಬೋಧನ ವಿಧಾನಗಳನ್ನು ತರಬೇತಿಯಲ್ಲಿ ಕಲಿಸಬೇಕು
- ಪ್ರೌಢಶಾಲಾ ವಿದ್ಯಾರ್ಥಿಗಳ ಕನ್ನಡ ಭಾಷಾ ಕೌಶಲಗಳನ್ನು ವೃದ್ಧಿಪಡಿಸುವ ಯೋಜನೆಗಳು ಈ ತರಬೇತಿಯಲ್ಲಿರಬೇಕು.
- ಪ್ರಸ್ತುತ ಪ್ರೌಢಶಾಲಾ ಕನ್ನಡ ಕಲಿಕಾ ಸನ್ನಿವೇಶಗಳಿಗೆ ಪೂರಕವಾದ ತರಬೇತಿಯನ್ನು ನೀಡಬೇಕು. ಪ್ರಸ್ತುತದ ನಿರೀಕ್ಷೆಗಳನ್ನು ಪೂರೈಸುವಂತಹ ವಿಧಾನಗಳನ್ನು ಬೋಧಿಸಬೇಕು.
- ದೂರ ಶಿಕ್ಷಣದ ಮೂಲಕ ಬಿ.ಎಡ್. ತರಬೇತಿಯನ್ನು ನೀಡುವುದನ್ನು ನಿಷೇಧಿಸಬೇಕು.
- ಬಿ.ಎಡ್. ತರಬೇತಿಯ ಸಂದರ್ಭದಲ್ಲಿಯೇ ನೂತನ ದೃಕ್ ಶ್ರವಣೋಪಕರಣಗಳ ಬಗ್ಗೆ, ಅವುಗಳನ್ನು ಉಪಯೋಗಿಸುವ ರೀತಿಯ ಬಗ್ಗೆ, ತರಗತಿಯಲ್ಲಿ ಅಳವಡಿಸಿಕೊಳ್ಳುವ ಕುರಿತು ತರಬೇತಿ ಕೊಡಿಸಬೇಕು.

- ಆದುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಕನ್ನಡ ಕಲಿಸಬಹುದಾದ ಸಾಧ್ಯತೆಗಳಿಗೆ ಹೆಚ್ಚಿನ ಅವಕಾಶಗಳನ್ನು, ಜ್ಞಾನವನ್ನು ಈ ತರಬೇತಿಯ ಅವಧಿಯಲ್ಲಿ ನೀಡಬೇಕು.
- ಪ್ರೌಢಶಾಲಾ ಕನ್ನಡ ಭಾಷಾ ತರಗತಿಗೂ, ಬಿ.ಎಡ್. ತರಬೇತಿಯ ವಿಚಾರಗಳಿಗೂ ನೇರ ಸಂಬಂಧ, ಸಂಪರ್ಕ ಕಲ್ಪಿಸಬೇಕು.
- ಕನ್ನಡ ಭಾಷಾ ಶಿಕ್ಷಕ ತರಬೇತಿಗೆ ಬಿ.ಎಡ್. ತರಬೇತಿಯ ಸಂದರ್ಭದಲ್ಲಿ ಎಲ್ಲರಿಗೂ ಮುಕ್ತ ಅವಕಾಶ ನೀಡಬಾರದು. ಆರಂಭದಲ್ಲಿಯೇ ಕನ್ನಡ ಭಾಷಾ ಜ್ಞಾನ, ಕನ್ನಡದ ಕಾರ್ಯಗಳು, ವಿದ್ಯಾರ್ಥಿಗಳಿಗೆ ನಿಲುಕುವಂತಹ ವ್ಯಕ್ತಿತ್ವ, ಯೋಗ್ಯ ಶಿಕ್ಷಕನಾಗುವ ಅರ್ಹತೆ, ಆತನ ಗುಣ ಸ್ವಭಾವ, ಹವ್ಯಾಸಗಳನ್ನು ಗಮನಿಸಿ ಆಯ್ಕೆ ಮಾಡಿಕೊಳ್ಳುವುದು ಉತ್ತಮ.

**೧೧ ಪಠ್ಯ ಪುಸ್ತಕ ರಚನೆ**

ಲಿಪಿಗ್ರಹಿಕೆಯ ಹಂತದಲ್ಲೇ ಸಮಸ್ಯೆಗಳಿರುವ ಹದಿನಾಲ್ಕು ಹದಿನೈದು ವರ್ಷದ ಮಕ್ಕಳಿಗೆ ಸಂಪೂರ್ಣವಾಗಿ ಕನ್ನಡ ಸಾಹಿತ್ಯವನ್ನು ಪರಿಚಯಿಸಬಾರದು. ವ್ಯಾಕರಣ, ಛಂದಸ್ಸು, ಅಲಂಕಾರಗಳನ್ನು ಸಮಗ್ರವಾಗಿ ಪಠ್ಯದಲ್ಲಿ ಸೇರಿಸಬಾರದು. ಪಠ್ಯಪುಸ್ತಕ ಮಾದರಿಯ ಕನ್ನಡ ಭಾಷಾಕಲಿಕೆಗೆ ಬದಲಾಗಿ ನೂತನ ತಂತ್ರಜ್ಞಾನದ ವಿಧಾನಗಳನ್ನು ತರಬೇಕಿದೆ.

ವಿದ್ಯಾರ್ಥಿಗಳು ತಂತ್ರಜ್ಞಾನದ ಆವಿಷ್ಕಾರಗಳಿಗೆ, ದೃಶ್ಯ ಮಾಧ್ಯಮಗಳಿಗೆ ಬಹುಬೇಗ ಆಕರ್ಷಿತರಾಗುತ್ತಾರಾದ್ದರಿಂದ ಪಠ್ಯ ಪುಸ್ತಕ ರಚನಾ ವಿಚಾರದಲ್ಲೂ ಹೊಸ ಬಗೆಯ ಚಿಂತನೆಗಳು ಆಗಬೇಕಿವೆ. ಮಕ್ಕಳೂ ಹೊಸತನ ಬಯಸುತ್ತಾರೆ. ಅವರು ಇಷ್ಟಪಡುವ ದೃಶ್ಯ ಹಾಗೂ ಚಿತ್ರಗಳನ್ನು ಬಳಸಿ ಬೋಧಿಸಿದರೆ ಆಟದಂತೆ ಅವರಿಗೆ ಪಾಠವೂ ರುಚಿಸುತ್ತದೆ. ಸರ್ಕಾರ, ಸಾರ್ವಜನಿಕ ಶಿಕ್ಷಣ ಇಲಾಖೆ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಪರ ಸಂಘಟನೆಗಳು ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಬೇಕಾಗಿದೆ.

ಕರ್ನಾಟಕದಲ್ಲಿ 'ಅಜೀಂ ಪ್ರೇಮ್ ಜೀ ಸಂಸ್ಥೆ'ಯು ಕನ್ನಡ, ಹಿಂದಿ ಹಾಗೂ ಆಂಗ್ಲ ಈ ಮೂರೂ ಭಾಷೆಗಳನ್ನು ಒಂದೇ ಕಡೆ ಕಲಿಯುವಂತೆ ಸಿ.ಡಿ ಗಳನ್ನು ರೂಪಿಸಿದೆ. ಅಸರ್ ಮತ್ತು ಪ್ರಥಮ್ ಸಂಸ್ಥೆಗಳು ಶಿಕ್ಷಣ ಕ್ಷೇತ್ರಕ್ಕಾಗಿ ದುಡಿಯುತ್ತಿವೆ. ಶಿಕ್ಷಣದ ಗುಣಮಟ್ಟವನ್ನು ಕಾಯ್ದುಕೊಳ್ಳಲು ಹಾಗೂ ಶಿಕ್ಷಣದಲ್ಲಿ ನೂತನ ಆವಿಷ್ಕಾರಗಳನ್ನು ತರುವುದರ ಮೂಲಕ ಹೊಸ ಚಿಂತನೆಗಳನ್ನು ಕಲಿಕೆ ಹಾಗೂ ಬೋಧನೆಯ ಕ್ಷೇತ್ರದಲ್ಲಿ ತರುತ್ತಿರುವ ಅನೇಕ ಸಂಘ ಸಂಸ್ಥೆಗಳಿವೆ. ಅವುಗಳ ಸಹಯೋಗದೊಂದಿಗೆ ಕನ್ನಡ ಪಠ್ಯಪುಸ್ತಕಗಳನ್ನು ವಿದ್ಯಾರ್ಥಿಗಳ ಕಲಿಕೆಗೆ ಪೂರಕವಾಗುವಂತೆ ರಚಿಸಬೇಕಾಗಿದೆ.

## ೧೨. ಕನ್ನಡ ಭಾಷಾ ತರಗತಿ

ಕರ್ನಾಟಕದ ಪ್ರೌಢಶಾಲೆಗಳು ಸಂಪೂರ್ಣವಾಗಿ ಉಪನ್ಯಾಸ ಮಾದರಿಯ ಶಿಕ್ಷಣಕ್ಕೆ ಮಾತ್ರ ಪೂರಕವಾದ ತರಗತಿ ಕಟ್ಟಡಗಳನ್ನು ಹೊಂದಿವೆ. ಪರಿಣಾಮಕಾರಿ ಕನ್ನಡ ಬೋಧನೆಗೆ ಸಂಶೋಧನಾ ಆಧಾರಿತ, ಆಧುನಿಕ ತಂತ್ರಜ್ಞಾನ ಹೊಂದಿದ, ಗುಂಪು ಚಟುವಟಿಕೆಗಳಿಗೆ, ಸ್ವಾಧ್ಯಾಯಕ್ಕೆ, ಪ್ರಯೋಗಕ್ಕೆ, ಗೀತೆ–ನಾಟ್ಯ–ನಟನೆಗೆ ಪೂರಕ–ಪ್ರೇರಕವಾಗುವ, ಅತ್ಯಂತ ಉನ್ನತ ಮಟ್ಟದಲ್ಲಿ ಕಲಿಕಾ ಅನುಭವಗಳನ್ನು ಕೊಡುವ ತರಗತಿಗಳ ನಿರ್ಮಾಣವಾಗಬೇಕಿದೆ. ಮಕ್ಕಳನ್ನು ಓದಿನತ್ತ ಸೆಳೆಯಲು, ಅವರ ಆಸಕ್ತಿ–ಅಭಿರುಚಿಗಳನ್ನು ಹೆಚ್ಚಿಸಲು, ಸಂತಸದ ಕಲಿಕಾ ವಾತಾವರಣವನ್ನು ನಿರ್ಮಾಣಮಾಡಲು ಕೇವಲ ಪಠ್ಯ–ಪುಸ್ತಕಗಳು ಮಾತ್ರವಲ್ಲ, ಆಕರ್ಷಕ ಶಾಲಾ ಕಟ್ಟಡಗಳೂ, ತರಗತಿಗಳೂ, ಬೆಂಚು, ಖುರ್ಚಿ, ಬೋರ್ಡುಗಳೂ ಸಹಾಯ ಮಾಡುತ್ತವೆ ಎಂಬುದನ್ನು ಮಕ್ಕಳ ಮನಃಶಾಸ್ತ್ರದ ಹಿನ್ನೆಲೆಯಲ್ಲಿ ಅರ್ಥಮಾಡಿಕೊಂಡು, ಈ ನಿಟ್ಟಿನಲ್ಲಿ ಸರಕಾರ ಹಾಗೂ ಶಿಕ್ಷಣ ಇಲಾಖೆಗಳು ಚಿಂತಿಸಬೇಕಾಗಿದೆ; ಕಾರ್ಯಪ್ರವೃತ್ತವಾಗಬೇಕಿದೆ.

## ೧೩. ಕನ್ನಡ ಪ್ರಯೋಗಶಾಲೆ

ವಿಜ್ಞಾನ, ಗಣಿತ ತರಗತಿಯಂತೆ ಕನ್ನಡವನ್ನು ಕೂಡಾ ಪ್ರಯೋಗಗಳ ಮೂಲಕ ಕಲಿಸಬಹುದಾಗಿದೆ. ನಾಟಕ, ಗಾಯನ, ಅಭಿನಯ, ನೃತ್ಯ, ರಂಗಕಲೆಗಳೇ ಮೊದಲಾದ ಭಾವಾಭಿವ್ಯಕ್ತಿ ಪ್ರಧಾನ ಚಟುವಟಿಕೆಗಳು, ಭಾಷಣ, ಆಶುಭಾಷಣ, ಚರ್ಚೆ, ಸಂವಾದ, ವಿಚಾರಗೋಷ್ಠಿ, ಸಮಸ್ಯಾಪೂರಣ, ಪ್ರಬಂಧ ಇತ್ಯಾದಿ ಮಾತುಗಾರಿಕೆ ಪ್ರಧಾನವಾದ ಚಟುವಟಿಕೆಗಳು, ಕವಿಗಳ ಚಿತ್ರ, ಅವರೊಂದಿಗೆ ನಡೆದ ಸಂವಾದದ ದೃಶ್ಯ, ಅವರ ಜೀವನ ಚರಿತ್ರೆಯ ದ್ರಶ್ಯಾವಳಿಗಳು, ಬರೆದ ಪುಸ್ತಕಗಳು, ಪುಸ್ತಕಗಳ ನೇರ ದರ್ಶನ, ಅದರೊಳಗಿನ ವಿಚಾರಗಳು, ಸಂದ ಪ್ರಶಸ್ತಿ–ಪುರಸ್ಕಾರ ವಿಚಾರಗಳು, ಕವಿಗಳ ಗೀತೆಗಳ ರಚನೆಗೆ ಪ್ರೇರಕವಾದ ಸನ್ನಿವೇಶಗಳ ಚಿತ್ರೀಕರಣದ ಭಾಗಗಳು, ನಾಡು ನುಡಿ ಸಂಸ್ಕೃತಿಗಳ ಕುರಿತ ದೃಶ್ಯಾವಳಿಗಳು, ಕವಿಕೃತಿಗಳ ಗಾಯನ, ಗಾಯನಕ್ಕೆ ತಕ್ಕ ನಾಟ್ಯ, ಅಭಿನಯ, ನಾಟಕಗಳ ದೃಶ್ಯಾವಳಿಗಳು, ಜನಪದ ಸಂಸ್ಕೃತಿಯ ದೃಶ್ಯಗಳನ್ನು ತೋರಿಸುತ್ತಾ ಬೋಧನೆಯಲ್ಲಿ ತೊಡಗಿಕೊಳ್ಳುವಿಕೆ, ಸುಂದರ ಕೈಬರಹದ ಮಾದರಿಗಳ ದೃಶ್ಯಾವಳಿಗಳು, ವ್ಯಕ್ತಿಚಿತ್ರಗಳ ದೃಶ್ಯಾವಳಿಗಳು, ರಾಜ್ಯದಲ್ಲಿ ಕನ್ನಡ ಭಾಷಾ ಕೌಶಲಗಳಿಗೆ ಸಂಬಂಧಿಸಿದಂತೆ ಸಾಧನೆ ಮಾಡಿದ ವಿದ್ಯಾರ್ಥಿಗಳ ನೇರ ಸಂದರ್ಶನ ಹಾಗೂ ಅವರ ಸಾಧನೆಗಳ ಚಿತ್ರಣವನ್ನು ಚಿತ್ರೀಕರಿಸಿದ ದೃಶ್ಯಗಳನ್ನು ಬಿತ್ತರಿಸುವಂಥಹ ಕನ್ನಡ ಪ್ರಯೋಗ ಶಾಲೆಗಳನ್ನು ನಿರ್ಮಿಸಬೇಕಿದೆ.

ಕನ್ನಡ ಪ್ರಯೋಗ ಶಾಲೆಯಲ್ಲಿ ಪ್ರೌಢಶಾಲಾ ಕನ್ನಡ ಭಾಷಾ ಅಂತರ್ಜಾಲ ತಾಣವನ್ನು ತೆರೆದು ವಿದ್ಯಾರ್ಥಿಗಳ ಸಾಧನೆಗಳನ್ನು ಅದಕ್ಕೆ ಪೂರಣ ಮಾಡಬೇಕು. ರಾಜ್ಯದ

ಪ್ರೌಢಶಾಲೆಗಳಲ್ಲಿನ ಅನೇಕ ಸಾಧಕ, ಕ್ರಿಯಾಶೀಲ, ಸೃಜನಶೀಲ ವಿದ್ಯಾರ್ಥಿಗಳ ಸಂದರ್ಶನ ಹಾಗೂ ಅವರ ಚಟುವಟಿಕೆಗಳ ದೃಶ್ಯಾವಳಿಗಳನ್ನು ಎಲ್ಲಾ ಶಾಲೆಗಳ ವಿದ್ಯಾರ್ಥಿಗಳು ನೋಡುವ ವ್ಯವಸ್ಥೆ ಮಾಡಬೇಕು.

**೧೪. ಶಾಲಾ ಉತ್ತಮೀಕರಣ ಯೋಜನೆ**

ಶಾಲೆಯ ಸಮಗ್ರ ಬೆಳವಣಿಗೆಯು ಕನ್ನಡ ಭಾಷಾ ಬೆಳವಣಿಗೆಯನ್ನೂ ಒಳಗೊಂಡಿದೆ. ಕನ್ನಡ ಭಾಷಾ ಬೆಳವಣಿಗೆಯೆಂದರೆ ಅದು ಶಾಲೆಯ ಸಮಗ್ರ ಬೆಳವಣಿಗೆಯ ಒಂದು ಭಾಗವಾಗಿದೆ. ಈ ನಿಟ್ಟಿನಲ್ಲಿ ಪ್ರೌಢಶಾಲಾ ಉತ್ತಮೀಕರಣ ಯೋಜನೆಯನ್ನು ಸರಕಾರ ಜಾರಿಗೆ ತರಬೇಕು. ಪ್ರೌಢಶಾಲೆಗಳನ್ನು ಆಧುನಿಕ ಸಮಾಜದ ನಿರೀಕ್ಷೆಗೆ ತಕ್ಕಂತೆ ಬೆಳೆಸುವ ನಿಟ್ಟಿನಲ್ಲಿ ಯೋಜನೆಗಳನ್ನು ಕಾರ್ಯರೂಪಕ್ಕಿಳಿಸಬೇಕು. ಕನ್ನಡ ಮಾಧ್ಯಮ ಪ್ರೌಢಶಾಲೆಗಳನ್ನು ಮಾದರಿ ಶಾಲೆಗಳಾಗಿ ರೂಪಿಸಬೇಕು.

❖ ಪ್ರತಿ ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಗಳಿಗೆ ಪ್ರತ್ಯೇಕವಾದ ಅಂತರ್ಜಾಲ ತಾಣವನ್ನು ತೆರೆಯಬೇಕು.
❖ ಶಾಲಾ ಸಾಧನೆ, ಸಮಸ್ಯೆ, ಗುರಿ ಹಾಗೂ ಅವಶ್ಯಕತೆಗಳನ್ನು ಅದರಲ್ಲಿ ಸೇರಿಸುತ್ತಿರಬೇಕು.
❖ ಪ್ರತೀ ಪ್ರೌಢಶಾಲೆಗಳ ಹಳೆ ವಿದ್ಯಾರ್ಥಿಗಳ ಮಾಹಿತಿಗಳನ್ನು ಸಂಗ್ರಹಿಸಬೇಕು. ಸದರಿ ಮಾಹಿತಿಯನ್ನು ಅಂತರ್ಜಾಲ ತಾಣಕ್ಕೆ ಸೇರಿಸುತ್ತಿರಬೇಕು.
❖ ಕನ್ನಡದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಸಂಘ ಸಂಸ್ಥೆಗಳನ್ನು ಶಾಲಾ ಉತ್ತಮೀಕರಣ ಯೋಜನೆಯ ಧ್ಯೇಯೋದ್ದೇಶಕ್ಕೆ ಬಳಸಿಕೊಳ್ಳಬೇಕು.
❖ ತನ್ನ ಸುತ್ತಮುತ್ತಲಿನ ಸಂಘ ಸಂಸ್ಥೆಗಳನ್ನು, ಜನಪದ ಸಂಸ್ಕೃತಿಯ ಬಳಗಗಳನ್ನು ಶಾಲಾ ಉತ್ತಮೀಕರಣ ಯೋಜನೆಯಡಿ ಬಳಸಿಕೊಳ್ಳಬೇಕು.
❖ ವಿದ್ಯಾರ್ಥಿಗಳಿಗೆ ಸಮಾಜದ, ಸಮುದಾಗಳ ಕಾರ್ಯಕ್ರಮಗಳಲ್ಲಿ ಭಾಗಿಯಾಗುವ, ನಾಯಕತ್ವದ, ಸಹಬಾಳ್ವೆಯ, ಹಾಗೂ ಸಮುದಾಯದ ಏಳ್ಗೆಯ ಬಗ್ಗೆ ಪ್ರಾಯೋಗಿಕ ಜ್ಞಾನವುಂಟಾಗುವಂತೆ ಮಾಡಬೇಕು.
❖ ಬರವಣಿಗೆಯಾಧಾರಿತವಾದ ಮೌಲ್ಯಮಾಪನಕ್ಕೆ ಬದಲಾಗಿ ವಿದ್ಯಾರ್ಥಿಗಳನ್ನು ತನ್ನ ಏಳ್ಗೆಯೊಂದಿಗೆ ಸಮಾಜದ ಏಳ್ಗೆಗೆ ಕಾರಣ ಕರ್ತರನ್ನಾಗಿಸುವ ಕಾರ್ಯಗಳಿಗೆ ಮಹತ್ವ ನೀಡಬೇಕು.
❖ ಪ್ರತೀ ಪ್ರೌಢಶಾಲೆಯಲ್ಲೂ ಅತ್ಯಾಧುನಿಕ ಕನ್ನಡ ಪ್ರಯೋಗಶಾಲೆಗಳನ್ನು ತೆರೆಯಬೇಕು.

- ಪ್ರತೀ ಪ್ರೌಢಶಾಲೆಯಲ್ಲೂ ಆಧುನಿಕ ದೃಕ್ ಶ್ರವಣೋಪಕರಣಗಳಿರಬೇಕು ಹಾಗೂ ಅವುಗಳ ಬಳಕೆ, ಉಪಯೋಗಿಸುವ ರೀತಿಯ ಕುರಿತು ಎಲ್ಲಾ ಶಿಕ್ಷಕರಿಗೆ ಹಾಗೂ ಪ್ರತೀ ತರಗತಿಯ ಆಸಕ್ತ ವಿದ್ಯಾರ್ಥಿಗಳಿಗೆ ತರಬೇತಿ ನೀಡಿರಬೇಕು.
- ಕಂಠಪಾಠಕ್ಕೆ ಪೂರಕವೂ, ಪ್ರೇರಕವೂ ಆಗಿರುವ ಪಠ್ಯಗಳಲ್ಲಿನ ಅನೇಕ ವಿಚಾರಗಳನ್ನು ತೆಗೆದು ಹಾಕಬೇಕು.
- ಪ್ರೌಢಶಾಲೆಯ ವಿದ್ಯಾರ್ಥಿಗಳಿಗೆ ಜೀವನಾನುಭವವನ್ನು, ಜೀವನಕ್ಕಾಗಿ ಕಲಿಕೆ ಎಂಬುದನ್ನು ತಿಳಿಸುವಂತೆ ಕನ್ನಡದ ಕಲಿಕಾ ವಾತಾವರಣವನ್ನು, ಬೋಧನಾ ಸನ್ನಿವೇಶಗಳನ್ನು ರೂಪಿಸಬೇಕು.
- ಪ್ರತೀ ಪ್ರೌಢಶಾಲೆಗಳಲ್ಲಿ ಶಾಲಾ ಕೈತೋಟಗಳನ್ನು ವಿದ್ಯಾರ್ಥಿಗಳಿಂದ ರೂಪಿಸಬೇಕು.
- ಸರಕಾರಿ ಹಾಗೂ ಅನುದಾನಿತ ಕನ್ನಡ ಮಾಧ್ಯಮ ಪ್ರೌಢಶಾಲೆಗಳಿಗೆ ಆಧುನಿಕ ಪೀಠೋಪಕರಣಗಳು, ಗಣಕಯಂತ್ರಗಳು ಹಾಗೂ ಗ್ರಂಥಾಲಯಗಳನ್ನು ಒದಗಿಸಬೇಕು.
- ಕರಿಹಲಗೆಯ ಬದಲಿಗೆ ಬಹೂಪಯೋಗಿ ವರ್ಣದ ಹಲಗೆಗಳನ್ನು, ಪರದೆ(screen)ಗಳನ್ನು, ಪ್ರೋಜೆಕ್ಟರ್‌ಗಳನ್ನು ಬಳಸಬೇಕು. ಪ್ರತೀ ವಿದ್ಯಾರ್ಥಿಗೆ ಅತ್ಯಾಧುನಿಕ ಶ್ರವಣ ಸಾಧನ(earphone)ಗಳನ್ನು ತರಗತಿಗಳಲ್ಲಿ ಪೂರೈಸಬೇಕು. ಗಣಕಯಂತ್ರಗಳ ಮೂಲಕ ಹಲವು ವಿಚಾರಗಳನ್ನು ಕೇಳಿಸಬೇಕು. ಹೆಚ್ಚು ವಿದ್ಯಾರ್ಥಿಗಳನ್ನು ಏಕಕಾಲದಲ್ಲಿ ಅಭಿಪ್ರೇರಿಸಲು ಇದು ಅತ್ಯಂತ ಸಹಾಯಕ.
- ಶಾಲಾ ದತ್ತು ಯೋಜನೆಗಳ ಆಂದೋಲನಗಳನ್ನು ಹಮ್ಮಿಕೊಳ್ಳಬೇಕು. ರೋಟರಿ, ಲಯನ್ಸ್, ಯುವಕ ಮಂಡಲಗಳು, ರಾಜ್ಯ, ರಾಷ್ಟ್ರ ಹಾಗೂ ಅಂತಾರಾಷ್ಟ್ರೀಯ ಸಂಸ್ಥೆಗಳ ನೆರವನ್ನು ಶಾಲಾ ಮಟ್ಟದಲ್ಲಿ ಪಡೆಯಬಹುದು.
- ಸ್ಥಳೀಯ ಸಂಪನ್ಮೂಲ ವ್ಯಕ್ತಿಗಳ ಸಹಾಯದಿಂದ ಕನ್ನಡ ಭಾಷಾ ಕಲಿಕೆಗೆ ಪೂರಕವಾಗುವ ನಾಟಕ, ರಂಗಕಲೆ, ಜಾನಪದ, ಗಮಕ, ಸಂಗೀತ, ನೃತ್ಯ ಮೊದಲಾದ ತರಗತಿಗಳನ್ನು ನಡೆಸಬೇಕು.
- ಬಹು ಮುಖ್ಯವಾಗಿ ಮಕ್ಕಳಿಗೆ ವ್ಯಾಕರಣ, ಪ್ರಶ್ನೋತ್ತರಗಳ ಕಂಠಪಾಠ ತಪ್ಪಿಸಿ ಪರೀಕ್ಷಾ ಹೊರೆಯನ್ನು ಕಡಿಮೆ ಮಾಡಬೇಕು. ಅಂಕಗಳ ಒತ್ತಡವನ್ನು ಇಳಿಸಬೇಕು. ವಿದ್ಯಾರ್ಥಿಗಳ ಸಮಗ್ರ ಅಭಿವೃದ್ಧಿಯನ್ನು ಮೌಲ್ಯಮಾಪನ ಮಾಡಬಹುದಾದ ಮೌಲ್ಯಮಾಪಕ ವ್ಯವಸ್ಥೆಯನ್ನು ರೂಪಿಸಬೇಕು.
- ಕರ್ನಾಟಕದ ಚಾಮರಾಜನಗರ ಜಿಲ್ಲೆಯಲ್ಲಿ ವಿದ್ಯಾಂಕುರ ಅಥವಾ ಶಿಕ್ಷಣ ಗುಣಮಟ್ಟದ ಉತ್ತಮೀಕರಣ ಯೋಜನೆಯು ಕಾರ್ಯ ನಿರ್ವಹಿಸುತ್ತಿದೆ. ಪಠ್ಯಕ್ರಮ, ಶಾಲೆ ಮತ್ತು ಶಿಕ್ಷಕರ ವೃತ್ತಿ ಕೌಶಲ್ಯ ವಿಕಾಸದ ಕ್ಷೇತ್ರಗಳಲ್ಲಿ ಶಿಕ್ಷಣ ಗುಣಮಟ್ಟದ

ಪ್ರಶ್ನೆಗಳ ಮೇಲೆ ಗಮನ ಕೇಂದ್ರೀಕರಿಸುತ್ತಿದೆ. ೨೦೦೨ರಿಂದಲೂ ಈ ಯೋಜನೆಯು ಕಲೆ ಮತ್ತು ಭಾಷಾ ಪಠ್ಯಕ್ರಮ, ಸಮಗ್ರ ಶಾಲಾ ಅಭಿವೃದ್ಧಿ ಮತ್ತು ಸಾಮೂಹಿಕ ತೊಡಗುವಿಕೆ, ಸುಧಾರಿತ ಶಿಕ್ಷಕ ಶಿಕ್ಷಣ ಹಾಗೂ ಕ್ಲಸ್ಟರ್, ಬ್ಲಾಕ್ ಮತ್ತು ಡಯಟ್‌ಗಳಿಂದ ವೃತ್ತಿಪರತೆಯ ವೃದ್ಧಿಗೆ ಸಹಕಾರ– ಈ ಮೊದಲಾದ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸಿದೆ. ಈ ರೀತಿಯ ಅನೇಕ ಕಾರ್ಯಕ್ರಮಗಳು ಎಲ್ಲೆಡೆ ನಡೆಯಬೇಕಿದೆ.

❖ ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಗಣಕ ಪರಿಷತ್ತು, ಕನ್ನಡಾಭಿವೃದ್ಧಿ ಪ್ರಾಧಿಕಾರ, ಕನ್ನಡ ಕಾವಲು ಸಮಿತಿ, ಕನ್ನಡ ವಿಶ್ವವಿದ್ಯಾಲಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವುಗಳ ಸಹಯೋಗದೊಂದಿಗೆ ಕನ್ನಡಕ್ಕೆ ಸಂಬಂಧಿಸಿದ ಅನೇಕ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕು. ಶಾಲಾ ದತ್ತು ಯೋಜನೆಗಳ ಆಂದೋಲನಗಳನ್ನು ಹಮ್ಮಿಕೊಳ್ಳಬೇಕು. ರೋಟರಿ, ಲಯನ್ಸ್, ಯುವಕ ಮಂಡಲಗಳು, ರಾಜ್ಯ, ರಾಷ್ಟ್ರ ಹಾಗೂ ಅಂತಾರಾಷ್ಟ್ರಿಯ ಸಂಸ್ಥೆಗಳ ನೆರವನ್ನು ಶಾಲಾ ಮಟ್ಟದಲ್ಲಿ ಪಡೆಯಬಹುದು.

ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ಸಿಕ್ಕಿದ ಹಿನ್ನೆಲೆಯಲ್ಲಿ ಭಾಷಾ ಅಭಿವೃದ್ಧಿಗಾಗಿ ಲಭಿಸಿದ ಹಣದಲ್ಲಿ ಒಂದಷ್ಟು ಮೊತ್ತವನ್ನು ಪ್ರೌಢಶಾಲಾ ಹಂತದ ವಿದ್ಯಾರ್ಥಿಗಳ ಕನ್ನಡ ಕಲಿಕಾ ಕಾರ್ಯಕ್ರಮಗಳಿಗಾಗಿಯೂ ಬಳಸಿಕೊಂಡರೆ ಕನ್ನಡದ ಅಭಿವೃದ್ಧಿಯು ತಳಮಟ್ಟದಿಂದ ಅರಂಭಗೊಂಡಂತಾಗುತ್ತದೆ.

# ಅಧ್ಯಾಯ - ೭

## ಅನುಬಂಧಗಳು

೭.೧. ಕನ್ನಡ ಭಾಷಾ ಕಲಿಕೆಗೆ ಸಂಬಂಧಿಸಿದಂತೆ ಇದುವರೆಗಿನ ಕೆಲವು ಅಧ್ಯಯನಗಳು

೭.೨. ಸಂದರ್ಶಿಸಿದ ಶಾಲೆಗಳ ಜಿಲ್ಲಾವಾರು ವಿವರ

೭.೩. ಮಾಹಿತಿದಾರರ ವಿವರ

೭.೪. ಕ್ಷೇತ್ರಕಾರ್ಯದ ಪ್ರಶ್ನಾವಳಿಗಳು

೭.೫. ಕ್ಷೇತ್ರಕಾರ್ಯದ ಚಟುವಟಿಕೆಗಳ ವಿವರ

ಅ) ಆಶುಭಾಷಣ ವಿಷಯಗಳು

ಆ) ಅಭಿನಯ ವಿಷಯಗಳು

ಇ) ಉಕ್ತಲೇಖನದ ವಾಕ್ಯಗಳು

ಈ) ಓದುವಿಕೆಯ ವಾಕ್ಯಗಳು

೭.೬. ಮೌಲ್ಯಮಾಪನ ತಖ್ತೆಗಳು

೭.೭. ಆಕರ ಗ್ರಂಥಗಳು

೭

# ಅನುಬಂಧಗಳು

## ೭.೧ ಕನ್ನಡ ಭಾಷಾ ಕಲಿಕೆಗೆ ಸಂಬಂಧಿಸಿದಂತೆ ಇದುವರೆಗಿನ ಕೆಲವು ಅಧ್ಯಯನಗಳು

- ಗಜಾನನ ಶರ್ಮ.,೨೦೦೪. **"ಮಕ್ಕಳ ಕನ್ನಡ ನಾಟಕ ಮತ್ತು ರಂಗಭೂಮಿ ಒಂದು ಅಧ್ಯಯನ"** ಹಂಪಿ ಕನ್ನಡ ವಿಶ್ವವಿದ್ಯಾಲಯ.
- ಚಲಪತಿ., ೨೦೧೦,**"ಕನ್ನಡ ಭಾಷಾ ಕಲಿಕೆಯ ಪಠ್ಯಗಳು ಮತ್ತು ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳು"** ಹಂಪಿ ಕನ್ನಡ ವಿಶ್ವವಿದ್ಯಾಲಯ, ಮಾರ್ಗದರ್ಶಕರು: ಡಾ. ಅಶೋಕಕುಮಾರ ರಂಜೇರ.
- ನಾಗರಾಜ ಚಿಂತ್ರಪಳ್ಳಿ., ೨೦೧೦,**"ಕನ್ನಡ ಕಲಿಕೆಯ ಸಮಸ್ಯೆಗಳು ಒಂದು ಅಧ್ಯಯನ"** (ಬಳ್ಳಾರಿ ಜಿಲ್ಲೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳನ್ನು ಅನುಲಕ್ಷಿಸಿ) ಹಂಪಿ ಕನ್ನಡ ವಿಶ್ವವಿದ್ಯಾಲಯ, ಮಾರ್ಗದರ್ಶಕರು: ಡಾ.ಡಿ. ಪಾಂಡುರಂಗಬಾಬು.
- ಪುಟ್ಟಸ್ವಾಮಿ.ಎನ್., ೨೦೦೭, **"ಹಿರಿಯ ಪ್ರಾಥಮಿಕ ಶಾಲಾ ಶಿಕ್ಷಣದ ಮೂಲಕ ಕನ್ನಡ ಭಾಷಾ ಸಾಮರ್ಥ್ಯಗಳ ಸಾಧನೆ"** ಮೈಸೂರು ವಿಶ್ವವಿದ್ಯಾನಿಲಯ, ಮಾರ್ಗದರ್ಶಕರು: ಡಾ.ಜಿ.ಎಚ್. ಪಾರ್ವತಮ್ಮ.
- ಪೂರ್ಣಿಮಾ.ಟಿ.ಸಿ., ೨೦೦೨,**"ಆಧುನಿಕ ಸಂವಹನ ಮಾಧ್ಯಮಗಳು ಮತ್ತು ಕನ್ನಡ ಅಭಿವೃದ್ಧಿ"** ಹಂಪಿ ಕನ್ನಡ ವಿಶ್ವವಿದ್ಯಾಲಯ.
- ಪ್ರಕಾಶ. ಬಿ., ೨೦೦೯,**"ದಕ್ಷಿಣ ಕನ್ನಡದ ಪ್ರಾಥಮಿಕ ಮತ್ತು ಪ್ರೌಢಶಾಲಾ ಕನ್ನಡ ಪಠ್ಯಪುಸ್ತಕಗಳ ರಾಚನಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸ್ವರೂಪಗಳ ಅಧ್ಯಯನ"**. ಮಂಗಳೂರು ವಿಶ್ವವಿದ್ಯಾನಿಲಯ. ಮಂಗಳೂರು.
- ಬಸವರಾಜ ವಿ., ೨೦೦೩, **"ನವೋದಯ ವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಲ್ಲಿ ಅಧಿಕ ಸಾಧಕರ ಮತ್ತು ಅಪೂರ್ಣ ಸಾಧಕರ ಮೇಲೆ ಪ್ರಭಾವ ಬೀರುವ ಮನೋ ಸಾಮಾಜಿಕ ಅಂಶಗಳ ತೌಲನಿಕ ಅಧ್ಯಯನ"** ಸ್ನಾತಕೋತ್ತರ ಶಿಕ್ಷಣ ಸಂಶೋಧನ ವಿಭಾಗ, ಬಿ.ಇ.ವಿ ಶಿಕ್ಷಣ ಮಹಾವಿದ್ಯಾಲಯ, ದಾವಣಗೆರೆ.
- ಭೀಮಣ್ಣ ಮಹಾದೇವಪ್ಪ.,೨೦೦೮,**"ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು"** (ಗುಲಬರ್ಗಾ ಜಿಲ್ಲೆಯ ಉರ್ದು ಭಾಷಿಕ ಪ್ರೌಢಶಾಲಾ ಮಕ್ಕಳನ್ನು ಅನುಲಕ್ಷಿಸಿ) ಹಂಪಿ ಕನ್ನಡ ವಿಶ್ವವಿದ್ಯಾಲಯ, ಮಾರ್ಗದರ್ಶಕರು: ಡಾ.ಪಿ.ಮಹಾದೇವಯ್ಯ.

- ಮಹಾಬಲೇಶ್ವರ ರಾವ್., ೧೯೯೬, **"ಪ್ರೌಢಶಾಲಾ ರೇಡಿಯೋ ಕನ್ನಡ ಪಾಠಗಳು: ಒಂದು ಮೌಲ್ಯ ಮಾಪನ"** ಮಂಗಳೂರು ವಿಶ್ವವಿದ್ಯಾನಿಲಯ ಮಾರ್ಗದರ್ಶಕರು: ಪ್ರೊ.ಯು.ಪಿ.ಉಪಾಧ್ಯಾಯ.
- ಮಂಜುಳ ಎನ್.ಕೆ., ೨೦೧೦, **"ಮಕ್ಕಳಲ್ಲಿ ವಾಕ್ಯ ರಚನಾ ನಿಯಮಗಳ ಬೆಳವಣಿಗೆ"** (ಕನ್ನಡ ಮಾತೃಭಾಷೆಯ ಮಕ್ಕಳನ್ನು ಅನುಲಕ್ಷಿಸಿ) ಹಂಪಿ ಕನ್ನಡ ವಿಶ್ವವಿದ್ಯಾಲಯ, ಮಾರ್ಗದರ್ಶಕರು: ಡಾ.ಕೆ.ವಿ.ನಾರಾಯಣ.
- ವಾಗೀಶ್ ಎನ್.ಎಂ., ೨೦೧೦, **"ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯ ಪುಸ್ತಕಗಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನ"** (ಪ್ರಚಲಿತ ಪ್ರಥಮ ಕನ್ನಡ ಭಾಷಾ ಪಠ್ಯ ಪುಸ್ತಕಗಳನ್ನು ಅನುಲಕ್ಷಿಸಿ) , ಹಂಪಿ ಕನ್ನಡ ವಿಶ್ವವಿದ್ಯಾಲಯ, ಮಾರ್ಗದರ್ಶಕರು: ಡಾ. ಅಶೋಕಕುಮಾರ.
- ವಿಜಯಕುಮಾರ್.ಎಸ್., ೧೯೯೭, **"ಸಾಮಾಜಿಕವಾಗಿ ಹಿಂದುಳಿದ ವಿವಿಧ ಪಂಗಡಗಳಲ್ಲಿರುವ ಪ್ರೌಢಶಾಲಾ ವಿದ್ಯಾರ್ಥಿಗಳ ವೃತ್ತಿ ಆಸಕ್ತಿಗಳು ಮತ್ತು ವಿಷಯ ಆಯ್ಕೆಗಳು"** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.ಮಾರ್ಗದರ್ಶಕರು: ಡಾ.ಎ.ಎಸ್. ರಾಘವಕುಮಾರಿ.
- ವೀರಾಕ್ಷಿ., ೨೦೧೦ **"ಕರ್ನಾಟಕದಲ್ಲಿ ಭಾಷಾ ಶಿಕ್ಷಣ ಮತ್ತು ಮಾಧ್ಯಮದ ವಾಗ್ವಾದಗಳು"** (ಪ್ರಾಥಮಿಕ ಶಿಕ್ಷಣದ ಕನ್ನಡ ಮಾಧ್ಯಮವನ್ನು ಅನುಲಕ್ಷಿಸಿ), ಹಂಪಿ ಕನ್ನಡ ವಿಶ್ವವಿದ್ಯಾಲಯ, ಮಾರ್ಗದರ್ಶಕರು: ಡಾ. ಅಶೋಕಕುಮಾರ ರಂಜೇರ.
- ಶಿವಸ್ವಾಮಿ ಎಚ್.ಎಸ್.,೧೯೯೦, **"ಪದವಿ ತರಗತಿಗಳಲ್ಲಿ ಕನ್ನಡ ಭಾಷಾ ಸಾಹಿತ್ಯ ಕಲಿಕೆ: ಒಂದು ವಿವೇಚನೆ"** ಮಂಗಳೂರು ವಿಶ್ವವಿದ್ಯಾನಿಲಯ, ಮಾರ್ಗದರ್ಶಕರು: ಡಾ.ಯು.ಪಿ.ಉಪಾಧ್ಯಾಯ.
- ಸುರೇಶ್ ಪಿ.ಎಸ್., ೨೦೦೮, **"ಪ್ರೌಢಶಾಲಾ ವಿದ್ಯಾರ್ಥಿಗಳ ಮೌಲ್ಯಗಳ ಆಯ್ಕೆ ಮತ್ತು ಸಂಬಂಧಿತ ಪರಿವರ್ತ್ಯಗಳು"**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಮಾರ್ಗದರ್ಶಕರು: ಡಾ.ವೈ.ಎನ್.ಶ್ರೀಧರ್,
- ಸೋಮಕ್ಕ ಎಂ., ೨೦೧೦, **"ಲಂಬಾಣಿ ಮಕ್ಕಳ ಕನ್ನಡ ಕಲಿಕೆಯ ಸಮಸ್ಯೆಗಳು"** (ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿನ ಪ್ರಾಥಮಿಕ ಶಾಲಾ ಮಕ್ಕಳನ್ನು ಅನುಲಕ್ಷಿಸಿ) ಹಂಪಿ ಕನ್ನಡ ವಿಶ್ವವಿದ್ಯಾಲಯ, ಮಾರ್ಗದರ್ಶಕರು: ಡಾ.ಪಿ.ಮಹಾದೇವಯ್ಯ.

## ೭.೨ ಸಂದರ್ಶಿಸಿದ ಶಾಲೆಗಳ ಜಿಲ್ಲಾವಾರು ವಿವರ

೧) ಉಡುಪಿ
ಅ) ಸರಕಾರಿ ಪ್ರೌಢಶಾಲೆ, ಸಂತೇಕಟ್ಟೆ, ೩೮ ಕಲ್ಲೂತ್ತುರು, ಬ್ರಹ್ಮಾವರ ತಾಲೂಕು.
ಆ) ಸರಕಾರಿ ಪ್ರೌಢಶಾಲೆ, ಗುಜ್ಜಾಡಿ, ಬೈಂದೂರು ತಾಲೂಕು.

೨) ಉತ್ತರ ಕನ್ನಡ
ಅ) ಸರಕಾರಿ ಪ್ರೌಢಶಾಲೆ, ಅಖೇವು, ಅಂಕೋಲಾ ತಾಲೂಕು.
ಆ) ಸರಕಾರಿ ಪ್ರೌಢಶಾಲೆ, ಅಮಾದಳ್ಳಿ, ಕಾರವಾರ ತಾಲೂಕು.

೩) ಕೊಪ್ಪಳ
ಅ) ಸರಕಾರಿ ಪ್ರೌಢಶಾಲೆ, ಅಗೋಲಿ, ಗಂಗಾವತಿ ತಾಲೂಕು.
ಆ) ಸರಕಾರಿ ಪ್ರೌಢಶಾಲೆ, ಚಲಗೇರ, ಕುಷ್ಟಗಿ ತಾಲೂಕು.

೪) ಕೋಲಾರ
ಅ) ಸರಕಾರಿ ಪ್ರೌಢಶಾಲೆ, ಬಾದಾಮಕ್ಕನಹಳ್ಳಿ, ಬಂಗಾರಪೇಟೆ ತಾಲೂಕು.
ಆ) ಸರಕಾರಿ ಪ್ರೌಢಶಾಲೆ, ಬೊಡೇನಹಳ್ಳಿ, ಕೆ.ಜಿ.ಎಫ್. ತಾಲೂಕು.

೫) ಗುಲ್ಬರ್ಗಾ
ಅ) ಸರಕಾರಿ ಪ್ರೌಢಶಾಲೆ, ಅನೂರು, ಅಫಜಲ್ ಪುರ ತಾಲೂಕು.
ಆ) ಸರಕಾರಿ ಪ್ರೌಢಶಾಲೆ, ಅಲಂಗ, ಅಲಂದ್ ತಾಲೂಕು.

೬) ಚಿಕ್ಕಮಗಳೂರು
ಅ) ಸರಕಾರಿ ಪ್ರೌಢಶಾಲೆ, ಅಲಘಟ್ಟ, ಬೀರೂರು, ತಾಲೂಕು.
ಆ) ಸರಕಾರಿ ಪ್ರೌಢಶಾಲೆ, ಅಗಳಗಂಡಿ, ಕೊಪ್ಪ ತಾಲೂಕು.

೭) ಚಿತ್ರದುರ್ಗ
ಅ) ಸರಕಾರಿ ಪ್ರೌಢಶಾಲೆ, ಅಬ್ಬೇನಹಳ್ಳಿ, ಚಳ್ಳಕೆರೆ ತಾಲೂಕು.
ಆ) ಸರಕಾರಿ ಪ್ರೌಢಶಾಲೆ, ಆಲೂರು, ಹಿರಿಯೂರು ತಾಲೂಕು.

